# ಕನ್ನಡ ಪದಕೋಶದ ಬೆಳವಣಿಗೆ : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸಲಾದ ಮಹಾಪ್ರಬಂಧ)


ಸಂಶೋಧಕ

ರವೀಂದ್ರ

ಮಾರ್ಗದರ್ಶಕ

ಡಾ. ಸಾಂಬಮೂರ್ತಿ

ಪ್ರಾಧ್ಯಾಪಕರು,

ಕನ್ನಡ ಭಾಷಾಧ್ಯಯನ ವಿಭಾಗ





ಭಾಷಾ ನಿಕಾಯ

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯

# ಕನ್ನಡ ಪದಕೋಶದ ಬೆಳವಣಿಗೆ : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸಲಾದ ಮಹಾಪ್ರಬಂಧ)

ಸಂಶೋಧಕ

**ರವೀಂದ್ರ**

ಮಾರ್ಗದರ್ಶಕ

**ಡಾ. ಸಾಂಬಮೂರ್ತಿ**

ಪ್ರಾಧ್ಯಾಪಕರು,

ಕನ್ನಡ ಭಾಷಾಧ್ಯಯನ ವಿಭಾಗ



**ಭಾಷಾ ನಿಕಾಯ**

**ಕನ್ನಡ ಭಾಷಾಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ – ೫೮೩ ೨೭೬

೨೦೧೯

## ಮಾರ್ಗದರ್ಶಕರ ದೃಢೀಕರಣ

ಶ್ರೀ **ರವೀಂದ್ರ** ಇವರು ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ **"ಕನ್ನಡ ಪದಕೋಶದ ಬೆಳವಣಿಗೆ : ಚಾರಿತ್ರಿಕ ಅಧ್ಯಯನ"** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ, ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಈ ಸಂಶೋಧನಾ ಮಹಾಪ್ರಬಂಧದ ಯಾವುದೇ ಭಾಗವು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕ

**ಡಾ. ಸಾಂಬಮೂರ್ತಿ**
ಪ್ರಾಧ್ಯಾಪಕ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

ಸ್ಥಳ : ವಿದ್ಯಾರಣ್ಯ

ದಿನಾಂಕ : 19,09,2019

## ಸಂಶೋಧಕರ ಘೋಷಣಾ ಪತ್ರ

**"ಕನ್ನಡ ಪದಕೋಶದ ಬೆಳವಣಿಗೆ : ಚಾರಿತ್ರಿಕ ಅಧ್ಯಯನ"** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ, ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಕನ್ನಡ ಭಾಷಾಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಸಾಂಬಮೂರ್ತಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

**ರವೀಂದ್ರ**
ಸಂಶೋಧಕ
ಕನ್ನಡ ಭಾಷಾಧ್ಯಯನ ವಿಭಾಗ.
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩೨೭೬

ಸ್ಥಳ : ವಿದ್ಯಾರಣ್ಯ

ದಿನಾಂಕ :

# ಪರಿವಿಡಿ

# ಅಧ್ಯಾಯ : ಒಂದು

೧.೧ ಅಧ್ಯಯನದ ಉದ್ದೇಶ

೧.೨ ವ್ಯಾಪ್ತಿ,

೧.೩ ಸ್ವರೂಪ

೧.೪ ವೈಧಾನಿಕತೆ

೧.೫ ಮಹತ್ವ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮಹತ್ವ ಮತ್ತು ಸ್ವರೂಪ

ಪದಕೋಶವು ಪ್ರತಿಯೊಂದು ಭಾಷೆಯ ಶ್ರೀಮಂತಿಕೆಯ ಕುರುಹಾಗಿರುವ ಹಾಗೆಯೇ ಪ್ರತಿಯೊಂದು ಭಾಷೆಯ ಜೀವಾಳವೂ ಆಗಿರುತ್ತದೆ. ಪ್ರತಿಯೊಂದು ಭಾಷೆಯು ತನ್ನದೇ ಆದ ಪದಕೋಶವನ್ನು ಹೊಂದಿರುತ್ತದೆ. ಒಂದು ಭಾಷೆ ಬೆಳವಣಿಗೆಯಾಗಿದೆ ಎನ್ನುವುದರ ಅರ್ಥವೇ ಆ ಭಾಷೆಯ ಪದಕೋಶ ಬೆಳವಣಿಗೆ ಹೊಂದಿದೆ ಎನ್ನುವುದಾಗಿರುತ್ತದೆ. ಪದಕೋಶದ ಬೆಳವಣಿಗೆ ಎಂದರೇ ಹೊಸ ಹೊಸ ಪದಗಳ ರಚನೆ ಆಗುವುದು ಎಂದರ್ಥ. ಹೀಗೆ ಪದಗಳು ಸೇರಿ ಪದಕೋಶ ಬೆಳವಣಿಗೆ ಹೊಂದುವ ಮೂಲಕ ಭಾಷೆಯ ಬೆಳವಣಿಗೆ ಆಗುತ್ತದೆ. ಯಾವುದೇ ಭಾಷೆಯು ಬೆಳವಣಿಗೆ ಎನ್ನುವುದು ಪದಕೋಶದ ಬೆಳವಣಿಗೆಯು ಮೇಲೆ ಹೆಚ್ಚು ಅವಲಂಬಿತವಾಗಿರುತ್ತದೆ. ಕನ್ನಡದಲ್ಲಿ ಪದಕೋಶದ ಬೆಳವಣಿಗೆಯ ಮೇಲೆ ನಡೆದ ಅಧ್ಯಯನಗಳು ಕಡಿಮೆಯೇ ಹೀಗಾಗಿ ಅಧ್ಯಯನಗಳ ಅವಶ್ಯಕತೆ ತುಂಬಾಯಿದೆ.

ಭಾಷೆ ನಿರಂತರ ಪರಿವರ್ತನಶೀಲವಾದುದ್ದು. ಬೆಳೆಯುವುದು, ಮಾರ್ಪಾಡಾಗುವುದೇ ಜೀವಂತ ಭಾಷೆಯ ಲಕ್ಷಣ ಕೂಡ. ಹಂಬೋಲ್ಟ್ ಎಂಬ ಭಾಷಾವಿಜ್ಞಾನಿಯು "Language is not a substance of finished work but action and it is the ever prepared labor of the mind to utilize articulated sound to express thought" ಎನ್ನುತ್ತಾನೆ. ಯಾವುದಾದರೊಂದು ರಾಜಕೀಯ ಇಲ್ಲವೆ ಸಾಮಾಜಿಕ ಕ್ರಾಂತಿಯಾದಾಗ ಅಥವಾ ಯಾವುದೇ ಅನ್ಯ ಭಾಷೆಯ, ಅನ್ಯ ಸಂಸ್ಕೃತಿಯ ಅಥವಾ ಹೊಸ ತಂತ್ರಜ್ಞಾನದ ಸಂಪರ್ಕ ಒದಗಿದಾಗ ಈ ಬೆಳವಣಿಗೆಯ ಪ್ರಗತಿ ಹೆಚ್ಚುತ್ತದೆ. ಹೊಸಪದ ಸೃಷ್ಟಿ ಅಥವಾ ಅನ್ಯ ಭಾಷೆಗಳಿಂದ ಸ್ವೀಕರಿಸಿಕೊಂಡ ಪದಗಳಿಂದ ಪದಕೋಶದ ಬೆಳವಣಿಗೆಯಾಗುತ್ತದೆ.

ಭಾಷೆಯ ನಿಜಸ್ವರೂಪದ ಬದಲಾವಣೆಗೆ ಆಂತರಿಕ ಅಥವಾ ಬಾಹ್ಯ ವಿಷಯಗಳು ಕಾರಣವಾಗಿರಬಹುದು. ಬಾಹ್ಯ ಅಥವಾ ಹೊರಗಿನ ಕಾರಣಗಳಲ್ಲಿ ಮುಖ್ಯವಾಗಿ ಸೌಲಭ್ಯಾಕಾಂಕ್ಷೆ ಒಂದು. ಮಾನವರು ಒಂದು ಕೆಲಸವನ್ನು ಮಾಡಲು ಆರಂಭಿಸಿದಾಗ, ಅದರ ಕಾಲಾವಧಿಯನ್ನು ಪರಿಶೀಲಿಸಿ, ಅಲ್ಪಕಾಲದಲ್ಲಿ ಹೆಚ್ಚು ಕೆಲಸವನ್ನು ಬೇಗನೆ ಮಾಡಲು ಬಯಸುತ್ತಾರೆ. ಈ ದಿಶೆಯಲ್ಲಿ ಹಲವು ಸಂಕ್ಷಿಪ್ತ ವಿಧಾನಗಳನ್ನು ಬಳಸಿಕೊಳ್ಳುತ್ತಾನೆ. ಇದರಿಂದಾಗಿ, ಸಮಯ, ಶ್ರಮ ಉಳಿತಾಯವಾಗುತ್ತದೆ. ಇದಕ್ಕೆ ಸೌಲಭ್ಯಾಕಾಂಕ್ಷೆ ಎಂದು ಕರೆಯುತ್ತಾರೆ. ಈ ಅಂಶವೇ ಭಾಷೆಯ ವಿಷಯದಲ್ಲೂ ಆಗುತ್ತದೆ. ಜನರು ದೊಡ್ಡದಾದ ಪದಗಳನ್ನು, ಹೆಸರುಗಳನ್ನು ಸಂಕ್ಷಿಪ್ತವಾಗಿ ಕರೆಯಲು ಬಯಸುತ್ತಾರೆ.

ಒಂದು ಭಾಷೆಯು ಬೇರೆ ಭಾಷೆಗಳ ಸಂಪರ್ಕ ಹೊಂದಿದಾಗ ಅಥವಾ ಒಂದು ಭಾಷೆ ಆಡುವವರು ಅನ್ಯಭಾಷಿಕರ ಸಂಪರ್ಕ ಹೊಂದಿದಾಗ, ಭಾಷೆಯಲ್ಲಿ ಬದಲಾವಣೆಗಳು ಕಂಡು ಬರುತ್ತವೆ. ಇದಲ್ಲದೆ ಶಿಕ್ಷಣ ಪದ್ಧತಿ, ಗಡಿಪ್ರದೇಶದಲ್ಲಿ ಆಗುವ ಭಾಷಾ ಸಂಕರದಿಂದಾಗಿ, ಸಮೂಹ ಸಂವಹನ ಮಾಧ್ಯಮಗಳಿಂದಾಗಿ ಮತ್ತು ರಾಜಕೀಯ ಕಾರಣದಿಂದಾಗಿ ಹೀಗೆ ಅನೇಕ ಕಾರಣಗಳಿಂದ ಯಾವುದೇ, ಭಾಷೆಯಲ್ಲಿ ಬದಲಾವಣೆಗಳು ಕಂಡುಬರುತ್ತವೆ.

ಭಾಷೆಯಲ್ಲಾಗುವ ಬೆಳವಣಿಗೆಯನ್ನು ಧಾರವಾಡಕರ ರಾ.ಯ., (೧೯೯೮:೧೦೭) ಅವರು ಸ್ಥೂಲವಾಗಿ ಮೂರು ವಿಧವಾಗಿ ವಿಂಗಡಿಸುತ್ತಾರೆ.

೧) ಸಾಕೂತ ಪ್ರಯತ್ನದ ಮೂಲಕ ಮಾಡಿಕೊಂಡ ಮಾರ್ಪಾಡು ಇಲ್ಲವೆ ಬೆಳವಣಿಗೆ

೨) ನಾವು ಅರಿಯದೆಯೇ ನಡೆದಿರುವ ಪ್ರಕ್ರಿಯೆಗಳು

೩) ಅನ್ಯಭಾಷೆ ಇಲ್ಲವೆ ಅನ್ಯ ಸಂಸ್ಕೃತಿಯ ಸಂಪರ್ಕ ಮೂಲಕವಾಗಿ ಬಂದ ಹೊಸ ಶಬ್ದಗಳು

ಇವು ಒಂದು ಭಾಷೆಯು ಬೆಳವಣಿಗೆ ಹೊಂದಲು ಮಾನದಂಡವಾಗಿವೆ. ಇದು ಜಗತ್ತಿನ ಎಲ್ಲಾ ಭಾಷೆಗಳಿಗೂ ಅನ್ವಯಿಸುತ್ತದೆ.

ಕನ್ನಡದ ಹಳಮೆ ಬಗ್ಗೆ ಯೋಚಿಸುವಾಗ ಇಂದು ಎರಡು ಸಾವಿರದ ಐದುನೂರು ವರ್ಷಗಳಷ್ಟು ಹಳೆಯ ಭಾಷೆ ಎನ್ನುವುದಕ್ಕೆ ನಿರ್ವಿವಾದವಾದ ಸಾಕ್ಷ್ಯಾಧಾರಗಳು ಸಿಗುತ್ತವೆ. ಆದರೆ ಕನ್ನಡದ ಕೆಲವು ಭಾಷಾವಿಜ್ಞಾನಿಗಳು(ಡಿ.ಎನ್. ಶಂಕರ ಬಟ್, ಬಸವರಾಜ ಕೋಡಗುಂಟಿ...) ಕನ್ನಡವು ಐದುಸಾವಿರ ವರ್ಷಗಳಷ್ಟು ಹಿಂದೆಯೆ ಇದ್ದ ಬಗ್ಗೆ ಆಧಾರ ಸಹಿತ ಪುನಃರೂಪಿಸಬಹುದು ಎನ್ನುತ್ತಾರೆ. ಅದೇನೆ ಇದ್ದರೂ ಕನ್ನಡವು ಕೂಡ ನಿರಂತರ ಬೆಳವಣಿಗೆ ಕಂಡುಕೊಳ್ಳುತ್ತಿರುವ ಭಾಷೆಗಳಲ್ಲಿ ಒಂದು. ಪ್ರಾರಂಭ ಕಾಲದಿಂದಲೂ ಕನ್ನಡ ಅನೇಕ ಬದಲಾವಣೆಗಳ ಮೂಲಕ ತನ್ನ ಬೆಳವಣಿಗೆಯನ್ನು ಕಂಡುಕೊಂಡಿದೆ.

ಕನ್ನಡದ ಬೆಳವಣಿಗೆಯನ್ನು ಸ್ಥೂಲವಾಗಿ ಗುರ್ತಿಸುವುದಾದರೆ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಹೀಗೆ ವಿಭಾಗಿಸಲಾಗಿದೆ. ಒಂದೊಂದು ಕಾಲಘಟ್ಟದಲ್ಲಿ ಅನ್ಯಸಂಸ್ಕೃತಿ ಮತ್ತು ಅನ್ಯಭಾಷೆಗಳ ಗಟ್ಟಿ ಪ್ರಭಾವಕ್ಕೆ ಒಳಗಾಗಿರುವುದು ಕಾಣಬಹುದು. ಸುಮಾರು ೧೪-೧೫ನೆಯ ಶತಮಾನದಲ್ಲಿ ಈ ಬದಲಾವಣೆಯು ಹೆಚ್ಚು ಕಂಡುಬಂದು ೧೬ನೆಯ ಶತಮಾನದಿಂದ ಇದರ ಪ್ರಗತಿ ಇನ್ನೂ ಹೆಚ್ಚಾಯಿತು.

ಕನ್ನಡದ ಆರಂಭ ಹಂತದ ಪದಕೋಶದ ಮೇಲೆ ಸಂಸ್ಕೃತದ ದಟ್ಟ ಪ್ರಭಾವವಿದ್ದುದನ್ನು ಗುರುತಿಸಲಾಗಿದೆ. ಅನಂತರದ ಸುಮಾರು ಸಾವಿರಾರು ವರ್ಷಗಳು ಸಂಸ್ಕೃತದೊಡನೆಯೇ ಕನ್ನಡ ಪಯಣ ನಡೆಸಿದೆ. ಸಂಸ್ಕೃತದ ಈ ರೀತಿಯ ಸಾಂಗತ್ಯಕ್ಕೆ ಸಂಸ್ಕೃತವು ಕನ್ನಡಕ್ಕಿಂತ ಮೊದಲೇ ಕಾವ್ಯ, ನಾಟಕ, ವ್ಯಾಕರಣ ಇತ್ಯಾದಿ ಪ್ರಕಾರಗಳಲ್ಲಿ ಸಾಕಷ್ಟು ಪುಷ್ಟಿಗೊಂಡು ಬೆಳೆದಿದ್ದು ಕಾರಣವಾಗಿರಬಹುದು. ಈ ಕಾಲಘಟ್ಟದಲ್ಲಿ ಕನ್ನಡವು ಸಂಸ್ಕೃತವನ್ನು ಆಶ್ರಯಿಸಿಕೊಂಡಿದ್ದರಿಂದ ಅಲ್ಲಿಯ ಕಾವ್ಯ, ನಾಟಕ, ವ್ಯಾಕರಣ ಮಾದರಿಗಳನ್ನು ಕನ್ನಡವು ಅನುಸರಿಸಿ ಇದಕ್ಕೆ ಬೇಕಾದ ಭಾಷಿಕ ಅಂಶಗಳನ್ನು ಸಂಸ್ಕೃತದಿಂದಲೇ ಪಡೆದುಕೊಳ್ಳುವ ಅನಿವಾರ್ಯತೆ ಉಂಟಾಯಿತು. ಈ ಕಾರಣದಿಂದ ಅಲ್ಲಿನ ಹೆಚ್ಚಿನ ಪದಕೋಶವು ಕನ್ನಡ ಪದಕೋಶಕ್ಕೆ ಸ್ವೀಕರಣವಾಯಿತು. ಅಂದರೆ ಕನ್ನಡ ಪದಕೋಶ ಸಂಸ್ಕೃತದ ಪಾರಿಭಾಷಿಕ ಪದಗಳನ್ನೆಲ್ಲ ಬಳಸಿಕೊಂಡಿತು. ಸಂಸ್ಕೃತದಿಂದ ನೇರವಾಗಿ ಕನ್ನಡಕ್ಕೆ ಬಂದಿರುವುದು ಒಂದು ಬಗೆಯಾದರೆ, ಪ್ರಾಕೃತ ಮೂಲಕ ಬಂದಂತಹದ್ದು ಇನ್ನೊಂದು ಬಗೆಯಾಗಿದೆ.

ಮಧ್ಯಕಾಲೀನ ಕನ್ನಡದಲ್ಲಿ ಬಸವಾದಿ ಶರಣರು ಕನ್ನಡವನ್ನು ಜನ ಸಾಮಾನ್ಯರಿಗೆ ತಲುಪಿಸುವ ಕೆಲಸ ಮಾಡಿದರು. ಆನಂತರದ ದಿನಗಳಲ್ಲಿ ಕರ್ನಾಟಕಕ್ಕೆ ಮಹ್ಮದೀಯರ ಆಗಮನ ಕನ್ನಡದ ದಿಕ್ಕನ್ನೇ ಬದಲಾಯಿಸಿತು. ಉತ್ತರ ಕರ್ನಾಟಕವನ್ನು ಶಾಹಿ ಸುಲ್ತಾನರು ಆಳಿದರೆ, ದಕ್ಷಿಣ ಕರ್ನಾಟಕವನ್ನು ಹೈದರ ಮತ್ತು ಟಿಪ್ಪು ಸುಲ್ತಾನ ಆಳಿದರು. ಮಹ್ಮದಿಯರ ಪ್ರಭಾವದಿಂದ ಮುಸ್ಲಿಂ ಅಡಳಿತ ಮತ್ತು ಸೇನೆಗೆ ಸಂಬಂಧಿಸಿದ ಪದಗಳೆಲ್ಲ ಕನ್ನಡಕ್ಕೆ ಬಂದವು. ಈ ಕಾಲದಲ್ಲಿ ಫೌಜದಾರ್, ಅಮಲ್ದಾರ, ಶಿರಸ್ತೆದಾರ, ತಹಸೀಲ್ದಾರ ಇತ್ಯಾದಿ ಇಂತಹ ಅನೇಕ ಪದಗಳು ಉರ್ದು, ಪಾರಸಿ, ಅರಬ್ಬಿ ಭಾಷೆಗಳಿಂದ ಸ್ವೀಕರಣವಾಗಿ ಕನ್ನಡ ಪದಕೋಶ ಸೇರಿಕೊಂಡವು.

ಯಾವಾಗ ಭಾರತಕ್ಕೆ ಬ್ರಿಟಿಶರ ಆಗಮನವಾಯಿತೊ ಆಗ ಕನ್ನಡವು ಇಂಗ್ಲಿಶನ ಪ್ರಭಾವಕ್ಕೂ ಒಳಗಾಯಿತು. ಹೀಗಾಗಿ ಕನ್ನಡಕ್ಕೆ ಇಂಗ್ಲಿಶನ ಅನೇಕ ಪದಗಳು ಸ್ವೀಕರಣವಾಗಿ ಬಂದವು. ಅಲ್ಲದೆ ಆಧುನಿಕ ಕನ್ನಡವು ಅನೇಕ ಇಂಗ್ಲಿಶನ ಅಧ್ಯಯನ ಕ್ರಮಗಳನ್ನು ಬಳಸಿಕೊಂಡು ಮುಂದುವರಿಯಿತು. ಹೀಗಾಗಿ ಅನೇಕ ಪಾರಿಭಾಷಿಕ ಪದಗಳು ಕನ್ನಡಕ್ಕೆ ಸೇರಿಕೊಂಡವು.

ಕನ್ನಡದಲ್ಲಿ ಸ್ವೀಕರಿಸಿಕೊಂಡ ಪದಗಳನ್ನು ಬಳಸುವಲ್ಲಿ ಅನುಸರಿಸಿದ ಮಾರ್ಗವೆಂದರೆ, ಒಂದು, ಮೂಲಪದವನ್ನು ಯಥಾವತ್ತಾಗಿ ಬಳಸುವುದು ಅಥವಾ ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಬಳಸುವುದು. ಕೆಲವು ಭಾಷೆಯ ಪದಗಳನ್ನು ಅರ್ಥ ವ್ಯತ್ಯಾಸದೊಂದಿಗೆ ಬಳಸಿಕೊಳ್ಳುತ್ತಿದೆ.

ಉದಾ: ಲಾರಿ, ಬಸ್ಸು, ಕಾರು ಮೊಬೈಲು, ಮೋಟಾರು, ಧಿರಿಸು ಇತ್ಯಾದಿ

ಅರ್ಥ ವ್ಯತ್ಯಾಸಕ್ಕೆ: ಪೆದ್ದ, ಕರಾರ, ಬೇವರ್ಶಿ, ಪುಡಾರಿ ಇತ್ಯಾದಿ

ಎರಡನೆಯದು ಮೂಲ ಪದದ ಬದಲಾಗಿ ಕನ್ನಡದ ಪದವೊಂದು ಸೃಷ್ಟಿಸುವುದು.

ಪ್ರಿನ್ಸಿಪಾಲ್> ಪ್ರಾಚಾರ್ಯ

ಇಂಜಿನಿಯರ್> ಅಭಿಯಂತರರು

ಪೋಲಿಸ್> ಆರಕ್ಷಕರು

ಕಂಪ್ಯೂಟರ್> ಗಣಕಯಂತ್ರ ಇತ್ಯಾದಿ

ಸ್ವೀಕರಿಸಿದ ಪದದ ಬದಲಾಗಿ ಕನ್ನಡದಲ್ಲಿ ಪರ್ಯಾಯ ಪದವೊಂದನ್ನು ಸೃಷ್ಟಿಸುವಾಗ ಹೆಚ್ಚಾಗಿ ಸಂಸ್ಕೃತದ ಪದಗಳನ್ನೆ ಬಳಸಿಕೊಂಡು ಪದ ಸೃಷ್ಟಿ ಮಾಡಲಾಗಿದೆ. ಇದು ಉರ್ದು, ಮರಾಠಿ ಮತ್ತು ಇತರೆ ಎಲ್ಲಾ ಭಾಷೆಯಿಂದ ಸ್ವೀಕರಿಸಿದ ಪದಗಳಲ್ಲೂ ಈ ಪ್ರಕ್ರಿಯೆ ಕಂಡುಬರುತ್ತದೆ. ನಮ್ಮ ಶಿಕ್ಷಣ ಪದ್ಧತಿ ಮತ್ತು ಉದ್ಯೋಗದ ಪರಿಕಲ್ಪನೆಗಳು ಹೆಚ್ಚಾಗಿ ಪಾಶ್ಚಿಮಾತ್ಯ ಮಾದರಿಯನ್ನೆ ಅನುಸರಿಸುತ್ತಿರುವುದರಿಂದ ಶಿಕ್ಷಣ, ಉದ್ಯೋಗದಲ್ಲಿನ ಸ್ಥಾನಮಾನ, ಕೆಲಸದ ಸಮಯ, ನಿಯಮಕ್ಕೆ ಸಂಬಂಧಿಸಿದ ಪರಿಭಾಷೆಗಳೆಲ್ಲಾ ಅಲ್ಲಿಂದಲೇ ಸ್ವೀಕರಣಗೊಂಡಿವೆ.

ಭಾರತದಲ್ಲಿ ಘಟಿಸಿದ ಅನೇಕ ಸತ್ಯಾಗ್ರಹ, ಸ್ವಾತಂತ್ರ ಹೋರಾಟ, ಜಾತಿವ್ಯವಸ್ಥೆಯ ವಿರುದ್ಧದ ಹೋರಾಟಗಳಂತಹ ಘಟನೆಗಳಿಂದ ನಿರ್ಮಾಣಗೊಂಡ ಪದಕೋಶವು ಆ ಹೋರಾಟದೊಂದಿಗೆ ಕನ್ನಡ ಪದಕೋಶಕ್ಕೂ ಸೇರಿಕೊಂಡವು. ಈ ಮೇಲೆ ವಿವರಿಸಿದ ಎಲ್ಲಾ ಸಂಗತಿಗಳ ಕುರಿತ ಭಾಷಿಕ ಅಧ್ಯಯನಗಳ ಅಗತ್ಯತೆ ಇದೆ ಮತ್ತು ಈ ಎಲ್ಲಾ ವಿಷಯಗಳೊಂದಿಗೆ ಕನ್ನಡ ಭಾಷೆಯ ಪ್ರತಿಕ್ರಿಯೆ ಏನು ಎನ್ನುವ ನಿಟ್ಟಿನಲ್ಲಿ ಅಧ್ಯಯನಗಳು ಬಂದರೆ ಕನ್ನಡದಲ್ಲಿ ರಚನೆಗೊಂಡ ಹೊಸ ಹೊಸ ಪದಗಳ ಮತ್ತು ಸ್ವೀಕೃತ ಪದಕೋಶದ ಸ್ವರೂಪ ಮತ್ತು ಪದಗಳ ರಾಚನಿಕ ವಿನ್ಯಾಸವನ್ನು ಚೆನ್ನಾಗಿ ಅರಿಯಬಹುದು. ಈ ರಾಚನಿಕ ವಿನ್ಯಾಸಗಳು ಕನ್ನಡ ಭಾಷೆಯ ಪದಕೋಶದ ಮೇಲೆ ಹೇಗೆ ಪ್ರಭಾವ ಬೀರಿವೆ ಅಥವಾ ಕನ್ನಡ ಭಾಷೆಯ ಪದ ರಚನೆಯು ಸ್ವೀಕೃತ ಪದಗಳನ್ನು ತನ್ನ ರಚನೆಗೆ ಹೇಗೆ ಒಗ್ಗಿಸಿಕೊಂಡಿದೆ ಎನ್ನುವುದು ಅರಿವಿಗೆ ಬರಬಹುದು.

ಯಾವುದೇ ಭಾಷೆಯ ವೃದ್ಧಿ ಕೇವಲ ಸ್ವೀಕರಣದಿಂದ ಮಾತ್ರ ನಡೆಯಲಾರದು, ಅದು ಯಾವಾಗಲೂ ತನ್ನ ಮೂಲ ಪದಗಳೊಂದಿಗೆ ಕ್ರಿಯಾಶೀಲವಾಗಿರುತ್ತದೆ. ಹೀಗೆ ಕನ್ನಡವು ಕೂಡಾ ತನ್ನ ಮೂಲ ಪದಗಳೊಂದಿಗೆ ಕ್ರಿಯಾಶೀಲತೆ ಮೆರೆದಿದ್ದನ್ನು ಕಾಣಬಹುದು. ಅದರ ಫಲವಾಗಿ ಕನ್ನಡದಲ್ಲಿ ಅನೇಕ ಹೊಸ ಪದಗಳು ಸೃಷ್ಟಿಯಾಗಿವೆ. ಮತ್ತು ಕನ್ನಡದಲ್ಲಿ ಹೊಸದಾಗಿ ಹುಟ್ಟಿಕೊಂಡ ವಲಯಗಳಲ್ಲಿಯ ಪದಗಳ ಬದಲಾಗಿ ಕನ್ನಡದಲ್ಲಿ ಲಂಚಾಯಣ, ಹಸಿರೋತ್ಸವ ಇತ್ಯಾದಿ ಇಂತಹ ಅನೇಕ ಹೊಸಪದಗಳನ್ನು ರಚಿಸಿಕೊಳ್ಳಲಾಗಿದೆ. ಮತ್ತು ಬ್ಯಾಟಿಗ, ಫೋನಾಯಿಸು ಇತ್ಯಾದಿ ಇಂತಹ ರಚನೆಗಳಲ್ಲಿ ಸ್ವೀಕರಿಸಿಕೊಂಡ ಪದಗಳು ಕನ್ನಡದ ಮೂಲ ಪ್ರತ್ಯಯಗಳೊಂದಿಗೆ ಸೇರಿ ಹೊಸ

ರಚನೆ ಹೊಂದುತ್ತಿರುವುದನ್ನು ಕಾಣಬಹುದಾಗಿದೆ. ಈ ಮಾದರಿಯ ಪದಗಳ ಸ್ವರೂಪದ ಕುರಿತ ಅಧ್ಯಯನಗಳು ಕನ್ನಡದಲ್ಲಿ ನಡೆದಿಲ್ಲ.

ಇದಲ್ಲದೇ ಅನೇಕ ಸ್ವೀಕೃತ ಪದಗಳನ್ನು(ಮುಖ್ಯವಾಗಿ ಇಂಗ್ಲಿಶನಿಂದ ಸ್ವೀಕರಿಸಿದ ಪದಗಳು) ಕನ್ನಡಕ್ಕೆ ಅನುವಾದಿಸಿಕೊಳ್ಳುವಾಗ ಅನೇಕ ಹೊಸ ರಚನೆಗಳು ಹುಟ್ಟಿಕೊಂಡಿವೆ. ಇಂತ ರಚನೆಗಳ ಬಗ್ಗೆಯೂ ಅಧ್ಯಯನಗಳ ಕೊರತೆ ಇದೆ. ಈ ಮೇಲಿನ ಎಲ್ಲ ಮಾದರಿಯ ಹೊಸ ಮಾದರಿಯ ಪದಗಳ ರಚನೆಯ ಕುರಿತು ಅಧ್ಯಯನಗಳು ಮುಖ್ಯವಾಗಿ ನಡೆಯಬೇಕಿದೆ.

ದೇಸಿಯ ಪದಕೋಶದಲ್ಲಾಗಿರುವ ಬದಲಾವಣೆಯನ್ನು ಕೆ.ವಿ.ನಾರಾಯಣ ಅವರು(೨೦೧೦) ಹೀಗೆ ಗುರುತಿಸುತ್ತಾರೆ:

೧. ಪದ ಮತ್ತು ಪದಾರ್ಥಗಳೆರಡು ಬಳಕೆಯಿಂದ ದೂರ ಸರಿದಿರುವುದು

ಉದಾ: ಒರಳು,

ಬೀಸಕಲ್ಲು,

ಮೊರ ಇತ್ಯಾದಿ

೨. ಹೊಸ ಸಾಧ್ಯತೆಗಳೊಂದಿಗೆ ಪದ ಉಳಿಸಿಕೊಂಡಿರುವುದು

ಇಂದು ದೇಹದ ಭಾಗ ಗುರುತಿಸುವ 'ಗುಂಡಿಗೆ' ಪದ ಬಳಕೆ ನಿಂತು ಹೋದರೂ ಧೈರ್ಯದ(ಆ ಕೆಲಸ ಮಾಡಲು ಗುಂಡಿಗೆ ಬೇಕು) ಬದಲಾಗಿ ಬಳಕೆಯ ಸಾಧ್ಯತೆಯಿಂದ ಉಳಿದಿರುವುದು

೩. ಹಳೆಯ ಪದಗಳನ್ನು ಬೇರೆ ಪರಿಸರದಲ್ಲಿ ಲಕ್ಷಣಾರ್ಥದಲ್ಲಿ ಬಳಸುವುದು

ಉದಾ: ಕೂಳು>ಅನ್ನ>ರೈಸ್

೪. ಪದಾರ್ಥದ ಗೈರುಹಾಜರಿಯಲ್ಲಿ ಉಂಟಾದ ಶೂನ್ಯವನ್ನು ತುಂಬಲು ಬಂದ ಹೊಸ ಪದಾರ್ಥವನ್ನು ಗುರುತಿಸಲು ಹೊಸಪದ ಸೃಷ್ಟಿಸಿಕೊಂಡಿರುವುದು.

ಉದಾ: ಬೀಸೊಕಲ್ಲು – ಗಿರಣಿ

ಒರಳು – ಗ್ರೈಂಡರು ಇತ್ಯಾದಿ(ಈ ಹಂತದಲ್ಲಿ ಹೆಚ್ಚಾಗಿ ಸ್ವೀಕರಣ ಮಾಡಿದ್ದೆ ಹೆಚ್ಚು)

ಇಂದು ದೇಸಿ ಪದಗಳು ತಮ್ಮ ನಿಶ್ಚಿತ ನೆಲೆಯಿಂದ ಸಾಮಾನ್ಯ ಪದಕೋಶಕ್ಕೆ ಬಂದು ಬಳಕೆಗೊಳ್ಳುತ್ತಿವೆ. ಇವು ತಮ್ಮ ಮೂಲದ ಅರ್ಥವನ್ನು ಎಲ್ಲಾ ಕಡೆಯು ಪ್ರತಿನಿಧಿಸುತ್ತವೆ ಎನ್ನುವುದು ಕಷ್ಟ. ಅವು ಲಕ್ಷಣಾರ್ಥದೊಂದಿಗೆ ಬಳಕೆಗೊಳ್ಳಬಹುದು ಇಲ್ಲಾ ಸಮಾನ ಹೋಲಿಕೆಯಿರುವ ವೃತ್ತಿಗಳಲ್ಲಿ ಬಳಕೆಗೊಳ್ಳುತ್ತವೆ.

ಉದಾ: ಕುಸ್ತಿಗೆ ಸಂಬಂಧಿಸಿದ ಪದಗಳು ರಾಜಕೀಯ ಅಥವಾ ಎರಡು ಎದಿರು-ಬದಿರಾದ ವ್ಯಕ್ತಿ, ವಿಷಯಗಳ ನಡುವಿನ ಪೈಪೋಟಿಯನ್ನು ವಿವರಿಸಲು ಬಳಕೆಯಾಗುತ್ತಿರುವುದನ್ನು ಕಾಣಬಹುದು.

ಅನೇಕ ವೃತ್ತಿಗಳು ಕಣ್ಮರೆಯಾಗುತ್ತಿರುವ ಈ ಕಾಲಘಟ್ಟದಲ್ಲಿ ಆ ವೃತ್ತಿಗೆ ಸಂಬಂಧಿಸಿದ ಪದಕೋಶವು ಇತರ ವಲಯಗಳಲ್ಲಿ ಬಳಕೆಯಾಗುತ್ತಿರುವುದನ್ನು ಕಾಣಬಹುದು. ಉದಾಹರಣೆಗೆ ನೋಡುವುದಾದರೆ ಕೃಷಿಗೆ ಸಂಬಂಧಿಸಿದ ಪದಗಳು ಇಂದು ಹಲವು ವಲಯಗಳನ್ನು ಪ್ರತಿನಿಧಿಸುತ್ತಿವೆ.

*ದಾಸ್ಯದ ನೊಗವನ್ನು ಕಿತ್ತೊಗೆದರು.*

*ಸಾಹಿತ್ಯದಲ್ಲಿ ಕೃಷಿ ಮಾಡಿದ್ದಾರೆ.*

*ಮೆತ್ತಗೆ ಮಾತಾಡಿ ಇದ್ದ ಬದ್ದ ಹಣವನ್ನೆಲ್ಲ ನುಣ್ಣಗೆ ಬೋಳಿಸಿದನು.*

ವೃತ್ತಿಗೆ ಸಂಬಂಧಿಸಿದಂತೆ ಸಾಮಾಜಿಕ ದೃಷ್ಟಿಕೋನಗಳು ಬದಲಾದಂತೆ ಕನ್ನಡ ಪದಕೋಶ ಸಾಮಾನ್ಯ ವಲಯದೆಡೆಗೆ ಪಲಾಯನ ಮಾಡಿರುವುದನ್ನು ಗುರುತಿಸಬಹುದು.

ಉದಾಹರಣೆಗೆ: *ಕ್ಷೌರಿಕ ವೃತ್ತಿಗೆ ಸಂಬಂಧಿಸಿದ **ಬೋಳಿಸು, ಕೆರೆ, ನುಣ್ಣಗೆಮಾಡು** ಇಂಥ ಪದಗಳು ಆ ವೃತ್ತಿ ಕೀಳು ಎನ್ನುವ ಕಲ್ಪನೆ ಇಟ್ಟುಕೊಂಡು ಅಲ್ಲಿನ ಪದಕೋಶ ಕಳ್ಳತನ, ದರೋಡೆ, ಮೋಸಗಳಂಥಹ ಪ್ರವೃತ್ತಿಗಳನ್ನ ಪ್ರತಿನಿಧಿಸುತ್ತಿವೆ. ಇವು ಅಲ್ಲದೆ ಗಾಳಹಾಕು, ಬಲೆಬೀಸು, ಓರೆಹಚ್ಚು, ಬಣ್ಣಕಟ್ಟು ಇತ್ಯಾದಿ ಪದಗಳನ್ನು ಉದಾಹರಿಸಬಹುದು.*

ಕನ್ನಡದಲ್ಲಿ ಒಂದು ಹೊಸ ಬೆಳವಣಿಗೆಯೊಂದು ಕಂಡುಬರುತ್ತಿದೆ, ಅದೇನೆಂದರೆ ಕೆಲವು ಮಾಧ್ಯಮಗಳು ಆಯಾ ಸಂದರ್ಭದ ಆ ಆವಶ್ಯಕತೆಗಾಗಿ ಹೆಚ್ಚಿನ ತಾರ್ಕಿಕತೆ ನೋಡದೆ ಪದರಚನೆ*(ಪೆನ್‌ಗೆ, ಬ್ಯಾಟ್‌ಗೆ, ಟೆಕ್ಕಿಗ ಇತ್ಯಾದಿ)* ಮಾಡುತ್ತಿವೆ. ಇದಲ್ಲದೆ ಇತ್ತೀಚಿನ ದಿನಗಳಲ್ಲಿ ಕೆಲವು ಜಾಲತಾಣಗಳಲ್ಲಿ ಅನೇಕ ಇಂಗ್ಲಿಶ್ ಪರಿಭಾಷೆಗಳನ್ನು ಬಳಸುವಾಗ ಅಥವಾ ಇಂಗ್ಲಿಶ್ ಪದಗಳಿಗೆ ಅವುಗಳ ಮೂಲ ಅರ್ಥ ಗ್ರಹಿಸಿ ಅವುಗಳಿಗೆ ಕನ್ನಡದಲ್ಲಿ ಮೂಲ ಕನ್ನಡದ ಧಾತುಗಳನ್ನು ಬಳಸಿಕೊಂಡು ಪದಗಳನ್ನು ರಚಿಸುತಿದ್ದಾರೆ. ಇವುಗಳ ಬಗ್ಗೆ ಅಧ್ಯಯನಗಳ ಅವಶ್ಯಕತೆ ಇದೆ.

ಪದಕೋಶದಲ್ಲಾದ ಬೆಳವಣಿಗೆ ನೋಡುವಾಗ ಬೆಳವಣಿಗೆಯಾದ ವಲಯಗಳ ಬಗ್ಗೆ ಗಮನಹರಿಸುವುದು ಬಹುಮುಖ್ಯವಾದದ್ದಾಗಿದೆ. ಆಯಾ ಕಾಲಘಟ್ಟದ ಪರಿಸ್ಥಿತಿಗೆ ಅನುಗುಣವಾಗಿ ಸಾಮಾಜಿಕರ ಜೀವನದಲ್ಲಿ ಅವರ ಸಂವಹನದ ವಲಯಗಳು ಸೃಷ್ಟಿಯಾಗುವ ಅಥವಾ ಹಿನ್ನೆಲೆಗೆ ಸರಿಯುವ ಸ್ಥಿತಿಗಳು ಉಂಟಾಗುತ್ತದೆ. ಒಂದು ಕಾಲಘಟ್ಟದ ಅವಶ್ಯಕತೆ ಅಥವಾ ಆ ಕಾಲಘಟ್ಟದ ಜೀವನಕ್ರಮ ಪದ ಬಳಕೆಯ ವಲಯಗಳನ್ನು ಸೃಷ್ಟಿಸಿರುತ್ತದೆ. ಅದು ಕಾಲಾನುಕ್ರಮದಲ್ಲಿ ಬದಲಾಗುವ, ವಿಸ್ತಾರಗೊಳ್ಳುವ ಅಥವಾ ಬಳಕೆಯಿಂದ ಮರೆಯಾಗುವ ಸಂದರ್ಭಗಳು ಇರುತ್ತದೆ. ಈ ಸಂದರ್ಭಗಳ ಮೇಲೆ ಪದ ಬಳಕೆಯ ವಲಯಗಳು ನಿರ್ಧಾರವಾಗುತ್ತವೆ. ಕನ್ನಡ ಪದಕೋಶದ ಬೆಳವಣಿಗೆಯನ್ನು ಗಮನಿಸಿದಾಗ ಯಾವ ಯಾವ ವಲಯಗಳಲ್ಲಿ ಪದಗಳ ಬೆಳವಣಿಗೆ ಹೇಗಿದೆ ಎನ್ನುವುದು ಕನ್ನಡ ಸಮಾಜದ ಆಲೋಚನಾ ಕ್ರಮದಲ್ಲಾದ ಬೆಳವಣಿಗೆಯನ್ನು ಪ್ರತಿನಿಧಿಸುತ್ತದೆ. ಪ್ರತಿ ವಲಯದ

ಆಲೋಚನಾ ಕ್ರಮದಲ್ಲಾದ ಬೆಳವಣಿಗೆಯು ಆ ವಲಯದ ಪದಕೋಶದ ಮೇಲೆ ಪರಿಣಾಮ ಬೀರಿರುತ್ತದೆ. ಈ ಪರಿಣಾಮ ಬೀರುವಿಕೆಯು ಆ ವಲಯವು ವಿಸ್ತಾರಗೊಂಡಿದ್ದರೆ ಪದಕೋಶದ ಬೆಳವಣಿಗೆಯನ್ನು, ಸಂಕುಚಿತಗೊಂಡಿದ್ದರೆ ಪದಗಳು ಬಳಕೆಯಿಂದ ಹಿನ್ನೆಲೆಗೆ ಸರಿದಿರುವುದು ಗುರುತಿಸಬಹುದಾಗಿದೆ. ಹೀಗೆ ಪದಗಳಲ್ಲಿ ಆಗುವ ಏರಿಳಿತಗಳು ಪದಕೋಶದ ಗಣನೆಗೆ ಸಹಾಯಕವಾಗುತ್ತವೆ.

ಕರ್ನಾಟಕದ ಇತಿಹಾಸವನ್ನು(ಭಾರತ ಇತಿಹಾಸ ಕೂಡ) ಗಮನಿಸುತ್ತ ಬಂದಾಗ ಅನೇಕ ಬದಲಾವಣೆಗಳು ಸಂಭವಿಸಿವೆ. ಕರ್ನಾಟಕ(ಭಾರತ)ದ ಮೇಲೆ ಆದ ಅನೇಕ ವಿದೇಶಿ ಭಾಷಿಕರ ಆಕ್ರಮಣಗಳು ಅಥವಾ ವ್ಯಾಪಾರ ಸಂಪರ್ಕಗಳು ಜನ ಜೀವನದಲ್ಲಿ ಅನೇಕ ಬದಲಾವಣೆಗಳನ್ನು ತಂದಿದೆ. ೧೬ನೆಯ ಶತಮಾನದ ನಂತರದಲ್ಲಿ ಆಧುನಿಕತೆಯ ಪ್ರಭಾವಗಳು ಕನ್ನಡ(ಭಾರತ) ಜನಜೀವನದಲ್ಲಿ ಅನೇಕ ಹೊಸವಲಯಗಳ ಸೃಷ್ಟಿಗೆ ಕಾರಣವಾಗಿದೆ. ಈ ವಲಯಗಳಲ್ಲಿ ಪದಗಳ ಬೆಳವಣಿಗೆಯ ಸ್ವರೂಪ ಏನು ಈ ಬೆಳವಣಿಗೆಗೆ ಕಾರಣವೇನು ಎನ್ನುವುದು ಅಧ್ಯಯನದ ವಿಷಯವಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನ ನಡಿಯಬೇಕಿದೆ.

### ೧.೧ ಅಧ್ಯಯನದ ಉದ್ದೇಶ :

ಆರಂಭ ಕಾಲದಿಂದ ಇಲ್ಲಿಯವರೆಗೆ ಕನ್ನಡ ಪದಕೋಶ ಯಾವ ಯಾವ ಮಾದರಿಯಲ್ಲಿ ಬೆಳವಣಿಗೆ ಹೊಂದಿದೆ, ಅದರ ಸ್ವರೂಪ ಎಂತಹದ್ದು ಎನ್ನುವುದನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಕನ್ನಡ ಪದಕೋಶದ ಬಗ್ಗೆ ಮಾತನಾಡುವಾಗ ನಮಗೆ ಕಂಡುಬರುವ ಮುಖ್ಯ ಸಂಗತಿಗಳಲ್ಲಿ ಕನ್ನಡದಲ್ಲಿ ಸೇರಿಕೊಂಡಿರುವ ಅನ್ಯದೇಶಿಯ ಪದಗಳ ಸಂಖ್ಯೆ ಕೂಡಾ ಒಂದು. ಸ್ವೀಕರಣದಿಂದ ಕನ್ನಡ ಪದಕೋಶವು ಬೆಳವಣಿಗೆ ಹೊಂದಿದೆ. ಕನ್ನಡದಲ್ಲಿ ಸ್ವೀಕರಣ ಪದಗಳ ಸ್ವರೂಪವನ್ನು ಅರಿಯುವ ಪ್ರಯತ್ನದ ಒಂದಷ್ಟು ಅಧ್ಯಯನಗಳು ನಡೆದಿವೆ. ಅದರ ಸ್ವರೂಪವನ್ನು ಸಂಪೂರ್ಣವಾಗಿ ಅರಿಯುವುದು ಅಧ್ಯಯನದ ಉದ್ದೇಶವಾಗಿದೆ.

ಈವರೆಗಿನ ಅಧ್ಯಯನಗಳು ಕನ್ನಡದ ರಚನೆಯನ್ನು ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡವನ್ನು ಆಧಾರವಾಗಿಟ್ಟುಕೊಂಡು ವಿವರಿಸಿವೆ. ಕೆಲವು ಅಧ್ಯಯನಗಳು ಲೇಖನಗಳ ರೂಪದಲ್ಲಿ ಆಧುನಿಕ ಕನ್ನಡದ ಸ್ವರೂಪ ವಿವರಿಸುವ ಕೆಲಸ ಮಾಡಿವೆ. ಆದರೆ ಈ ಅಧ್ಯಯನಗಳು ಪದಕೋಶದ ದೃಷ್ಟಿಯಿಂದ ಕನ್ನಡ ಬೆಳವಣಿಗೆಯನ್ನು ಗಮನದಲ್ಲಿರಿಸಿಕೊಂಡದ್ದು ಕಡಿಮೆಯೆ, ಹೀಗಾಗಿ ಈ ಕಾಲಘಟ್ಟಗಳಲ್ಲಿ ಕನ್ನಡ ಪದಕೋಶದ ಸ್ವರೂಪ ಅರಿಯುವುದು ಉದ್ದೇಶವಾಗಿದೆ. ಆಧುನಿಕ ಕನ್ನಡವು ಪಾರಸಿ, ಅರಬ್ಬಿ, ಉರ್ದು, ಮರಾಠಿ ಮತ್ತು ಇಂಗ್ಲಿಶನಿಂದ ಹೇಗೆಲ್ಲ ಪ್ರಭಾವಕ್ಕೊಳಗಾಗಿದೆ ಅದು ತನ್ನ ಪದಕೋಶದ ಬೆಳವಣಿಗೆಗಾಗಿ ಅನುಸರಿಸಿದ ತಂತ್ರವೇನು? ಇವುಗಳ ಕುರಿತು ಅಧ್ಯಯನದ ಅವಶ್ಯಕತೆ ಇದೆ.

ಆಧುನಿಕ ಯುಗದಲ್ಲಿ ಕನ್ನಡ ಸಮಾಜ ಜಾಗತಿಕ ಸ್ಥಿತಿ ಹೊಂದುತ್ತಿರುವಾಗ, ಕನ್ನಡ ಸಮಾಜದ ಬಾಳುವೆಯಲ್ಲಾದ ಅನೇಕ ಬದಲಾವಣೆಯ ಫಲದಿಂದ ಕನ್ನಡ ಪದಕೋಶದಲ್ಲಿ ಗಮನಾರ್ಹ ಬದಲಾವಣೆಗಳಾಗಿವೆ. ಪದ, ಪ್ರತ್ಯಯ, ಅರ್ಥಗಳ ಸ್ಥಿತ್ಯಂತರವಾಗಿದೆ, ಈ ಕುರಿತ ಅಧ್ಯಯನಗಳಿಲ್ಲ ಮತ್ತು ಕನ್ನಡ ಪದಕೋಶ ಅನೇಕ ಹೊಸ ರಚನೆಗಳನ್ನು ತನ್ನದಾಗಿಸಿಕೊಂಡಿರುವ ಸಾಧ್ಯತೆಯಿದೆ. ಈ ರಚನೆಗಳನ್ನು ಅರಿಯುವ ಉದ್ದೇಶವನ್ನು ಈ ಅಧ್ಯಯನ ಒಳಗೊಂಡಿದೆ.

ಪದಕೋಶವು ಕೇವಲ ಪದಗಳ ಗುಂಪಾಗಿರುವುದಿಲ್ಲ ಅದು ತನ್ನೊಳಗೆ ಒಂದು ಭಾಷಿಕ ಸಮುದಾಯದ ಆಚಾರ-ವಿಚಾರ, ರೂಢಿ, ಸಂಪ್ರದಾಯ, ನಂಬಿಕೆ, ಜೀವನ ಪದ್ಧತಿಗಳಲ್ಲಿರುವ ಆಚರಣೆಗಳನ್ನು ಕಾಲದಿಂದ ಕಾಲಕ್ಕೆ ಮುಂದುವರಿಕೆಯಾಗುವಂತೆ ನೋಡಿಕೊಳ್ಳುತ್ತದೆ. ಹಾಗೆಯೇ ಪದಕೋಶವು ಒಂದು ಕಾಲದ ಜನರ ಜೀವನ ವಿಧಾನವನ್ನು ತಿಳಿಸುವಂತಹದ್ದಾಗಿರುತ್ತದೆ. ವಿವಿಧ ಕಾಲಘಟ್ಟಗಳ ಜನಜೀವನದಲ್ಲಿ ಆದ ಬದಲಾವಣೆಗಳು ಪದಕೋಶದ ಬೆಳವಣಿಗೆಗೆ ಕಾರಣವಾಗಿರುತ್ತವೆ. ಕನ್ನಡಿಗರ ಜೀವನಕ್ರಮದಲ್ಲಾದ ಈ ಬದಲಾವಣೆಗಳು ಅನೇಕ ಹೊಸ ಹೊಸ ವಸ್ತು ವಿಚಾರ, ವ್ಯವಹಾರಗಳ ಪ್ರವೇಶಕ್ಕೆ ಕಾರಣವಾಗಿದೆ. ಈ ಎಲ್ಲ ಸಂಗತಿಗಳು ಪದಕೋಶದ ಬೆಳವಣಿಗೆಗೆ ಹೇಗೆ ಕಾರಣವಾಗಿವೆ ಎನ್ನುವುದು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

ಕನ್ನಡವು ಕಾಲದಿಂದ ಕಾಲಕ್ಕೆ ಅನೇಕ ಭಾಷೆಗಳ ಪ್ರಭಾವಗಳಿಗೆ ಒಳಗಾಗಿದೆ. ಹೀಗೆ ಪ್ರಭಾವಕ್ಕೆ ಒಳಗಾದ ಭಾಷೆಗಳಿಂದ ತನ್ನ ಪದಕೋಶವನ್ನು ಬೆಳೆಸಿಕೊಂಡಿದೆ. ಬೇರೆ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿಕೊಳ್ಳುವಾಗ ಆ ಪದಗಳನ್ನು ಕನ್ನಡಕ್ಕೆ ಒಗ್ಗಿಸಿಕೊಳ್ಳಲು ಅನೇಕ ಮಾರ್ಪಾಟುಗಳನ್ನು ಮಾಡಿಕೊಳ್ಳಲಾಗಿದೆ. ಈ ಮಾರ್ಪಾಟುಗಳನ್ನು ಅರಿಯುವುದು ಮತ್ತು ಯಾವ ಯಾವ ಭಾಷೆಯ ಪದಗಳು ಯಾವ ಯಾವ ವಲಯದಲ್ಲಿ ಹೆಚ್ಚು ಸ್ವೀಕರಣಕ್ಕೆ ಒಳಗಾಗಿವೆ ಎನ್ನುವುದನ್ನು ಅರಿಯುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.

ಆಧುನಿಕ ಜೀವನ ಶೈಲಿಯಿಂದ ಕನ್ನಡದಲ್ಲಿ ಅನೇಕ ಹೊಸ ವಲಯಗಳು ಹುಟ್ಟಿಕೊಂಡಿವೆ. ಈ ವಲಯಗಳಲ್ಲಾದ ಪದಕೋಶದ ಸ್ವರೂಪ ಎಂತದ್ದು ಎನ್ನುವುದನ್ನು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

ಕನ್ನಡ ಪದಕೋಶದ ಬೆಳವಣಿಗೆಯನ್ನು ಗುರುತಿಸುವ ಹಿನ್ನೆಲೆಯಲ್ಲಿ ವಿವಿಧ ವಲಯಗಳಲ್ಲಿ ಬಳಕೆಯಲ್ಲಿರುವ ಪದಗಳು ಸ್ವೀಕರಣವೇ, ಹೊಸರಚನೆಯೇ ಎನ್ನುವುದನ್ನು ಗಮನಿಸುವುದು ಈ ಪ್ರಕ್ರಿಯೆಯ ಹಿಂದಿನ ತಂತ್ರಗಾರಿಕೆಯನ್ನು ಅರಿಯುವುದು ಉದ್ದೇಶಗಳಲ್ಲಿ ಒಂದಾಗಿದೆ.

ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣಗಳನ್ನು ವಿವಿಧ ಅಂಶಗಳ ಹಿನ್ನೆಲೆಯಲ್ಲಿ ಹಿನ್ನೆಲೆಯಲ್ಲಿ ಪರಿಶೀಲಿಸುವುದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಕನ್ನಡ ಪದಕೋಶವನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡುವ ಮೂಲಕ ಕನ್ನಡ ಸಮುದಾಯಗಳ ಮನೋಧರ್ಮಗಳನ್ನು ಗುರುತಿಸಬಹುದಾಗಿದೆ. ಪದಕೋಶವು ಒಂದು ಜನಾಂಗದ ಸಾಂಸ್ಕೃತಿಕ

ಮಹತ್ವವನ್ನು ಕಟ್ಟಿಕೊಡುವಂತದ್ದು ಆಗಿರುವುದರಿಂದ ಈ ಮೇಲಿನ ಉದ್ದೇಗಳನ್ನು ಹೊಂದಿ ಅಧ್ಯಯನ ನಡೆಸಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಯಾವುದೇ ಸಂಶೋಧನಾತ್ಮಕ ಅಧ್ಯಯನಗಳು ನಿರ್ದಿಷ್ಟ ಗುರಿಯನ್ನು ಸಾಧಿಸಬೇಕಾದರೆ ಅದಕ್ಕೊಂದು ವ್ಯಾಪ್ತಿ ಅತಿ ಆವಶ್ಯಕವಾಗಿರುತ್ತದೆ. ಹೀಗಾಗಿ ಈ ಅಧ್ಯಯನಕ್ಕೆ ಚಾರಿತ್ರಿಕವಾಗಿ ಕನ್ನಡವು ಬೆಳೆದು ಬಂದ ಕಾಲವನ್ನು, ಕನ್ನಡಕ್ಕೆ ಪದಗಳನ್ನು ಸ್ವೀಕರಿಸಿಕೊಂಡ ಭಾಷೆಗಳನ್ನು ಅಧ್ಯಯನದ ವ್ಯಾಪ್ತಿಯಾಗಿ ಪರಿಗಣಿಸಲಾಗಿದೆ. ಆದರೂ ನಡುಗನ್ನಡ, ಹೊಸಗನ್ನಡದ ಆವಧಿಯ ಪದಕೋಶದ ಬೇಳವಣಿಗೆಗೆ ಒತ್ತು ಕೊಡಲಾಗಿದೆ.

ಕನ್ನಡದಲ್ಲಿ ಪದಕೋಶದ ಬೆಳವಣಿಗೆ ಕುರಿತು ಅಧ್ಯಯನಗಳು ನಡೆದಿರುವುದು ಬಹಳ ವಿರಳ, ರಾಮಚಂದ್ರ ರಾವ್, ರಾಯ ಧಾರವಾಡಕರ್, ಕೆಂಪೆಗೌಡ ಕೆ. ಇವರನ್ನು ಹೊರತು ಪಡಿಸಿದರೆ ಶಂಕರ ಕೆದಿಲಾಯ, ಬಿ.ಜಿ. ಕನಕೇಶಮೂರ್ತಿ, ರವೀಂದ್ರ ಬಟಗೇರಿ ಇವರುಗಳು ಸ್ವೀಕರಣ ಪದಗಳ ಬಗ್ಗೆ ನಡೆಸಿರುವ ಸಂಶೋಧನಾತ್ಮಕ ಅಧ್ಯಯನಗಳು ಮಾತ್ರ ಈ ವಿಷಯದಲ್ಲಿ ನಡೆದ ಅಧ್ಯಯನಗಳಾಗಿರುವುದನ್ನು ಕಾಣಬಹುದು. ಇನ್ನುಳಿದಂತೆ ಪ್ರಸ್ತುತ ಅಧ್ಯಯನವೇ ಮೊದಲು ಎನ್ನಬಹುದು.

ಪದಕೋಶದ ಬೆಳವಣಿಗೆಯನ್ನು ಚಾರಿತ್ರಿಕ ಅಧ್ಯಯನ ಮಾದರಿಯಲ್ಲಿ ಕೈಗೊಂಡಿರುವ ಸಂಶೋಧನೆಗಳಲ್ಲಿ ಪ್ರಸ್ತುತ ಅಧ್ಯಯನವು ಮೊದಲನೆಯದು ಎಂಬುದು ವಿಶೇಷ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಹಲವು ಮಿತಿಗಳನ್ನು ಒಳಗೊಂಡಿದೆ. ಈ ಮಹಾಪ್ರಬಂಧದಲ್ಲಿ ಪದಕೋಶದ ಬೆಳವಣಿಗೆಯನ್ನು ವಿವಿಧ ವಲಯಗಳಾಗಿ ಗುರುತಿಸಿಕೊಂಡು, ಅಲ್ಲಿ ಆದ ಪದಗಳ ಬೆಳವಣಿಗೆ ಈ ಬೆಳವಣಿಗೆಗೆ ಕಾರಣಗಳೇನು, ಹೊಸರಚನೆಯ ಸಾಧ್ಯತೆಯನ್ನು ಅದರ ಸ್ವರೂಪದಿಂದ ಗುರುತಿಸುವುದು ಅಧ್ಯಯನದ ಪ್ರಮುಖ ಅಂಶಗಳೆಂದು ಗುರ್ತಿಸಿಕೊಂಡು ಅಧ್ಯಾಯ ಹಾಗೂ ಉಪಘಟಕಗಳಾಗಿ ವಿಭಾಗಿಸಿಕೊಳ್ಳಲಾಗಿದೆ.

ಅಧ್ಯಯನದಲ್ಲಿ ಚಾರಿತ್ರಿಕವಾಗಿ ಕನ್ನಡ ಪದಕೋಶಕ್ಕೆ ಸೇರಿರುವ ಎಲ್ಲ ಪದಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿಲ್ಲ. ಪದಗಳ ವ್ಯಾಪಕತೆ ತುಂಬಾ ವಿಸ್ತಾರವಾಗಿರುವುದರಿಂದ ಮತ್ತು ಅನೇಕ ವಲಯಗಳಾಗಿ ವಿಂಗಡಿಸಬೇಕಿರುವುದರಿಂದ ಅಧ್ಯಯನಕ್ಕಿರುವ ಕಾಲದ ಮಿತಿಯನ್ನು ಗಮನದಲ್ಲಿರಿಸಿಕೊಂಡು ಕೆಲವು ಆಯ್ದ ವಲಯಗಳನ್ನು ಅಂದರೆ ಹೆಚ್ಚು ಮಾದರಿಯಲ್ಲಿ ಬೆಳವಣಿಗೆಯ ಸಾಧ್ಯತೆ ಕಂಡುಬಂದಿರುವ ವಲಯಗಳನ್ನು ಅಧ್ಯಯನಕ್ಕೆ ಒಳಗು ಮಾಡಿಕೊಳ್ಳಲಾಗಿದೆ. ಪದಗಳ ರಚನೆಗೆ ಸಂಬಂಧಿಸಿದಂತೆ ರಚನೆಯ ಸಾಧ್ಯತೆಯನ್ನು ಪರಿಗಣಿಸಿ ಸಾಧ್ಯವಿರುವಷ್ಟು ಪದಗಳನ್ನು ವಿಶ್ಲೇಷಿಸಲಾಗಿದೆ. ಇದು ಅಧ್ಯಯನದ ಮಿತಿಯೂ ಹೌದು.

ಪದಕೋಶ ಎನ್ನುವುದು ಕನ್ನಡದಲ್ಲಿ ವಿವಿಧ ಅರ್ಥದಲ್ಲಿ ಬಳಕೆಯಾಗಿದೆ. ಪದಕೋಶವು ನಿಘಂಟು, ಶಬ್ದಕೋಶ ಎನ್ನುವ ಅರ್ಥದಲ್ಲೂ ಬಳಕೆಯಾಗಿದೆ ಮತ್ತು ಇದಕ್ಕೆ ಕನ್ನಡದಲ್ಲಿ ಪದಗಳನ್ನು ಅಕಾರಾದಿಯಾಗಿ ಸಂಗ್ರಹಿಸಲ್ಪಟ್ಟ ಪುಸ್ತಿಕೆ ಎನ್ನುವ ವಿವರಣೆಯಿದೆ. ಆದರೆ ಈ ಅಧ್ಯಯನದಲ್ಲಿ ಪದಕೋಶ ಎನ್ನುವುದನ್ನು ಕನ್ನಡದಲ್ಲಿ ಕ್ರಿ.ಪೂ. ಕಾಲದಿಂದ ಇಲ್ಲಿಯವರೆಗೂ ಕನ್ನಡದಲ್ಲಿ ಬಳಕೆಯಾಗಿರುವ, ಬಳಕೆಯಲ್ಲಿರುವ ಪದಗಳನ್ನು ಕನ್ನಡ ಪದಕೋಶವೆಂದು ಗ್ರಹಿಸಲಾಗಿದೆ. ಪದಕೋಶ ಅಥವಾ ನಿಘಂಟುಗಳು ಪದಗಳ ವಿವರಣೆ ಹೊಂದಿರುವ ಪುಸ್ತಕವಾಗಿರುವುದರಿಂದ ಅವುಗಳು ಈ ಅಧ್ಯಯನಕ್ಕೆ ಆಕರ ಒದಗಿಸಬಲ್ಲವುಗಳಾಗಿವೆಯೇ ಹೊರತು ಆ ಮಾದರಿಯಲ್ಲಿ ಪದಗಳನ್ನು ದಾಖಲಿಸುವ ಉದ್ದೇಶದ ಅಧ್ಯಯನವಲ್ಲ.

ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳುವ ಫಲಿತಗಳು ಯಾವುವು ಅಂತಿಮವಾಗಿರುವುದಿಲ್ಲ. ಸಂಶೋಧನೆಯ ಅವಧಿಯಲ್ಲಿ ಅಧ್ಯಯನದ ವಿಧಿವಿಧಾನಗಳ ಮಿತಿಯಲ್ಲಿ ಕಂಡುಕೊಂಡಂತಹ ಮಿತಿಗಳಾಗಿರುತ್ತವೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಫಲಿತಗಳು ಸಮಕಾಲೀನ ಸಂದರ್ಭಕ್ಕೆ ಅನ್ವಯವಾಗುವಂತಿದ್ದು, ಕಾಲಾನಂತರದಲ್ಲಿ ಬದಲಾವಣೆಗಳು ಆಗಲೂಬಹುದು.

### ೧.೩ ಅಧ್ಯಯನದ ಮಹತ್ವ :

ಈ ಅಧ್ಯಯನವು ಪದಕೋಶದ ಬೆಳವಣಿಗೆಯ ಕುರಿತಾಗಿರುವುದರಿಂದ ಕನ್ನಡದ ಹೊಸ ರಚನೆಯನ್ನ ಅರಿಯಬಹುದು. ರಚನೆಯನ್ನೆ ಮುಖ್ಯವಾಗಿ ಇಟ್ಟುಕೊಂಡು ಅಧ್ಯಯನ ಮಾಡುವುದರಿಂದ; ಆಧುನಿಕ ಕನ್ನಡದ ಚಾರಿತ್ರಿಕ ನೆಲೆಗಟ್ಟನ್ನು ಅರಿಯಲು ತುಂಬಾ ಸಹಾಯಕವಾಗುತ್ತದೆ. ಕನ್ನಡದಲ್ಲಿ ರಚನೆಯ ಕುರಿತು ಅಧ್ಯಯನಗಳು ಕಡಿಮೆಯಾಗುತ್ತಿರುವಾಗ ಕನ್ನಡದ ಆಧುನಿಕ ರಚನೆಗಳ ಬಗ್ಗೆ ವಿವರಿಸುತ್ತಿರುವ ಈ ಅಧ್ಯಯನವು ಕನ್ನಡದಲ್ಲಿ ಕನ್ನಡದ ಸ್ವರೂಪದ ಮೇಲೆ ನಡೆದಿರುವ ಅಧ್ಯಯನಗಳ ಸಾಲಿನಲ್ಲಿ ಸಾಗಿದೆ. ಒಟ್ಟಿನಲ್ಲಿ ಈ ಅಧ್ಯಯನವು ಮುಂದಿನ ಅಧ್ಯಯನಗಳಿಗೆ ಆಕರವಾಗಿ ನಿಲ್ಲುವಂತಹ ಅಧ್ಯಯನವಾಗಿದೆ.

### ೧.೪ ಅಧ್ಯಯನದ ವೈಧಾನಿಕತೆ :

ಕನ್ನಡ ಪದಕೋಶದ ಬೆಳವಣಿಗೆ: ಚಾರಿತ್ರಿಕ ಅಧ್ಯಯನ ಎಂಬ ಶೀರ್ಷಿಕೆಯ ಈ ಅಧ್ಯಯನವು ಕನ್ನಡ ಪದಕೋಶಕ್ಕೆ ಸಂಬಂಧಿಸಿರುವುದರಿಂದ ವಿವಿಧ ವಲಯಗಳಲ್ಲಿ ಬಳಕೆಯಾಗುತ್ತಿರುವ ಕನ್ನಡದ ಹೊಸ ರೂಪಗಳನ್ನು(ಲಿಖಿತ ಮತ್ತು ಮೌಖಿಕ) ಸಂಗ್ರಹಿಸಲಾಗಿದೆ. ಅಧ್ಯಯನದ ಅವಶ್ಯಕತೆಗೆ ಅನುಗುಣವಾಗಿ ಆಕರ ಸಂಗ್ರಹಣಾ ವಿಧಾನ ಅನುಸರಿಸಲಾಗಿದೆ. ಎರಡು ಶತಮಾನಗಳಿಗೂ ಹೆಚ್ಚಿನ ಕಾಲಾವಧಿಯ ಅಧ್ಯಯನವಾಗಿರುವುದರಿಂದ ಚಾರಿತ್ರಿಕ ಭಾಷಾವಿಜ್ಞಾನದ ಅಧ್ಯಯನ ಮಾದರಿಯನ್ನು ಅನುಸರಿಸಲಾಗಿದೆ.

ಸಂಶೋಧನೆಗೆ ಅಧ್ಯಯನ ವಿಧಾನ ಅತಿ ಮುಖ್ಯವಾಗುತ್ತದೆ. ಪ್ರಸ್ತುತ ಸಂಶೋಧನೆಯಲ್ಲಿ ಚಾರಿತ್ರಿಕ ನೆಲೆಯಲ್ಲಿ ಕನ್ನಡ ಪದಕೋಶದ ಸ್ವರೂಪವನ್ನು ತಿಳಿಯಲು ಚಾರಿತ್ರಿಕ ಭಾಷಾವಿಜ್ಞಾನದ ಶಿಸ್ತಿಗೆ ಅಧ್ಯಯನದ ಚೌಕಟ್ಟನ್ನು ಅಳವಡಿಸಿಕೊಳ್ಳಲಾಗಿದೆ.

**'ಕನ್ನಡ ಪದಕೋಶದ ಬೆಳವಣಿಗೆ : ಚಾರಿತ್ರಿಕ ಅಧ್ಯಯನ'** ಎಂಬ ಪ್ರಸ್ತುತ ಅಧ್ಯಯನವು ಜನಬಳಕೆಯ ಮತ್ತು ಕೆಲವು ಲಿಖಿತ ಆಕರಗಳ ನೆರವಿನಿಂದ ರೂಪಿತವಾಗಿರುವಂತಹದ್ದು. ಅಧ್ಯಯನದ ವ್ಯಾಪ್ತಿಯಲ್ಲಿ ದೊರೆತ ಆಕರಗಳಿಗೆ ಅನುಗುಣವಾಗಿ ಅಧ್ಯಯನವನ್ನು ನಡೆಸಲಾಗಿದೆ.

ಪದಕೋಶ ಕುರಿತು ಇದುವರೆಗೂ ನಡೆದಿರುವ ಅಧ್ಯಯನಗಳಿಗೆ ಸಂಬಂಧಿಸಿದ ಕೃತಿಗಳು, ಪಿಎಚ್.ಡಿ ಮಹಾಪ್ರಬಂಧಗಳು, ಲೇಖನಗಳು ಪ್ರಸ್ತುತ ಅಧ್ಯಯನಕ್ಕೆ ಆಕರಗಳಾಗಿವೆ. ಇವುಗಳಿಗೆ ಪೂರಕವಾಗಿ, ಕನ್ನಡ, ಇಂಗ್ಲಿಶ್, ಮತ್ತು ಇತರ ಭಾಷೆಗಳ ನಿಘಂಟುಗಳು, ಶಬ್ದಕೋಶಗಳು, ಪಾರಿಭಾಷಿಕ ಪದಕೋಶಗಳು, ಶಾಸನಗಳು, ಕಾವ್ಯ, ಕೈಫಿಯತ್ತುಗಳು, ಪಟ್ಟಾವಳಿ, ವೃತ್ತಪತ್ರಿಕೆ, ಸಾಹಿತ್ಯ ಕೃತಿಗಳು, ಸಾಮಾಜಿಕ ಜಾಲತಾಣ ಮುಂತಾದವುಗಳಿಂದ ಪದಗಳನ್ನು ಸಂಗ್ರಹಿಸಿಕೊಂಡಿದ್ದು ಈ ಎಲ್ಲಾ ಆಕರಗಳನ್ನು ಚಾರಿತ್ರಿಕ ಮಾದರಿಯಲ್ಲಿ ವಿಶ್ಲೇಷಣೆಯನ್ನು ಮಾಡಿ ಪ್ರಬಂಧ ಸಿದ್ಧಪಡಿಸಲಾಗಿದೆ.

ಚಾರಿತ್ರಿಕ ಕಾಲಘಟ್ಟದಲ್ಲಿ ಕನ್ನಡ ಪದಕೋಶದ ಸ್ವರೂಪದಲ್ಲಿ ಆದ ಬೆಳವಣಿಗೆಯ ವಿವಿಧ ಆಯಾಮಗಳನ್ನು ತಿಳಿಯಲು, ಪದಗಳ ಬಳಕೆಯಲ್ಲಿ ಕಂಡುಬಂದ ಬದಲಾವಣೆಗಳನ್ನು ವಿವಿಧ ಕಾಲಘಟ್ಟಗಳಲ್ಲಿ ಗುರುತಿಸಲು ಪ್ರಮುಖವಾಗಿ ಚಾರಿತ್ರಿಕ ಅಧ್ಯಯನ ಮಾದರಿಯನ್ನು ಬಳಸಲಾಗಿದೆ. ಜೊತೆಗೆ ಪದಕೋಶದ ಬೆಳವಣಿಗೆಯನ್ನು ಗುರುತಿಸುವ ಅಧ್ಯಯನವಾಗಿರುವುದರಿಂದ ಪದಬಳಕೆಯ ವಿವಿಧ ನೆಲೆಗಳನ್ನು ಗುರುತಿಸುವಾಗ ಮತ್ತು ಹೊಸ ಪದಗಳ ರಾಚನಿಕ ಸ್ವರೂಪವನ್ನು ವಿವರಿಸುವಾಗ ವಿಶ್ಲೇಷಣಾತ್ಮಕ ಮಾದರಿಯನ್ನು ಬಳಸಲಾಗಿದೆ.

### ೧.೫ ಅಧ್ಯಯನದ ಸ್ವರೂಪ

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವೈಧಾನಿಕತೆ ಮತ್ತು ಮಹತ್ವ ಇವುಗಳನ್ನು ಖಚಿತ ಪಡಿಸಲಾಗಿದೆ. ಈ ಅಧ್ಯಾಯದಲ್ಲಿಯೆ ಆಕರ ಸಂಗ್ರಹಕ್ಕೆ ಅನುಸರಿಸಿದ ಮಾರ್ಗ ಖಚಿತ ಪಡಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಈ ಹಿಂದೆ ಕನ್ನಡ ಪದಕೋಶದ ಮೇಲೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದ್ದು ಈ ಮೂಲಕ ಈ ಅಧ್ಯಯನದ ರೂಪುರೇಷೆಗಳನ್ನು ಕಂಡುಕೊಳ್ಳಲಾಗಿದೆ. ಅಧ್ಯಾಯ ಮೂರರಲ್ಲಿ ಅಧ್ಯಯನಕ್ಕೆ ಪೂರಕವಾಗಿ ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾದ ಅಂಶಗಳನ್ನು ವಿವರಿಸಲಾಗಿದೆ. ಇಲ್ಲಿ ಮುಖ್ಯವಾಗಿ ರಾಜಕೀಯ, ಸಾಂಸ್ಕೃತಿಕ, ಗಡಿ ಭಾಗಗಳಲ್ಲಿ ಆದ ಇತರ ಭಾಷೆಗಳ ಪ್ರಭಾವಗಳು ಮತ್ತು ಆಧುನಿಕತೆಯ ಕಾರಣದಿಂದ ಕನ್ನಡದಲ್ಲಿ ಕಂಡುಬಂದ

ಹೊಸ ಹೊಸ ವಿಚಾರ, ವಿಷಯ, ವಸ್ತುಗಳ ಕಾರಣದಿಂದ ಕನ್ನಡ ಪದಕೋಶದ ಬೆಳವಣಿಗೆಗೆ ಹೇಗೆ ತಮ್ಮ ಪ್ರಭಾವವನ್ನು ಬೀರಿವೆ ಎನ್ನುವುದನ್ನು ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕನ್ನಡ ಸಮಾಜದಲ್ಲಾದ ಬದಲಾವಣೆಗಳು ಪದಕೋಶದ ಬೆಳವಣಿಗೆಗೆ ಕಾರಣವಾದ ಅಂಶವನ್ನು ವಿವಿಧ ವಲಯಗಳನ್ನು ಇಟ್ಟುಕೊಂಡು ವಿವರಿಸಲಾಗಿದೆ. ಕನ್ನಡ ಭಾಷೆಯ ಸುಮಾರು ಐದು ಸಾವಿರ ವರ್ಷಗಳ ಇತಿಹಾಸವನ್ನು ಗಮನದಲ್ಲಿಟ್ಟುಕೊಂಡು ನೋಡುವುದಾದರೆ ಅದು ಅನೇಕ ಪ್ರಭಾವಗಳಿಗೆ ಒಳಗಾಗಿ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಂಡಿದೆ. ಹೀಗೆ ವಿಸ್ತಾರ ಹೆಚ್ಚಿಸಿಕೊಳ್ಳುವಲ್ಲಿ ಯಾವ ಯಾವ ವಲಯಗಳು ಹೇಗೆ ಬೆಳವಣಿಗೆ ಹೊಂದಿವೆ, ಈ ಬೆಳವಣಿಗೆಗೆ ಕಾರಣಗಳು ಏನು, ಯಾವ ಯಾವ ಭಾಷೆಗಳು ಯಾವ ಯಾವ ವಲಯಗಳಲ್ಲಿ ಹೆಚ್ಚು ಪ್ರಭಾವ ಬೀರಿವೆ ಮತ್ತು ಈ ಪ್ರಭಾವಗಳಿಂದ ಎಂತಹ ಪದಗಳು ಕನ್ನಡದಲ್ಲಿ ಕಂಡುಬಂದಿವೆ ಎನ್ನುವುದನ್ನು ಪ್ರತ್ಯೇಕ ವಲಯವಾಗಿ ಇಟ್ಟುಕೊಂಡು ಸಮಗ್ರವಾಗಿ ಗಮನಿಸಲಾಗಿದೆ.

ಅಧ್ಯಾಯ ಐದರಲ್ಲಿ ವಿವಿಧ ವಲಯಗಳಲ್ಲಿ ಬೆಳವಣಿಗೆಯಾದ ಕನ್ನಡ ಪದಕೋಶದ ರಾಚನಿಕ ಸ್ವರೂಪವನ್ನು ವಿವರಿಸಲಾಗಿದೆ. ಬೆಳವಣಿಗೆಯಾದ ಪದಗಳ ಪ್ರಕಾರ ಅವುಗಳ ರಚನೆಯನ್ನು ವಿವರಿಸಲಾಗಿದೆ, ಹೊಸ ಸೃಷ್ಟಿಯಾಗಿದ್ದರೆ ಕನ್ನಡವು ಹೊಸಪದರಚನೆಯಲ್ಲಿ ಅನುಸರಿಸುತ್ತಿರುವ ನಿಯಮಗಳೇನು, ಆ ನಿಯಮ ಈ ಹಿಂದಿನ ಕನ್ನಡ ನಿಯಮವೇ ಅಥವಾ ಹೊಸ ನಿಯಮದಲ್ಲಿ ಸೃಷ್ಟಿಯಾಗಿವೆಯೇ ಎನ್ನುವುದನ್ನು ವಿವರಿಸಲಾಗಿದೆ. ಸ್ವೀಕರಣವಾಗಿದ್ದರೆ ಯಾವ ಪ್ರಕಾರದಲ್ಲಿ(ಶಬ್ದ ಸ್ವೀಕರಣ, ಭಾಷಾಂತರ ಸ್ವೀಕರಣ, ಮಿಶ್ರ ಸ್ವೀಕರಣ ಇತ್ಯಾದಿ) ಸ್ವೀಕರಣಗೊಂಡಿವೆ ಎನ್ನುವುದನ್ನ ವಿವರಿಸಲಾಗಿದೆ, ಸಾದೃಶ್ಯ ಸೃಷ್ಟಿಯಾಗಿದ್ದರೆ ಅದರ ಸ್ವರೂಪ ಎಂತಹದ್ದು ಎನ್ನುವುದನ್ನು ವಿವರಿಸಲಾಗಿದೆ.

ಅಧ್ಯಾಯ ಆರು ಇದು ಕೊನೆಯ ಅಧ್ಯಾಯವಾಗಿದ್ದು ಅಧ್ಯಯನದ ಫಲಿತಗಳು ಮತ್ತು ಮುಂದಿನ ಅಧ್ಯಯನದ ಸಾಧ್ಯತೆಯನ್ನು ವಿವರಿಸಲಾಗಿದೆ. ಕೊನೆಯಲ್ಲಿ ಅಧ್ಯಯನಕ್ಕೆ ಬಳಸಿಕೊಂಡ ಆಕರ ಗ್ರಂಥಗಳ ಪಟ್ಟಿಯನ್ನು ನೀಡಲಾಗಿದೆ.

ಈ ಅಧ್ಯಯನವನ್ನು ಆಕರಗಳ ಉಪಲಬ್ದಿಯ ಮೇಲೆ ವಿವಿಧ ಆಯಾಮಗಳಲ್ಲಿ ಅಧ್ಯಾಯಗಳಾಗಿ, ಉಪ ಅಧ್ಯಯಗಳಾಗಿ ವಿಭಾಗಿಸಿಕೊಂಡು ಇರುವ ಎಲ್ಲ ಸಾಧ್ಯತೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅಧ್ಯಯನ ಕೈಗೊಳ್ಳಲಾಗಿದೆ

■■■■■.

# ಅಧ್ಯಾಯ : ಎರಡು

# ಅಧ್ಯಯನಗಳ ಸಮೀಕ್ಷೆ

ಕನ್ನಡದಲ್ಲಿ ಪದಗಳ ಚಾರಿತ್ರಿಕ ಬದಲಾವಣೆಗಳಿಗೆ ಸಂಬಂಧಿಸಿದಂತೆ ಕೆಲವು ಅಧ್ಯಯನಗಳು ನಡೆದಿವೆ. ಆದರೆ ಪದಕೋಶದ ಬೆಳವಣಿಗೆಗೆ ಸಂಬಂಧಿಸಿದಂತೆ ಇಲ್ಲಿಯವರೆಗೂ ಸಮಗ್ರವಾದ ಅಧ್ಯಯನಗಳು ನಡೆದ ಹಾಗಿಲ್ಲ. ಆದರೆ ಇದಕ್ಕೆ ಪೂರಕವಾದ ಕೆಲವು ಲೇಖನಗಳು ಮತ್ತು ಪಿಎಚ್.ಡಿ ಅಧ್ಯಯನಗಳು ನಡೆದಿವೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಇವುಗಳ ಸಮೀಕ್ಷೆ ಮಾಡುವುದು ಮುಖ್ಯ ಎನಿಸುತ್ತದೆ. ಈ ಸಮೀಕ್ಷೆಯ ಮೂಲಕ ಕನ್ನಡ ಪದಕೋಶ ಕುರಿತು ನಡೆದ ಒಟ್ಟು ಅಧ್ಯಯನಗಳ ಸಮಗ್ರ ಚಿತ್ರಣ ಅಧ್ಯಯನಕಾರರಿಗೆ ಲಭ್ಯವಾಗುತ್ತದೆ. ಈ ಹಿನ್ನೆಲೆಯನ್ನಿಟ್ಟುಕೊಂಡು ಅಧ್ಯಯನಕಾರ ಸಂಶೋಧನೆಯಲ್ಲಿ ಯಾವ ವಿಷಯಕ್ಕೆ ಎಷ್ಟು ಮಹತ್ವ ನೀಡಬೇಕು ಎಂಬುದನ್ನು ಅರ್ಥಮಾಡಿಕೊಂಡು ಸಂಶೋಧನೆಯಲ್ಲಿ ತೊಡಗಿಸಿಕೊಳ್ಳಲು ಸಹಾಯಕವಾಗುತ್ತದೆ. ಹಾಗಾಗಿ ಪ್ರಸ್ತುತ ಅಧ್ಯಾಯದಲ್ಲಿ ಕನ್ನಡ ಪದಕೋಶ ಕುರಿತು ನಡೆದಿರುವ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ.

ಇಲ್ಲಿ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ನಡೆದ ಅಧ್ಯಯನ ನಡೆದ ಅಧ್ಯಯನಕ್ಕೆ ಮಾಹಿತಿ ಒದಗಿಸುವ ಪುಸ್ತಕ ಅಥವಾ ಪದಕೋಶಗಳು ಮತ್ತು ಈ ಅಧ್ಯಯನಕ್ಕೆ ಪೂರಕ ಸೈದ್ಧಾಂತಿಕ ಶಿಸ್ತು ಒದಗಿಸುವ ಅಧ್ಯಯನಗಳು ಈ ಮೂರು ಮಾದರಿಗೆ ಸಂಬಂಧಿಸಿದ ಅಧ್ಯಯನಗಳನ್ನು ಇಲ್ಲಿ ಸಮೀಕ್ಷೆಗೆ ಒಳಪಡಿಸಲಾಗಿದೆ.

ಈ ಅಧ್ಯಯನಕ್ಕೆ ಪೂರಕವಾಗಿ ಈ ಹಿಂದೆ ಶಂಕರ ಎ. ಕೆದಿಲಾಯ (Foreign loan words in Kannada, ೧೯೬೩ರಲ್ಲಿ ಪಿಎಚ್.ಡಿ ಮತ್ತು ೧೯೭೦ರಲ್ಲಿ ಪ್ರಕಟಗೊಂಡ ಮಸ್ತಕ) ಮತ್ತು ಕನಕೇಶಮೂರ್ತಿ ಬಿ.ಜಿ. (ಕನ್ನಡದಲ್ಲಿ ವಿದೇಶಿ ಶಬ್ದಗಳು: ಒಂದು ಅಧ್ಯಯನ, ೧೯೯೪, ಪಿಎಚ್.ಡಿ) ಈ ಕೃತಿಗಳು ಮುಖ್ಯವಾಗುತ್ತವೆ. ಕೆದಿಲಾಯ ಅವರು ತಮ್ಮ ಗ್ರಂಥದಲ್ಲಿ ಕನ್ನಡಕ್ಕೆ

ಸ್ವೀಕರಣವಾಗಿ ಬಂದ ಅರಬ್ಬಿ, ಪರ್ಷಿಯನ್ ಪದಗಳ ಕುರಿತು ಅಧ್ಯಯನ ಕೈಗೊಂಡಿದ್ದು ಕನಕೇಶಮೂರ್ತಿಯವರು ಕನ್ನಡಕ್ಕೆ ಬಂದ ಎಲ್ಲ ವಿದೇಶಿ ಪದಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಿದ್ದಾರೆ. ಈ ಎರಡು ಅಧ್ಯಯನಗಳಲ್ಲಿ ಕನ್ನಡ ಪದಕೋಶ ವಿದೇಶಿ ಪದಗಳಿಂದ ಬೆಳವಣಿಗೆಯಾದುದ್ದನ್ನು ವಿವರಿಸಲಾಗಿದೆ.

ಧರ್ಮ ಮತ್ತು ಆಚರಣೆಗೆ, ಸಮರಕ್ಕೆ, ಆಡಳಿತಕ್ಕೆ, ಶಿಕ್ಷಣ ಮತ್ತು ಮನೋರಂಜನೆ, ವೃತ್ತಿ, ವ್ಯಾಪಾರ ಮತ್ತು ವಾಣಿಜ್ಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನಕ್ಕೆ ಸಂಬಂಧಿಸಿದ ಶಬ್ದಗಳು, ಹೀಗೆ ವಿವಿಧ ಕ್ಷೇತ್ರಗಳಾಗಿ ವಿಂಗಡಿಸಿಕೊಂಡು ಆ ಕ್ಷೇತ್ರಗಳಲ್ಲಿ ಈ ಮೇಲ್ಕಂಡ ಭಾಷೆಗಳಿಂದ ಸ್ವೀಕರಣವಾಗಿ ಬಂದ ಪದಗಳ ವಿವರವನ್ನು ನೀಡಲಾಗಿದೆ. ಒಂದು ಪದ ಅದು ಬಂದ ಸಂದರ್ಭ ಅದು ಕನ್ನಡಕ್ಕೆ ಯಾವ ಭಾಷೆಯ ಮೂಲಕ ಬಂದಿದೆ, ಅದರ ಮೂಲ ಭಾಷೆ ಯಾವುದು ಇತ್ಯಾದಿ ವಿವರಗಳನ್ನು ಗಮನಿಸಲಾಗಿದೆ. ಈ ಮಾದರಿಯು ಈ ಅಧ್ಯಯನಕ್ಕೆ ವಿವಿಧ ವಲಯಗಳಲ್ಲಿ ಸ್ವೀಕರಣದಿಂದ ಆದ ಪದಕೋಶದ ಬೆಳೆವಣಿಗೆಯನ್ನು ಗುರುತಿಸುವಲ್ಲಿ ಸಹಾಯಕವಾಗುತ್ತದೆ. ಈ ಪದಗಳಿಂದ ಕನ್ನಡ ಪದಕೋಶದಲ್ಲಿ ಆಗಿರುವ ಹೊಸ ರಚನೆಗಳನ್ನು ಅರಿಯುವಲ್ಲಿ ಈ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ.

ಕೆದಿಲಾಯ ಅವರು Farther remarks on the loan words – ಎಂಬ ಅಧ್ಯಾಯದಲ್ಲಿ ಸ್ವೀಕರಣ ಪದಗಳ ರಚನೆ ಮತ್ತು ಅರ್ಥದಲ್ಲಿ ಆದ ಬದಲಾವಣೆಗಳ ಕುರಿತು ವಿವೇಚಿಸಿದ್ದಾರೆ. ರಚನೆ ಕುರಿತು ವಿವರಿಸುವಾಗ ಸ್ವೀಕರಣ ಪದಗಳು ಮತ್ತು ಕನ್ನಡ ಪದಗಳು ಹೇಗೆ ರಚನೆ ಹೊಂದಿವೆ. ಸ್ವೀಕೃತ ಪ್ರತ್ಯಯ ಕನ್ನಡದೊಂದಿಗೆ ಹೊಂದುವ ರಚನೆಯ ನಿಯಮಗಳ ಬಗ್ಗೆ ವಿವರವಾಗಿ ವಿವರಿಸಿದ್ದಾರೆ.

ಪದಗಳಲ್ಲಿ ನಾಮಪದ, ಕ್ರಿಯಾಪದ ಮತ್ತು ಇತರ ಪದಗಳ ಪದರಚನೆಯ ನಿಯಮಗಳನ್ನು ವಿವರಿಸಲಾಗಿದೆ. ಕ್ರಿಯಾಪದ ರಚನೆಯಲ್ಲಿ ಕನ್ನಡ ಪದಗಳ ಬಳಕೆ, ಪ್ರತ್ಯಯಗಳನ್ನು ಹೊಂದಿ ಆಗಿರುವ ರಚನೆಗಳ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

Phonetic Change ಎಂಬ ಅಧ್ಯಾಯದಲ್ಲಿ ಈ ಪದಗಳಲ್ಲಾದ ಧ್ವನಿಮಾತ್ಮಕ ಬದಲಾವಣೆಯನ್ನು ಗುರುತಿಸಲಾಗಿದೆ. ಕನ್ನಡದಲ್ಲಾದ ಧ್ವನಿಮಾತ್ಮಕ ಬದಲಾವಣೆಗಳು ಈ ಸ್ವೀಕೃತ ಪದಗಳಲ್ಲಿ ಹೇಗೆ ನಡೆದಿದೆ ಮತ್ತು ಪದಗಳು ಕನ್ನಡ ರಚನೆಯೊಂದಿಗೆ ಸ್ವೀಕೃತ ಪದಗಳು ವರ್ತಿಸಿವೆ ಎನ್ನುವುದನ್ನು ಸವಿವರವಾಗಿ ಚರ್ಚಿಸಲಾಗಿದೆ. ಸ್ವೀಕೃತ ಕ್ರಿಯಾಪದಗಳು ಹೇಗೆ ಕನ್ನಡದಲ್ಲಿ ಹೇಗೆ ಬಳಕೆಯಲ್ಲಿವೆ, ಈ ಪದಗಳನ್ನು ಕನ್ನಡದಲ್ಲಿ ಕ್ರಿಯಾಪದವಾಗಿ ಸಾಧಿಸುವಾಗ ಮಾಡಿಕೊಳ್ಳುವ ಬದಲಾವಣೆ, ನೇರವಾಗಿ ಕ್ರಿಯೆಯನ್ನು ವಿವರಿಸುವಾಗ ಇವು ತೆಗೆದುಕೊಳ್ಳುವ ಪ್ರತ್ಯಯಗಳು ಯಾವುವು, ಇವು ಕನ್ನಡದ ಪ್ರೇರಣಾತ್ಮಕ ಕ್ರಿಯಾಪದವಾದ 'ಇಸು'ವನ್ನು ಯಾವ ರೀತಿ ಬಳಸಿಕೊಳ್ಳುತ್ತಿವೆ ಎನ್ನುವುದನ್ನು ವಿವರಿಸಲಾಗಿದೆ. Semantic ಅಧ್ಯಾಯದಲ್ಲಿ ವಾಕ್ಯಾತ್ಮಕ ಬದಲಾವಣೆಗಳನ್ನು ವಿವರಿಸಲಾಗಿದೆ.

ಕನಕೇಶಮೂರ್ತಿಯವರು ಒಂಬತ್ತನೆಯ ಅಧ್ಯಾಯವಾದ ವ್ಯಾಕರಣ ವಿಚಾರಗಳು ಎಂಬಲ್ಲಿ ವ್ಯಾಕರಣ ಅಂಶಗಳ ಕುರಿತು ವಿವರಿಸಿದ್ದಾರೆ. ಪದಗಳಸಲಾಗಿದೆ. ಧ್ವನಿ ಪರಿವರ್ತನೆ, ಸಮಾಸಪದಗಳು, ದ್ವಿರುಕ್ತಿ, ಅರ್ಥವ್ಯತ್ಯಾಸ, ಅರ್ಥವಿಸ್ತಾರ, ಪ್ರತ್ಯಯಗಳಿಂದ ಹೊಸಪದಗಳ ಸೃಷ್ಟಿ ಕುರಿತು ವಿಶ್ಲೇಷಿಸಲಾಗಿದೆ. ಇಲ್ಲಿ ಕನ್ನಡ ಪದಕೋಶದ ಬೆಳವಣಿಗೆಯನ್ನು ಸ್ವೀಕರಣ ಪದಗಳ ಮೂಲಕ ವಿವರಿಸಲಾಗಿದೆ. ಈ ಅಧ್ಯಯನದಲ್ಲಿ ಮೊದಲಿಗೆ ಯಾವ ಯಾವ ಕ್ಷೇತ್ರಗಳಲ್ಲಿ ಪದಗಳು ಬೆಳವಣಿಗೆ ಕಂಡಿವೆ ಎನ್ನುವುದನ್ನು ವಿವರಿಸಿರುವುದು ಒಂದು ಮಹತ್ವದ ಕೆಲಸವಾಗಿದೆ. ಈ ತರಹದ ಕೆಲಸ ಕನ್ನಡದಲ್ಲಿ ಆಗಬೇಕಾಗಿದೆ. ಈ ನಿಟ್ಟಿನಲ್ಲಿ ಈ ಗ್ರಂಥವು ನನ್ನ ಅಧ್ಯಯನಕ್ಕೆ ಮಹತ್ವದ ಮಾಹಿತಿ ನೀಡುವುದಾಗಿದೆ.

ರವೀಂದ್ರ ಅವರ ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು ಎಂಬ ಎಂ.ಫಿಲ್ ಸಂಪ್ರಬಂಧ(ಅಪ್ರಟಿತ)ದಲ್ಲಿ ಗುಲಬರ್ಗಾ ಕನ್ನಡದಲ್ಲಿ ಬಳಕೆಯಲ್ಲಿರುವ ಮರಾಠಿ ಮತ್ತು ಉರ್ದು ಪದಗಳನ್ನು ಆಕರವಾಗಿಟ್ಟುಕೊಂಡು ಅದರಲ್ಲೂ ಮೌಖಿಕ ಹಂತದಲ್ಲಿರುವ ಸ್ವೀಕೃತ ಪದಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಗುಲಬರ್ಗಾ ಕನ್ನಡ ನುಡಿ: ಚಾರಿತ್ರಿಕ ನೆಲೆ ಈ ಅಧ್ಯಾಯದಲ್ಲಿ ಗುಲಬರ್ಗಾ ಕನ್ನಡವು ಕಾಲಾಂತರದಲ್ಲಿ ಮಾಡಿಕೊಂಡಿರುವ ಬದಲಾವಣೆಯನ್ನು ವಿವರಿಸಲಾಗಿದೆ. ಕನ್ನಡದ ಎಲ್ಲ ಒಳನುಡಿಗಳಲ್ಲೂ ಬದಲಾವಣೆ ನಡೆದಿದ್ದರೂ ಗುಲಬರ್ಗಾ ಕನ್ನಡವು ಕೆಲವು ವಿಶೇಷ ಬದಲಾವಣೆಯನ್ನು ಕಂಡಿದ್ದು ಸುಳ್ಳಲ್ಲ. ಅಂತಹ ಕೆಲವು ವಿಶಿಷ್ಟ ರೂಪಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಆನಂತರದ ನಾಲ್ಕು ಅಧ್ಯಾಯಗಳಲ್ಲಿ ಸ್ವೀಕೃತ ಪದಗಳ ಪ್ರಕಾರಗಳಾದ ನಾಮಪದ, ಕ್ರಿಯಾಪದ, ವಿಶೇಷಣ, ಸಂಖ್ಯಾವಾಚಕಗಳಲ್ಲಿಯ ಧ್ವನಿಮಾತ್ಮಕ ರಚನೆ, ಬದಲಾವಣೆ, ಈ ಬದಲಾವಣೆಗೆ ಕನ್ನಡ ಭಾಷೆಯ ಪ್ರಭಾವಗಳ ಕುರಿತು ವಿವರಿಸಲಾಗಿದೆ. ಆಕೃತಿಮಾಗಳ ಬಗೆಯ ವಿವರಣೆಯಲ್ಲಿ ಮುಖ್ಯವಾಗಿ ಪದಗಳ ರಚನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ಮುಖ್ಯವಾಗಿ ಐದು ಮಾನದಂಡಗಳನ್ನು ಇಟ್ಟುಕೊಂಡು ರಚನೆಯನ್ನು ವಿವರಿಸಲಾಗಿದೆ.

೧) ಕನ್ನಡ ಪದಗಳು + ಮರಾಠಿ/ಉರ್ದು ಪದಗಳು

೨) ಮರಾಠಿ/ಉರ್ದು ಕ್ರಿಯಾಪದಗಳು + ಕನ್ನಡ ಕ್ರಿಯಾ ಪದಗಳು

೩) ಮರಾಠಿ/ಉರ್ದು ಪದಗಳು + ಕನ್ನಡ ಕ್ರಿಯಾ ಪದಗಳು

೪) ಮರಾಠಿ/ಉರ್ದು ಪದಗಳು + ಪ್ರತ್ಯಯಗಳು

೫) ಕನ್ನಡ ಪದಗಳು + ಮರಾಠಿ/ಉರ್ದು ಪ್ರತ್ಯಯಗಳು

ಈ ಐದು ಮಾದರಿಯ ಪದರಚನೆಯನ್ನು ಸಂಶೋಧಕರು ಗುರುತಿಸುತ್ತಾರೆ. ಈ ಪದಗಳು ಆಕೃತಿಮಾತ್ಮಕ ಬದಲಾವಣೆಯನ್ನು ಮಾಡಿಕೊಳ್ಳುವಾಗ ಅನೇಕ ಧ್ವನಿಮಾತ್ಮಕ ಬದಲಾವಣೆಯನ್ನು

ಮಾಡಿಕೊಂಡಿವೆ. ಇವೆಲ್ಲವು ಕನ್ನಡ ಪದಕೋಶದ ಬದಲಾವಣೆಯ ಹಿನ್ನೆಲೆಯಲ್ಲೆ ಬದಲಾಗಿದ್ದನ್ನು ಕಾಣಬಹುದಾಗಿದೆ. ಸ್ವೀಕರಣ ಪದಗಳಲ್ಲಿ ಕೆಲವು ಪದಗಳು ಕನ್ನಡಕ್ಕೆ ಬಂದ ಮೇಲೆ ತನ್ನ ಅರ್ಥದಲ್ಲಿ ಬದಲಾಗಿರುವುದನ್ನು ಕಾಣಬಹುದಾಗಿದೆ. ಕೆಲವು ಪದಗಳು ಕನ್ನಡದಲ್ಲಿ ಮೂಲಕ್ಕೆ ಸಂಪೂರ್ಣ ವಿರುದ್ಧ ಅರ್ಥ ಹೊರಡಿಸುವಷ್ಟು ಬದಲಾಗಿರುವುದನ್ನು ಸಂಶೋಧಕರು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಈ ಸಂಪ್ರಬಂದವು ಈ ಅಧ್ಯಯನಕ್ಕೆ ಪೂರಕ ಮಾಹಿತಿ ನೀಡಬಲ್ಲದ್ದು ಆಗಿರುವುದರಿಂದ ಸಮೀಕ್ಷಿಸಲಾಗಿದೆ.

ಕೆ.ವಿ. ನಾರಾಯಣರ ತೊಂಡು ಮೇವು ಕಂತೆ ಐದು(೨೦೧೦), ಗ್ರಂಥದಲ್ಲಿ ಪದಕೋಶಕ್ಕೆ ಸಂಬಂಧಿಸಿದಂತೆ ಅನೇಕ ಲೇಖನಗಳನ್ನು ಬರೆದಿದ್ದಾರೆ. ಪ್ರತಿ ಲೇಖನವು ಒಂದೊಂದು ಹೊಸ ಆಯಾಮವನ್ನು ವಿವರಿಸುತ್ತದೆ. ಪದ: ಅರ್ಥ, ಪದ-ಪದಾರ್ಥ ಮತ್ತು ಬಳಕೆ, ಪದಗಳ ಒಳ ಚಲನೆ, ಪದಕೋಶದ ಎರಡು ಬಗೆ, ಸಾಮಾಜಿಕ ಪದಕೋಶ ಇವೆಲ್ಲವುಗಳಿಗಿಂತ ಮುಖ್ಯವಾದವು ಪದಕೋಶ-ಒಂದು, ಎರಡು, ಮೂರು ಲೇಖನಗಳು. ಈ ಲೇಖನಗಳಲ್ಲಿ ಕನ್ನಡ ಪದಕೋಶದ ಒಟ್ಟು ಸ್ವರೂಪ, ರಚನೆ, ಅವುಗಳ ಸ್ಥಿತ್ಯಂತರ, ಚಾರಿತ್ರಿಕತೆಗಳ ಕುರಿತು ಸುದೀರ್ಘವಾಗಿ ಚರ್ಚಿಸಲಾಗಿದೆ. ಪದಕೋಶ ಒಂದರಲ್ಲಿ ಕನ್ನಡ ಪದಕೋಶವು ಇದ್ದ ಪದ, ಪ್ರತ್ಯಯಗಳನ್ನ ಬಳಸಿಕೊಂಡು ಹೇಗೆ ಹೊಸಪದಗಳನ್ನ ರಚಿಸಲಾಗುತ್ತಿದೆ ಮತ್ತು ಸ್ವೀಕರಿಸಿದ ಪದಗಳ ಬಳಕೆಯಲ್ಲಿ ಆಗುತ್ತಿರುವ ತೊಡಕುಗಳ ಬಗ್ಗೆ ವಿವರಿಸಲಾಗಿದೆ.

ಭಾಷಾ ಸಂಪರ್ಕ, ಆಧುನಿಕ ತಂತ್ರಜ್ಞಾನದಿಂದ ಸ್ವೀಕರಿಸಿಕೊಂಡಿರುವ ಪದಗಳ ಅರ್ಥ ಮಾತ್ರ ಗ್ರಹಿಕೆಯಾಗುತ್ತಿಲ್ಲ ಎನ್ನುತ್ತಾರೆ. ಒಂದೇ ಸಮಾನಾರ್ಥ(ಡ್ರಿಪ್ ಇರಿಗೇಶನ್, ಹನಿ ನಿರಾವರಿ, ತುಂತುರು ನಿರಾವರಿ) ಹೊಂದಿರುವ ಪದಗಳು ಕನ್ನಡ ಜನರ ಪದಕೋಶದಲ್ಲಿವೆ. ಅವುಗಳಲ್ಲಿ ಯಾವುದರ ಬಳಕೆ ಸರಿ ಎನ್ನುವ ಗೊಂದಲಗಳು ಎದುರಾಗುತ್ತಿವೆ ಎನ್ನುತ್ತಾರೆ.

ಪದಕೋಶ ಎರಡರಲ್ಲಿ ಕನ್ನಡ ಪದಕೋಶದಲ್ಲಿ ಕಳೆದ ಐವತ್ತು ವರ್ಷಗಳಲ್ಲಿ ಆದ ಪರಿವರ್ತನೆಯನ್ನು ವಿವರಿಸಲಾಗಿದೆ. ಈ ಪದಕೋಶದಲ್ಲಿರುವ ಮಹಾಪ್ರಾಣಾಕ್ಷರ ಸಮಸ್ಯೆ, ಕನ್ನಡ ಹೊಸ ಪದ ಸೃಷ್ಟಿಗೆ ಆಯ್ದುಕೊಂಡ ಮಾರ್ಗ, ದೇಶಿ-ಅನ್ಯದೇಶಿ ಪದಗಳ ಗುಂಪು ಮಾಡುವಿಕೆ, ಆದ ಬದಲಾವಣೆಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಹೇರಳ ಸ್ವೀಕರಣದಿಂದ ಎದುರಾಗುತ್ತಿರುವ ಸಮಸ್ಯೆಗಳನ್ನ ವಿವರಿಸಿದ್ದಾರೆ. ಸಾಮಾಜಿಕ ವೃತ್ತಿಗಳು, ಆಚರಣೆಗಳು ವಿನಾಶದೆಡೆಗೆ ಸಾಗುತ್ತಿರುವಾಗ ಅಲ್ಲಿಯ ಪದಗಳ ವಲಸೆ, ಅರ್ಥ, ವ್ಯತ್ಯಾಸ, ಹೀನಾರ್ಥ ಪ್ರಾಪ್ತಿಗಳ ಬಗ್ಗೆ ವಿವರಿಸಿದ್ದಾರೆ.
ಪದಕೋಶ ಮೂರರಲ್ಲಿ ಹೊಸ ಪದ ರಚನೆಯ ಬಗ್ಗೆ ವಿವರಿಸಲಾಗಿದೆ. ದಿನ-ದಿನ, ನಿಧಾನ ಈ ಶೀರ್ಷಿಕೆಯ ಲೇಖನಗಳಲ್ಲಿ ವಿವರಿಸಲಾಗಿರುವ ಪದಗಳ ರಚನೆಯ ಬಗ್ಗೆ ವಿವರಿಸಿದ್ದಾರೆ. ಈ ಮೂರು ಪದಕೋಶಗಳನ್ನು ಒಂದುಗೂಡಿಸಿ ಕನ್ನಡ ಜಗತ್ತು ಅರ್ಧ ಶತಮಾನ ಗ್ರಂಥದಲ್ಲಿ ಪದಕೋಶ ಎಂಬ ಲೇಖನದಲ್ಲಿ ವಿವರಿಸಲಾಗಿದೆ.

ಈ ಗ್ರಂಥವು ಪದಕೋಶದ ಚಾರಿತ್ರಿಕ ಬೆಳವಣಿಗೆಯ ಕುರಿತು ಗಮನಹರಿಸಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದ ಅನೇಕ ಸುಳುಹುಗಳು ಈ ಲೇಖನಗಳಲ್ಲಿ ಸಿಗುತ್ತವೆ. ಹಾಗಾಗಿ ಈ ಎಲ್ಲ ಲೇಖನಗಳನ್ನು ಅಧ್ಯಯನಕ್ಕೆ ಪೂರಕ ಮಾಹಿತಿಗಾಗಿ ಸಮೀಕ್ಷಿಸಲಾಗಿದೆ.

ಮಧ್ಯಸ್ಥ ಜಿ.ಕೆ. ಅವರ ಪದೋನ್ನತಿ(೨೦೧೦)ಗ್ರಂಥದಲ್ಲಿ ಪದಗಳ ವಿವರಣೆಯಿದೆ. ಪದಗಳ ಮೂಲ, ರಚನೆ, ಅವುಗಳು ರಚನೆಯಾದ ಸಂದರ್ಭ ಅವುಗಳ ಮೂಲಾರ್ಥ ಕನ್ನಡದಲ್ಲಿ ಬಳಕೆಯಲ್ಲಿರುವ ಅರ್ಥ ಹೀಗೆ ಅನೇಕ ವಿಶಿಷ್ಟ ಮಾಹಿತಿಗಳನ್ನು ವಿವರಿಸುತ್ತದೆ. ಇದು ಮುಖ್ಯವಾಗಿ ಪತ್ರಿಕೆಗಳಲ್ಲಿ ಬಳಸಲ್ಪಡುವ ಪದಗಳ ವಿವರಣೆ ನೀಡುವ ಗ್ರಂಥವಾಗಿದ್ದು, ಕೆಲವು ಪದಗಳು ಪತ್ರಿಕೆಗಾಗಿ ಹೊಸದಾಗಿ ರಚಿಸಿದವು, ಇನ್ನು ಕೆಲವು ಈ ಹಿಂದೆ ರಚನೆಗೊಂಡದ್ದು ಪತ್ರಿಕೆಯಲ್ಲಿ ಬಳಕೆಯಾದವುಗಳಾಗಿವೆ. ಪತ್ರಿಕೆಗಳಲ್ಲಿ ಯಾವುದಾದರು ಹೊಸ ಪದ ಸೃಷ್ಟಿಯಾಗಿದೆ ಎಂದರೆ ಆ ಪದ ಯಾಕೆ ಬಂತು ಅದರ ಹಿನ್ನೆಲೆ ಏನು ಎನ್ನುವುದನ್ನು ವಿವರಿಸುವ ಗ್ರಂಥವಾಗಿದ್ದು ತುಂಬಾ ಮಹತ್ವದ ಮಾಹಿತಿಗಳನ್ನು ವಿವರಿಸುತ್ತದೆ.

ಈ ಗ್ರಂಥದಲ್ಲಿ ಮುಖ್ಯವಾಗಿ ಮೂರು ರೀತಿಯ ಪದಗಳ ವಿಶ್ಲೇಷಣೆ ಅಥವಾ ವಿವರಣೆಯನ್ನು ಗುರುತಿಸಬಹುದು. ಮೊದಲನೆಯ ಮಾದರಿಯಲ್ಲಿ ಒಂದು ಪದ ಅದರ ಮೂಲ, ಮೂಲಾರ್ಥ, ಅದು ಕನ್ನಡಕ್ಕೆ ಸ್ವೀಕಾರಗೊಂಡ ಭಾಷೆ, ಕನ್ನಡದಲ್ಲಿ ಅದರ ಅರ್ಥವ್ಯಾಪ್ತಿ, ಬಳಕೆಯ ವಿವಿಧ ವಲಯಗಳ ಬಗ್ಗೆ ವಿವರಿಸಲಾಗಿದೆ. ಉದಾ.

**ಖದೀಮ:** ಖದೀಮ ಶಬ್ದಕ್ಕೆ ಕನ್ನಡದಲ್ಲಿ ಭಾರಿ ಚಾಲಾಕಿ, ಬಲು ಪ್ರಚಂಡ ಎಂಬ ಅರ್ಥಗಳಿವೆ. ಈ ಪದದ ಮೂಲ ಅರಬ್ಬಿಯ ಖದೀಮ ಅಲ್ಲಿ ಇದಕ್ಕೆ ಪ್ರಾಚೀನ, ಬಹುಕಾಲ ಹಳೆಯದಾದ, ಹಳಬ, ನುರಿತವನು ಎಂಬ ಅರ್ಥಗಳಿವೆ. ಖದೀಮ ಪಾರಸಿಯಲ್ಲೂ ಇದೆ. ಇದಕ್ಕೆ ಕನ್ನಡದಲ್ಲಿ ಇರುವ ಅರ್ಥವಿಲ್ಲ. ಹಿಂದಿಯಲ್ಲೂ ಈ ಪದ ಬಳಕೆಯಲ್ಲಿದ್ದು, ಈ ಪದವು ಕನ್ನಡಕ್ಕೆ ಹಿಂದಿ ಭಾಷೆಯಿಂದ ಬಂದಿದೆ.

ಎರಡನೇ ಮಾದರಿಯಲ್ಲಿ ಒಂದು ಪದ ಒಂದು ವಸ್ತುವನ್ನು ಸೂಚಿಸುತ್ತದೆ, ಆದರೆ ಅದರ ಅರ್ಥ ಆ ವಸ್ತುವಿನದಲ್ಲದೆ ಇನ್ನೇನೋ ಆಗಿರುತ್ತದೆ. ಅದು ಯಾವುದೋ ಸಂದರ್ಭದಲ್ಲಿ ಈ ವಸ್ತುವಿಗೆ ಅಂಟಿಕೊಂಡಿರುತ್ತದೆ. ಅಂತಹ ಪದಗಳ ಹಿನ್ನೆಲೆ, ಆ ಹೆಸರು ಈ ಪದಕ್ಕೆ ಬಂದು ಸೇರಲು ಇರುವ ಕಾರಣ, ಆ ಪದದ ಸ್ವಾರಸ್ಯಗಳ ಬಗ್ಗೆ ವಿವರಿಸುವುದು. ಉದಾ.

**ಕಾರ್ಟೂನ್:** ಕಾರ್ಟೂನ್ ಎಂದರೆ ವ್ಯಂಗ್ಯಚಿತ್ರ. ಕಾರ್ಟೂನ್ ಶಬ್ದವು ಮಧ್ಯಕಾಲೀನ ಇಂಗ್ಲಿಶನ ಕಾರ್ಟೋನ್ ಎಂಬುದರಿಂದ ಬಂದಿದೆ. ಕಾರ್ಟೋನ್ ಎಂದರೆ ಗಟ್ಟಿಯಾದ ಕಾಗದದ ತಳ್ಳನೆಯ ಕಾರ್ಡು ಎಂದರ್ಥ. ಕಲಾವಿದರು ತಾವು ರಚಿಸಬೇಕಾದ ಕಲಾಕೃತಿಯ ರೂಪರೇಷೆಗಳನ್ನು ಇಂತಹ ಕಾರ್ಡುಗಳಲ್ಲಿ ಬಿಡಿಸುತ್ತಿದ್ದರು. ಇದರಿಂದಾಗಿ ಇಂತಹ ಕಚ್ಚಾ ಚಿತ್ರಗಳಿಗೆ ಕಾರ್ಟೋನ್

ಎಂಬ ಹೆಸರು ಬಂತು. ಆದರೆ ಕಾರ್ಟೋನ್‌ಗೆ ವ್ಯಂಗ್ಯಚಿತ್ರ ಎಂಬರ್ಥ ಬಂದದ್ದು ಮುಂದಿನ ಹಂತ. ೧೮೪೧ರಲ್ಲಿ ಬ್ರಿಟೀಶ್ ಪಾರ್ಲಿಮೆಂಟ್ ಕಟ್ಟಡ ಬೆಂಕಿಗಾಹುತಿಯಾದ ನಂತರ ಜೀರ್ಣೋದ್ಧಾರ ಕಾರ್ಯ ನಡೆದಿದ್ದಾಗ ಒಳಗೆ ಭಿತ್ತಿಚಿತ್ರ ಬಿಡಿಸಲು ಹಲವಾರು ಕಲಾವಿದರು 'ಕಾರ್ಟೋನ್' ನಕ್ಷೆಗಳನ್ನು ಸಲ್ಲಿಸಿದರು. ಇವನೆಲ್ಲ 'ಕಾರ್ಟೂನ್' ಎಂಬ ಹೆಸರಲ್ಲಿ ಪ್ರದರ್ಶನಕ್ಕೆ ಇಡಲಾಯಿತು. ಪಂಚ್ ಎಂಬ ಪತ್ರಿಕೆ ಈ ಚಿತ್ರಗಳನ್ನು ಲೇವಡಿ ಮಾಡಿ ವ್ಯಂಗ್ಯಚಿತ್ರ ಮಾಲಿಕೆಯೊಂದನ್ನು ಪ್ರಕಟಿಸಿತು. ಈ ಮಾಲಿಕೆ ಜನಪ್ರಿಯವಾಯಿತು. ಜನರು ಇವುಗಳನ್ನು ಪಂಚ್‌ನ 'ಕಾರ್ಟೂನು'ಗಳೆಂದೇ ಕರೆಯಲು ಪ್ರಾರಂಭಿಸಿದರು. ಆ ನಂತರ ಯಾವುದೇ ಲೇವಡಿ ಚಿತ್ರವನ್ನು ಕಾರ್ಟೂನ್ ಎಂದೇ ಕರೆಯತೊಡಗಿದರು.

ಮೂರನೆಯ ಮಾದರಿ ಒಂದು ಅನ್ಯದೇಶಿ ಪದವು ಕನ್ನಡದಲ್ಲಿ ಬಳಕೆಯಲ್ಲಿದ್ದು, ಅದರ ಮೂಲದ ವಿವರಣೆ ಮತ್ತು ಕನ್ನಡದಲ್ಲಿ ಅದಕ್ಕೆ ಸಂವಾದಿಯಾಗಿ ಹೊಸಪದ ಸೃಷ್ಟಿಸಿಕೊಂಡ ಮಾದರಿ. ಉದಾ:

**ಕರ್ಣಬಂದ:** ಸಂಗೀತವನ್ನು ಪಟ್ಟಿಯಲ್ಲಿ ತಟ್ಟೆಪ್ಲೇಟುಗಳಲ್ಲಿ, ಇತ್ತೀಚೆಗೆ ಅಂಗಿ ಗುಂಡಿಯಂತಹ ಸಾಧನಗಳಲ್ಲಿ ಸಂಗ್ರಹಿಸಿಡುವ ತಂತ್ರಜ್ಞಾನದ ಜೊತೆಗೆ ಅಲ್ಲಿಂದ ಅದನ್ನು ನೇರವಾಗಿ ಕಿವಿಗೆ ತಲುಪಿಸುವ ಉಪಕರಣಗಳೂ ಬಂದಿವೆ. ಇಂಗ್ಲಿಶಿನಲ್ಲಿ ಇದಕ್ಕೆ ಇಯರ್‌ಫೋನ್ ಅಥವಾ ಹೆಡ್‌ಫೋನ್ ಎಂಬ ಹೆಸರಿದೆ. ಸಂಗೀತವಷ್ಟೇ ಅಲ್ಲದೆ ದೂರವಾಣಿ ಕರೆಯನ್ನೂ ಇದು ನೇರವಾಗಿ ಕಿವಿಗೆ ಮುಟ್ಟಿಸುತ್ತದೆ. ಬೇರೆಯವರಾರಿಗೂ ಕಿರಿಕಿರಿಯಾಗದಂತೆ ಏಕಾಂತದಲ್ಲಿ ಸಂಗೀತ ಕೇಳುವ ಸುಲಭ ವ್ಯವಸ್ಥೆ ಮಾಡಿದ ಈ ತಂತ್ರಜ್ಞಾನದ ಶೋಧಕರಿಗೆ ನಮಸ್ಕಾರ ಸಲ್ಲಲೇ ಬೇಕು. ಕನ್ನಡದಲ್ಲಿ ಈ ಸಾಧನವನ್ನು ಕಣ್ಬಂಧ ಎಂದು ಕರೆಯಬಹುದು. ಕನ್ನಡವೇ ಬೇಕು ಅನ್ನುವವರು ಕಿವಿಯುಸುರು ಎನ್ನಬಹುದು(ಕಿವಿ+ಉಸುರು) ಎಂದು ಮಾಡಿಕೊಳ್ಳಬಹುದು.

ಈ ಗ್ರಂಥವು ಅನೇಕ ಪದಗಳ ಮೂಲದ ಬಗ್ಗೆ ವಿಶೇಷ ಒದಗಿಸುವುದರಿಂದ ಇದು ಮಹತ್ವದ್ದಾಗಿದೆ. ಇದರ ಉದ್ದೇಶ ಪತ್ರಿಕೆ ಓದುಗರಿಗೆ ವಿವರಣೆ ನೀಡುವುದೇ ಆದರೂ ಪದಗಳನ್ನು ಭಾಷಾವೈಜ್ಞಾನಿಕ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಇದರಲ್ಲಿ ಅನೇಕ ಪದಗಳು ಪತ್ರಿಕೆಯ ತುರ್ತು ಅವಶ್ಯಕತೆಯನ್ನು ಪೂರೈಸಲು ಹುಟ್ಟಿಕೊಂಡವುಗಳು. ಹೀಗಾಗಿ ಅವುಗಳ ವಿಶ್ಲೇಷಣೆಗೆ ಒಂದು ಕಾಲಂ ಮಾಡಿ ಅಲ್ಲಿ ವಿವರಿಸಿದ ಎಲ್ಲ ಪದಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ.

ವೆಂಕಟಸುಬ್ಬಯ್ಯ ಜಿ. ಅವರ ಶಬ್ದ ಮತ್ತು ಅರ್ಥ(೨೦೧೦) ಗ್ರಂಥವು ಲೇಖನಗಳ ಸಂಗ್ರಹವಾಗಿದ್ದು, ಇದರಲ್ಲಿ ಸುಮಾರು ಇಪ್ಪತ್ತು ಲೇಖನಗಳಿವೆ. ಇದರಲ್ಲಿ ಹೆಚ್ಚಿನ ಲೇಖನಗಳು ನಿಘಂಟು, ನಿಘಂಟು ಶಾಸ್ತ್ರ, ನಿಘಂಟು ನಿರ್ಮಾಣಕ್ಕೆ ಬೇಕಾದ ಅರ್ಹತೆ ಬಗ್ಗೆ ವಿವರಿಸುತ್ತವೆ. ಇದರಲ್ಲಿ ಮುಖ್ಯವಾಗಿ ಕನ್ನಡ ನಿಘಂಟು ಮತ್ತು ಎರವಲು ಪದಕೋಶ, ಶಬ್ದ ಅರ್ಥಗಳ ಬೆನ್ನು

ಹತ್ತಿ ಒಂದು, ಎರಡು, ಮೂರು ಈ ಲೇಖನಗಳು ಪ್ರಮುಖವಾದವುಗಳಾಗಿವೆ. ಈ ಲೇಖನಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ.

ಕನ್ನಡ ನಿಘಂಟು ಮತ್ತು ಎರವಲು ಪದಕೋಶ ಈ ಲೇಖನದಲ್ಲಿ ಮುಖ್ಯವಾಗಿ, ಎರವಲು ಎಂದರೇನು? ಕನ್ನಡಕ್ಕೆ ಎರವಲಾಗಿ ಬಂದ ಪದಗಳ ಬಗ್ಗೆ ವಿವರಿಸಲಾಗಿದೆ. ಈ ಲೇಖನದಲ್ಲಿ ಕನ್ನಡವು ಪದಗಳನ್ನ ಎರವಲಾಗಿ ಪಡೆದಿರುವ ಭಾಷೆಗಳನ್ನು ಹೀಗೆ ಪಟ್ಟಿ ಮಾಡುತ್ತಾರೆ ಪಾರಸಿ, ಅರಬ್ಬಿ, ಉರ್ದು, ಹಿಂದಿ, ಪೋರ್ಚುಗೀಸ್ ಇತ್ಯಾದಿ. ಈ ಭಾಷೆಗಳಲ್ಲದೆ ಕನ್ನಡವು ಅನೇಕ ಭಾಷೆಗಳಿಂದ ಸ್ವೀಕರಿಸಿಕೊಂಡಿದೆ. ಸ್ವೀಕರಿಸಿಕೊಳ್ಳುವಾಗ ಅನೇಕ ಮಾದರಿಗಳನ್ನು ಅನುಸರಿಸಿದೆ. ಕೆಲವು ವಸ್ತುಗಳನ್ನು ಸ್ವೀಕರಿಸಿದೆ. ಆ ವಸ್ತುವಿನ ಜೊತೆ ಆ ವಸ್ತುವಿಗೆ ಸಂಬಂಧಿಸಿದಂತಹ ಪದಗಳನ್ನು ಸ್ವೀಕರಿಸಿಕೊಂಡಿದೆ ಅಥವಾ ಒಂದು ವಿಚಾರ ಅಥವಾ ಸಂಪ್ರದಾಯವನ್ನು ಸ್ವೀಕರಿಸಿದರೆ ಆ ವಿಷಯಕ್ಕೆ ಸಂಬಂಧಿಸಿದ ಪದಕೋಶವನ್ನು ಸ್ವೀಕರಣವಾಗಿ ಬಂದಿರುತ್ತದೆ. ಕನ್ನಡವು ಇನ್ನೊಂದು ಭಾಷೆಯಿಂದ ಪದಗಳನ್ನು ಎರವಲಾಗಿ ಪಡೆಯಲು ಇರುವ ರಾಜಕೀಯ, ಸಾಂಸ್ಕೃತಿಕ ಆವಶ್ಯಕತೆಗಳ ಬಗ್ಗೆ ಚರ್ಚಿಸಲಾಗಿದೆ.

"ಶಬ್ದ, ಅರ್ಥಗಳ ಬೆನ್ನು ಹತ್ತಿ" ಒಂದು, ಎರಡು, ಮೂರು ಈ ಲೇಖನಗಳಲ್ಲಿ ಪದಗಳಿಗೆ ಸಂಬಂಧಿಸಿದಂತೆ ಜನರಿಂದ ಕೇಳಲ್ಪಟ್ಟ ಪ್ರಶ್ನೆಗಳಿಗೆ ಉತ್ತರವಾಗಿ ಈ ಲೇಖನಗಳನ್ನು ಬರೆಯಲಾಗಿದೆ. ಯಾವುದೋ, ಒಂದು ಹೊಸಪದ ಅಥವಾ ನುಡಿಗಟ್ಟಿನ ಬಗ್ಗೆ ಅರ್ಥ ಅಥವಾ ಅದರ ನಿಷ್ಪತ್ತಿ, ಅದು ಕನ್ನಡದಲ್ಲಿ ಬಳಕೆಗೆ ಬಂದ ಹಿನ್ನೆಲೆಗೆ ಸಂಬಂಧಿಸಿದಂತೆ ಎದ್ದ ಅನೇಕ ಪ್ರಶ್ನೆಗಳಿಗೆ ಈ ಲೇಖನದಲ್ಲಿ ಉತ್ತರಿಸಲಾಗಿದೆ. ಅಲ್ಲದೆ ಇಂಗ್ಲಿಶನಿಂದ ಬಂದ ಪದಗಳ ಬಗ್ಗೆ ವಿವರಣೆ ನೀಡಲಾಗಿದೆ. ಕನ್ನಡದಲ್ಲಿ ಇಂಗ್ಲಿಶ್ ಪದಗಳಿಗೆ ಹೊಸಪದಗಳನ್ನ ರಚಿಸಲಾಗಿದೆ. ಅವುಗಳ ದೊಡ್ಡ ಪಟ್ಟಿಯನ್ನೇ ಇವರು ಈ ಲೇಖನದಲ್ಲಿ ನೀಡಿದ್ದಾರೆ. ಉದಾ.

ಗಗನಸಖಿ < Air hostess

ತಿದ್ದುಪಡಿ < Amendament

ವಾತಾವರಣ < Atmosphere

ಕಾಳಸಂತೆ < black market ಇತ್ಯಾದಿ

ಈ ಮಾದರಿಯಲ್ಲಿ ಹೊಸ ಪದಗಳನ್ನು ಸೃಷ್ಟಿಸಿರುವುದನ್ನು ವಿವರಿಸಲಾಗಿದೆ. ವಿದ್ವಾಂಸರು ಈ ರೀತಿ ಪದ ಸೃಷ್ಟಿಸುವಲ್ಲಿ ಅನುಸರಿಸಿದ ಮಾರ್ಗಗಳ ಬಗ್ಗೆ ವಿವರಣೆಯಿದೆ. ಕನ್ನಡವು ಇಂಗ್ಲಿಶ್ ಪದಗಳನ್ನು ಅನುವಾದಿಸಿ ಬಳಸುವ ಮಾದರಿಯನ್ನು ಅನುಸರಿಸಿದೆ. ಅವುಗಳ ಬಗ್ಗೆ ಈ ಲೇಖನದಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿದೆ. ಉಳಿದ ಎರಡು ಭಾಗಗಳು ಈ ಮಾದರಿಯಲ್ಲಿಯೇ ಆಗಿವೆ. ವೆಂಕಟಸುಬ್ಬಯ್ಯ ಜಿ. ಅವರದ್ದೆ ಇಗೋ ಕನ್ನಡ, ಸಾಮಾಜಿಕ ನಿಘಂಟು(೨೦೧೩)ನಲ್ಲಿ ಪದಗಳ ಅರ್ಥ, ಪದ ನಿಷ್ಪತ್ತಿ, ಆ ಪದದ ಚಾರಿತ್ರಿಕತೆ ಕುರಿತು ವಿವರಿಸಲಾಗಿದೆ. ಕನ್ನಡದಲ್ಲಿ ಹೊಸ

ಪದಗಳ ರಚನೆಯನ್ನು ವಿವರಿಸಲಾಗಿದೆ. ಅನೇಕ ಸ್ವೀಕೃತ ಗಾದೆಮಾತುಗಳನ್ನ ಅವುಗಳ ಅರ್ಥದ ಹಿನ್ನೆಲೆಯಲ್ಲಿ ಮತ್ತು ಅದರ ಹಿಂದಿರುವ ಸ್ವಾರಸ್ಯವನ್ನು ವಿವರಿಸಲಾಗಿದೆ. ಇದೊಂದು ಮಾಹಿತಿ ಪ್ರಧಾನ ಗ್ರಂಥವಾಗಿದ್ದು ತುಂಬ ಉಪಯುಕ್ತವಾಗಿದೆ. ಈ ಅಧ್ಯಯನಕ್ಕೆ ಆಕರವಾಗಬಲ್ಲ ಅನೇಕ ಶಬ್ದಗಳನ್ನು ಪ್ರಸ್ತುತ ಈ ಗ್ರಂಥದಿಂದ ಪಟ್ಟಿ ಮಾಡಿಕೊಳ್ಳಲಾಗಿದೆ.

ಬಿಳಿಗಿರಿ ಎಚ್.ಎಸ್. ಅವರ ವರಸೆಗಳು(೧೯೯೫) ಈ ಗ್ರಂಥದಲ್ಲಿಯ ಕನ್ನಡದಲ್ಲಿ ಅನ್ಯಭಾಷಾ ಪದಗಳನ್ನು ಗುರುತಿಸುವ ಬಗೆ ಈ ಲೇಖನದಲ್ಲಿ ಕನ್ನಡಕ್ಕೆ ಸ್ವೀಕರಣವಾಗಿ ಬಂದಿರುವ ಪದಗಳನ್ನು ಗುರುತಿಸಲು ಕೆಲವು ನಿಯಮಗಳನ್ನು ಹೇಳಲಾಗಿದೆ. ಈ ನಿಯಮಗಳು ಹೆಚ್ಚಾಗಿ ಸಂಸ್ಕೃತದಿಂದ ಸ್ವೀಕರಣವಾಗಿ ಬಂದ ಪದಗಳನ್ನು ಗುರುತಿಸಲು ಸಹಾಯಕವಾಗುತ್ತದೆ. ಈ ಲೇಖನದಲ್ಲಿ ಗುರುತಿಸಲಾಗಿರುವ ಸೂತ್ರಗಳಿಂದ ಕನ್ನಡ ಪದಗಳ ರಚನೆಯ ಸಾಧ್ಯತೆಗಳನ್ನು ಅರಿಯಲು ಸಹಾಯಕವಾಗುತ್ತದೆ. ಹಾಗೆಯೇ ಕನ್ನಡದಲ್ಲಿರುವ ಸ್ವೀಕರಣ ಪದಗಳನ್ನು ಗುರುತಿಸಲು ಸಹಾಯಕವಾಗುತ್ತದೆ. ಈ ಲೇಖನವು ಅಧ್ಯಯನಕ್ಕೆ ಪೂರಕ ಮಾಹಿತಿ ನೀಡುವುದರಿಂದ ಸಮೀಕ್ಷೆಗೆ ಒಳಪಡಿಸಲಾಗಿದೆ.

ಕನ್ನಡದಲ್ಲಿ ಭಾಷಾವಿಜ್ಞಾನದ ಮೂಲತತ್ವವನ್ನು ವಿವರಿಸುವ ಗಂ್ರಥಗಳು ಕಡಿಮೆಯೇ. ಅದರಲ್ಲೂ ಚಾರಿತ್ರಿಕ ಭಾಷಾವಿಜ್ಞಾನದ ಅಧ್ಯಯನ ಕ್ರಮವನ್ನು ವಿವರಿಸುವ ಗ್ರಂಥಗಳು ಕೆಲವೇ ಕೆಲವು. ಈ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ರಾಮಚಂದ್ರರಾವ್ ಅವರ ಚಾರಿತ್ರಿಕ ಭಾಷಾವಿಜ್ಞಾನ ಮೂಲತತ್ವ ಹಾಗು ವಿಧಾನಗಳು(೨೦೦೪) ಪುಸ್ತಕ ಉಪಯುಕ್ತವಾದದ್ದು. ಈ ಗ್ರಂಥದಲ್ಲಿ ಭಾಷಾವಿಜ್ಞಾನವನ್ನು ಶಾಸ್ತ್ರಿಯವಾಗಿ, ಸರಳವಾಗಿ ವಿವರಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಚಾರಿತ್ರಿಕ ಭಾಷಾವಿಜ್ಞಾನ ಎಂದರೇನು, ಅದರ ಉದ್ದೇಶವೇನು, ಸ್ವರೂಪ ಎಂಥದ್ದು ಮತ್ತು ಪ್ರಾಮುಖ್ಯತೆಯನ್ನು ವಿವರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಚಾರಿತ್ರಿಕ ಭಾಷಾವಿಜ್ಞಾನದ ಮೂಲತತ್ವವನ್ನು ತುಂಬಾ ವಿದ್ವತ್ಪೂರ್ಣವಾಗಿ ವಿವರಿಸಲಾಗಿದೆ.

೧. ಭಾಷಿಕ ಬದಲಾವಣೆ ತತ್ವ

(ಧ್ವನಿ, ಧ್ವನಿಮಾ, ಆಕೃತಿ, ಆಕೃತಿಮಾ, ವಾಕ್ಯರಚನೆ, ಅರ್ಥ ಬದಲಾವಣೆ)

೨. ಭಾಷಿಕ ವರ್ಗಿಕರಣ (ಅನುವಂಶಿಕ, ಕ್ಷೇತ್ರಿಯ, ರಾಚನಿಕ)

೩. ಭಾಷಿಕ ಪುನರಚನಾ ತತ್ವ (ಆಂತರಿಕ, ಬಾಹ್ಯ)

೪. ಭಾಷಿಕ ವ್ಯತ್ಯಯ

ಚಾರಿತ್ರಿಕ ಭಾಷಾವಿಜ್ಞಾನದ ಅಧ್ಯಯನ ಕ್ರಮವನ್ನು ಈ ಅಂಶಗಳ ಮೂಲಕ ವಿವರಿಸಲಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಭಾಷಿಕ ಬದಲಾವಣೆ, ಭಾಷಿಕ ವರ್ಗೀಕರಣ ಭಾಷಿಕ ಪುನರಚನಾ

ತತ್ವ ಇವುಗಳನ್ನ ಪ್ರತ್ಯೇಕವಾಗಿ ವಿವರವಾಗಿ ವಿವರಿಸಲಾಗಿದೆ. ಚಾರಿತ್ರಿಕ ಭಾಷಾವಿಜ್ಞಾನವನ್ನು ಅರಿತುಕೊಳ್ಳಲು ಇದೊಂದು ಉದ್ಗ್ರಂಥವಾಗಿದೆ.

ಕನ್ನಡ ಭಾಷೆಯ ಇತಿಹಾಸ ವಿವರಿಸುವ ಅನೇಕ ಗ್ರಂಥಗಳನ್ನ ಕಾಣುತ್ತೇವೆ, ಅವುಗಳೆಲ್ಲ ಪೂರ್ವದ ಹಳಗನ್ನಡ, ಹಳೆಗನ್ನಡ, ನಡುಗನ್ನಡ ಮತ್ತು ಆಧುನಿಕ ಕನ್ನಡವೆಂದು ವಿಭಾಗಿಸಿ ಅಧ್ಯಯನ ಮಾಡಿದ್ದಾಗಿವೆ. ಆದರೆ ಕಾಡದೇವರ ಮಠ ಎಸ್.ಎಲ್. ಅವರ ಕನ್ನಡ ಭಾಷೆಯ ಇತಿಹಾಸ(೧೯೯೮), ಈ ಗ್ರಂಥದಲ್ಲಿ ಕನ್ನಡ ಭಾಷೆಯ ಇತಿಹಾಸ ನೋಡುವ ಕ್ರಮವೇ ಬೇರೆಯಾಗಿದೆ. ಪೂರ್ವದ ಹಳಗನ್ನಡವನ್ನು ಶಾಸನವನ್ನು ಆಕರವನ್ನಾಗಿಟ್ಟು ವಿವರಿಸಲಾಗಿದೆ. ಶಾಸನಗಳಲ್ಲಿ ಬಳಕೆಯಲ್ಲಿರುವ ಪೂರ್ವದ ಹಳಗನ್ನಡ ಭಾಷಿಕ ರೂಪವನ್ನು ವಿವರಿಸಿದ್ದಾರೆ. ಪೂರ್ವದ ಹಳಗನ್ನಡದಲ್ಲಿರುವ ವಿಶಿಷ್ಟ ರೂಪಗಳನ್ನು ಮತ್ತು ಅದರ ರಾಚನಿಕ ವಿನ್ಯಾಸವನ್ನು ಸುದೀರ್ಘವಾಗಿ ಚರ್ಚಿಸಲಾಗಿದೆ. ಶಾಸದಲ್ಲಿರುವ ಕನ್ನಡದ ಸ್ಖಾಲಿತ್ಯ, ಸ್ವರ ವ್ಯತ್ಯಯ, ಲಿಂಗ-ವಚನ ಪ್ರತ್ಯಯ ಬಳಕೆಯಲ್ಲಿದ್ದ ವಿಶಿಷ್ಟ ಧ್ವನಿಗಳನ್ನು ಶಾಸ್ತ್ರೀಯವಾಗಿ ವಿವರಿಸಲಾಗಿದೆ.

ಹಳಗನ್ನಡವನ್ನು ಸಾಹಿತ್ಯ ಮಾಧ್ಯಮವಾಗಿ ಗ್ರಹಿಸುವ ಲೇಖಕರು ಹಳಗನ್ನಡ ಕಾಲಕ್ಕೆ ಕನ್ನಡದಲ್ಲಾದ ಎಲ್ಲಾ ಬದಲಾವಣೆಯನ್ನು ಸುದೀರ್ಘವಾಗಿ ಚರ್ಚಿಸಿದ್ದಾರೆ. ಆ ಕಾಲದ ವ್ಯಾಕರಣ ಗ್ರಂಥಗಳನ್ನು ಆಕರವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಕೇಶಿರಾಜ ವಿವರಿಸುವ ದಕ್ಷಿಣೋತ್ತರಮಾರ್ಗ, ಸಂಧಿ, ಸಮಾಸಗಳ ಕುರಿತು ವಿವರಿಸಲಾಗಿದೆ. ವಿಶೇಷವಾಗಿ ಗಮಕ ಸಮಾಸ, ಅರಿ ಸಮಾಸಗಳ ಬಗ್ಗೆ ವಿವರಿಸಿದ್ದಾರೆ. ಹಳಗನ್ನಡದಲ್ಲಾದ ಧ್ವನಿ ಬದಲಾವಣೆಗಳನ್ನು ಈ ವ್ಯಾಕರಣ ಗ್ರಂಥಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

ನಡುಗನ್ನಡವನ್ನ ವಚನಗಳ ಭಾಷೆಯ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಹೊಸಗನ್ನಡವನ್ನ ಕನ್ನಡ ಭಾಷೆಯ ನವೀಕರಣವೆಂದು ಭಾವಿಸುವ ಲೇಖಕರು ಈ ನವೀಕರಣಕ್ಕೆ ಕಾರಣವೇನು ಎನ್ನುವುದನ್ನು ಚರ್ಚಿಸುತ್ತಾರೆ. ನವೀಕರಣದ ವಿಧಾನ, ಹೊಸ ಪದ ನಿರ್ಮಾಣ ವಿಧಾನ, 'ಇಸು' ಹಚ್ಚಿ ಕ್ರಿಯಾಪದಗಳ ನಿರ್ಮಾಣ, ಅನ್ಯಭಾಷೆಯ ಪದಗಳ ಸ್ವೀಕರಣ ಪದಗಳ ಕುರಿತು ಚರ್ಚಿಸಲಾಗಿದೆ. ಕನ್ನಡಕ್ಕೆ ಬಂದ ಸ್ವೀಕರಣ ಪದಗಳ ಬಗ್ಗೆ ವಿವರಿಸುತ್ತ, ಸಂಸ್ಕೃತ, ಅರಬ್ಬಿ, ಪಾರಸಿ, ಮರಾಠಿ, ಇಂಗ್ಲಿಶ್ ಭಾಷೆಗಳಿಂದ ಬಂದ ಪದಗಳೊಂದಿಗೆ ಕನ್ನಡ ಶಬ್ದಕೋಶ ಮಾಡಿಕೊಂಡ ಹೊಂದಾಣಿಕೆ, ಬದಲಾವಣೆ, ಪಡೆದುಕೊಂಡ ಹೊಸ ರಚನೆ ಬಗ್ಗೆ ವಿವರಿಸಲಾಗಿದೆ.

ಡಿ.ಎನ್. ಶಂಕರ ಬಟ್‌ರು ತಮ್ಮ ಕನ್ನಡ ನುಡಿ ನಡೆದು ಬಂದ ದಾರಿ(೨೦೧೦) ಗ್ರಂಥದಲ್ಲಿ ಕನ್ನಡ ವ್ಯಾಕರಣವನ್ನು ಭಾಷಾಶಾಸ್ತ್ರದ ಹಿನ್ನೆಲೆ ಇಟ್ಟುಕೊಂಡು ಚಾರಿತ್ರಿಕ ನೆಲೆಗಟ್ಟಿನಲ್ಲಿ ವಿವರಿಸುತ್ತಾರೆ. ಕನ್ನಡ ಸ್ವರ, ವ್ಯಂಜನಗಳ ಸ್ವರೂಪ, ಉಚ್ಚಾರಣಾ ಕ್ರಮ, ಕಾಲಘಟ್ಟದಲ್ಲಿ ಅವುಗಳಲ್ಲಾದ ಬಲಾವಣೆಯನ್ನು ವಿವರಿಸಲಾಗಿದೆ.

ಪದಗಳ ರಚನೆಯನ್ನು ವಿವರಿಸುತ್ತ ಕನ್ನಡ ನಾಮಪದ, ಕ್ರಿಯಾಪದ, ವಿಶೇಷಣಗಳು ಮೂಲ ದ್ರಾವಿಡ ಕಾಲದಿಂದ ಇಂದಿನ ಹೊಸಗನ್ನಡ ಕಾಲದವರೆಗೆ ಬೆಳೆದು ಬಂದ ಬಗೆಯನ್ನು ವಿವರಿಸಲಾಗಿದೆ. ಕನ್ನಡದಲ್ಲಾದ ಬೆಳವಣಿಗೆ ಉಳಿದ ದ್ರಾವಿಡ ಭಾಷೆಗಳಲ್ಲಿ ಅಥವಾ ಪರಸ್ಪರ ಕನ್ನಡದ ಇತರ ಒಳನುಡಿಗಳಲ್ಲಿ ಹೇಗೆ ನಡೆದಿದೆ ಎನ್ನುವುದನ್ನು ವಿವರಿಸಲಾಗಿದೆ. ಈ ಗ್ರಂಥದಲ್ಲಿ ಏಕ ಕಾಲಕ್ಕೆ ವಿವರಣಾತ್ಮಕ, ತೌಲನಿಕ, ಚಾರಿತ್ರಿಕ ಮಾದರಿಗಳನ್ನು ಬಳಸಿಕೊಂಡು ಕನ್ನಡ ಭಾಷೆಯ ವ್ಯಾಕರಣವನ್ನು ಸಮಗ್ರವಾಗಿ ವಿವರಿಸಲಾಗಿದೆ.

ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ ಮತ್ತು ಕನ್ನಡ ಭಾಷೆಯ ಕಲ್ಪಿತ ಚರಿತ್ರೆ ಈ ಎರಡು ಗ್ರಂಥಗಳಲ್ಲಿ ಶಂಕರ ಬಟ್‌ರು ಕನ್ನಡದ ಬೆಳವಣಿಗೆಯನ್ನ ಒಂದು ಭಿನ್ನ ನೆಲೆಯಲ್ಲಿ ಕಟ್ಟಿಕೊಡುತ್ತಾರೆ. ಈ ಹೊತ್ತಿನ ಕನ್ನಡವನ್ನು ದಾಖಲೆಗಳಿಂದ ಲಭ್ಯವಾಗುವ ಕಾಲದಿಂದ ಆಕರಗಳನ್ನು ಬಳಸಿಕೊಂಡು ಕನ್ನಡದ ಸ್ವರೂಪವನ್ನು ಕಟ್ಟಿಕೊಡುತ್ತಾರೆ. ಮೂಲಕನ್ನಡ ಈ ಪರಿಕಲ್ಪನೆಯು ಕನ್ನಡದಲ್ಲಿ ಈಗಿರುವ ಅನೇಕ ಪ್ರಭೇದಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ಹೇಗೆ ಮೂಲದ್ರಾವಿಡ ಭಾಷೆಗಳು ಒಡೆದುಕೊಂಡು ಪ್ರತ್ಯೇಕಗೊಂಡವೋ ಹಾಗೆ ಈಗಿರುವ ಕನ್ನಡ ಭಾಷೆಯ ಪ್ರಭೇದಕ್ಕೂ ಒಂದು ಮೂಲವಾದ ಕನ್ನಡವಿರಬಹುದು ಅಥವಾ ಹಾಗೆ ಕಲ್ಪಿಸಿಕೊಳ್ಳುವ ಅಗತ್ಯತೆಯ ಹಿನ್ನೆಲೆಯಲ್ಲಿ ಬಟ್‌ರು ಚರ್ಚಿಸುತ್ತಾರೆ. ಈ ಹೊತ್ತಿನ ಕನ್ನಡವು ಅನೇಕ ಭಾಷೆಯ ಪ್ರಭಾವಕ್ಕೊಳಗಾಗಿ ತನ್ನ ಆಂತರಿಕ ರಚನೆಯಲ್ಲಿ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿದೆ.

ಈ ಗ್ರಂಥಗಳು ಆಧುನಿಕ ಕನ್ನಡ ಪ್ರಭೇದಗಳನ್ನು ಗಮನದಲ್ಲಿಟ್ಟುಕೊಂಡು ಬರೆಯಲ್ಪಟ್ಟಿರುವುದರಿಂದ ಇಂದಿನ ಕನ್ನಡದ ಆಂತರಿಕ ರಚನೆಯ ಒಂದು ಚಿತ್ರಣವನ್ನು ಇಲ್ಲಿ ಕಾಣಬಹುದಾಗಿದೆ. "ಆಧುನಿಕ ಕನ್ನಡದಲ್ಲಿಯ 'ಬ'ಕಾರಾದಿಯಾದ ಹೆಚ್ಚಿನ ಪದಗಳು ಹಳಗನ್ನಡದ 'ವ'ಕಾರದಿಂದ ಬಂದವುಗಳೇ ಆಗಿವೆ. ಹಾಗೆಯೇ ಕೆಲವು 'ಪ'ಕಾರದಿಂದ (ಬಸಳೆ, ಬಡ್ಡು, ಬಂಡೆ, ಬಯಲು, ಬೊಕ್ಕೆ ಬೊಳು...) ಬಂದಿವೆ. ಮತ್ತು ನಡುಗನ್ನಡ ಕಾಲದಿಂದ 'ವ'ಕಾರದಿಂದ ಪ್ರಾರಂಭವಾಗುವ ಪದಗಳಲ್ಲಿ ಹೆಚ್ಚಿನವು ಸ್ವೀಕರಣದಿಂದ ಬಂದಿವೆ."

ಕೆಲವು ಆಧುನಿಕ ಪ್ರಭೇದಗಳಲ್ಲಿ ಮೂರಕ್ಷರಗಳಿರುವ ಪದಗಳಲ್ಲಿ ಸ್ವರದ ಲೋಪದಿಂದಾಗಿ 'ರ'ಯುಕ್ತವಾದ ವ್ಯಂಜನ ಗುಚ್ಛಗಳು ಮೂಡಿಬಂದಿವೆ.

| ಬರಹ | ಬಳ್ಳಾರಿ | ಕಲಬುರಗಿ | ಹಾಲಕ್ಕಿ | ನಂಜನಗುಡು |
|---|---|---|---|---|
| ಕುರುಡು | ಕುಳ್ಡ | ಕುಡ್ಡ | ಕುಯ್ಡ | ಕುಣ್ಡ |
| ಬುರುಡೆ | ಬುಳ್ಡೆ | ಬುಡ್ಡಿ | – | ಬುಣ್ಡ |
| ಹೊರಡು | ವಲ್ಡು | ಹೊಂಡ್ರು | ಹೊಯ್ಡು | ವಣ್ಡು |

ಇಂಥ ಮಾದರಿಯ ಮಾಹಿತಿಗಳನ್ನು ಪರಿಶೀಲಿಸಿ ಇಂದಿನ ಕನ್ನಡದ ಸ್ವರೂಪವನ್ನು ಕಟ್ಟಿಕೊಳ್ಳಬೇಕಾಗಿದೆ.

ರಾಮಚಂದ್ರರಾವ್ ಬಿ.(೧೯೮೮) ಅವರ ಕನ್ನಡ ಭಾಷೆಯ ಸ್ವರೂಪ ಪುಸ್ತಕದಲ್ಲಿ ಕನ್ನಡವು ಕಾಲ ಕಾಲಕ್ಕೆ ಪಡೆದುಕೊಂಡಿರುವ ಹೊಸತನವನ್ನು ವಿವರಿಸಲಾಗಿದೆ. ಶಾಸನಗಳಲ್ಲಿಯ ಕನ್ನಡ ಸಾಹಿತ್ಯಿಕ ಮಾಧ್ಯಮವಾಗಿ ಆರಂಭದ ಬಗ್ಗೆ ಸುದೀರ್ಘ ವಿವರಣೆ ಇದೆ. ಕನ್ನಡದಲ್ಲಿ ವ್ಯಾಕರಣಾತ್ಮಕವಾಗಿ ಆದ ಬೆಳವಣಿಗೆಗಳು, ಸಾಹಿತ್ಯಿಕವಾಗಿ ಭಾಷಾ ಬಳಕೆಯಾದದ್ದನ್ನು ವಿವರಿಸಲಾಗಿದೆ. ಸಾಹಿತ್ಯ ಮಾಧ್ಯಮವಾದ ಹಳಗನ್ನಡ ಈ ಅಧ್ಯಾಯದಲ್ಲಿ ಕನ್ನಡದ ಸ್ವರೂಪ ವಿವರಿಸುವುದರೊಂದಿಗೆ ವ್ಯಾಕರಣಾಂಶಗಳನ್ನು ಮುಖ್ಯವಾಗಿ ವಿವರಿಸಲಾಗಿದೆ. ಪ್ರತಿಯೊಂದು ವ್ಯಾಕರಣ ಪರಿಭಾಷೆಗಳನ್ನು ಪ್ರಾಚೀನ ಸಾಹಿತ್ಯ ಕೃತಿಗಳಿಂದ ಉದಾಹರಣೆಗಳನ್ನು ಎತ್ತಿಕೊಂಡು ವಿವರಿಸಲಾಗಿದೆ. ಈ ಅಧ್ಯಯನದಲ್ಲಿ ಮುಖ್ಯವಾಗಿ ಪೂರ್ವದ ಹಳಗನ್ನಡ, ಹೊಸಗನ್ನಡ ಕಾಲಘಟ್ಟವನ್ನು ವಿವರಿಸಲಾಗಿದೆ. ಮುಂದಿನ ಅಧ್ಯಾಯದಲ್ಲಿ ನಡುಗನ್ನಡ ಭಾಷೆಯ ಸ್ವರೂಪ ವಿವರಿಸುತ್ತಾರೆ. ಈ ಗ್ರಂಥ ಮುಖ್ಯವಾಗಿ ಶಬ್ದಕೋಶದ ಬಗ್ಗೆ ಗಮನ ಹರಿಸಿರುವುದು ಕಂಡುಬರುತ್ತದೆ. ಈ ಗ್ರಂಥದ ಆಶಯದಂತೆ ಇದು ಪ್ರತಿ ಕಾಲಘಟ್ಟದ ಸಾಂಸ್ಕೃತಿಕ ಬೆಳವಣಿಗೆಗಳನ್ನು ಪದಗಳ ಆಧಾರದ ಮೇಲೆ ಅರಿಯುವ ಪ್ರಯತ್ನವಿದೆ.

ಈ ಗ್ರಂಥದಲ್ಲಿ ಮುಖ್ಯವಾಗಿ ಆಧುನಿಕ ಕನ್ನಡದ ಬಗ್ಗೆ ವಿವರಗಳಿವೆ. ಇಲ್ಲಿ ಶಿಷ್ಟಭಾಷೆ ಆಧುನಿಕ ಕನ್ನಡ ಅನ್ಯ ಪರಿಸರದ ಭಾಷೆಗಳೊಂದಿಗೆ ಕನ್ನಡದ ಸಾಂಗತ್ಯವನ್ನು ವಿವರಿಸುತ್ತದೆ. ಇಲ್ಲಿ ಮುಖ್ಯವಾಗಿ ದ್ರಾವಿಡ ನುಡಿಗಳೊಂದಿಗೆ ಕನ್ನಡದ ಸಹಾಚರ್ಯದ ಬಗ್ಗೆ ವಿವರಿಸಲಾಗಿದೆ. ಭಾಷೆಯ ಆಧುನೀಕರಣಕ್ಕೆ ಸಂಬಂಧಿಸಿದಂತೆ ತುಂಬ ಮಹತ್ವದ ಮಾಹಿತಿಗಳನ್ನು ಒದಗಿಸಿದ್ದಾರೆ. ಈ ಅಧ್ಯಾಯದಲ್ಲಿ ಪ್ರಸ್ತುತ ಶೀರ್ಷಿಕೆಗೆ ಸಂಬಂಧಿಸಿದಂತೆ ತುಂಬಾ ಉಪಯುಕ್ತವಾದ ಮಾಹಿತಿ ಇದೆ.

ಈ ಅಧ್ಯಾಯದಲ್ಲಿ ಅವರು ಕನ್ನಡ ಭಾಷೆಯು ಆಧುನಿಕರಣಕ್ಕೆ ತೆರೆದುಕೊಳ್ಳಲೂ ಕಾರಣಗಳನ್ನು ಗುರುತಿಸುತ್ತಾರೆ. ಅದರಲ್ಲಿ ಮುಖ್ಯವಾಗಿ ಆಡಳಿತ ಸುಸುತ್ರವಾಗಿ ನಡೆಸಲು ಸ್ಥಳೀಯ ಭಾಷೆಗಳ ಬಳಕೆ ಒಂದಾದರೆ, ಧರ್ಮಪ್ರಚಾರಕ್ಕೆ ಸ್ಥಳೀಯರ ಗಮನ ಸೆಳೆಯುವುದು ಅತಿ ಮುಖ್ಯವಾಗಿತ್ತು ಮತ್ತು ಕಾಲ ಕಾಲಕ್ಕೆ ಆದ ಅನೇಕ ಅನ್ಯ ಸಂಸ್ಕೃತಿಗಳ, ಭಾಷೆಗಳ ಪ್ರಭಾವ ಕನ್ನಡ ಸಮಾಜ ಮತ್ತು ಭಾಷೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ಕನ್ನಡವು ತನ್ನ ಪದಕೋಶವನ್ನು ಮುಖ್ಯವಾಗಿ ಮೂರು ಪ್ರಕಾರಗಳಲ್ಲಿ ಬೆಳೆಸಿಕೊಂಡಿದೆಯೆಂದು ಇವರು ಗುರುತಿಸುತ್ತಾರೆ.

೧. ಅನ್ಯ ಭಾಷೆ ಪದಗಳ ಸ್ವೀಕರಣ

೨. ಭಾಷೆಯ ಮೂಲ ಸಾಮಗ್ರಿಗಳಿಂದ ಹೊಸ ಪದ ಸೃಷ್ಟಿ

೩. ಅನ್ಯ ಭಾಷೆಯ ನುಡಿಗಳನ್ನು ಅಳವಡಿಸಿಕೊಳ್ಳುವುದು.

ಈ ಮೂರು ಹಂತದ ನುಡಿ ಬೆಳವಣಿಗೆಯನ್ನು ಚರ್ಚಿಸಲಾಗಿದೆ. ಈ ಮೂರು ಮಾದರಿಯಲ್ಲಿ ಕನ್ನಡ ಪದಕೋಶ ಬೆಳೆದು ಬಂದಿದೆ. ಮುಖ್ಯವಾಗಿ ಕನ್ನಡ ಭಾಷೆಯು ಹೊಸ ಪದಗಳನ್ನು ನಿರ್ಮಿಸುವಾಗ ಅನುಸರಿಸಿದ ಮಾರ್ಗವನ್ನು ಈ ರೀತಿ ವಿವರಿಸಬಹುದು.

- ಪದ ನಿರ್ಮಾಣ ವಿಧಾನ, ಕನ್ನಡವು ತನ್ನ ಮೂಲ ಸಾಮಗ್ರಿಯನ್ನು ಬಳಸಿಕೊಂಡು ಹೊಸ ಪದಗಳನ್ನು ನಿರ್ಮಿಸಿಕೊಂಡಿದೆ.
- ಕನ್ನಡಕ್ಕೆ ಸ್ವೀಕೃತವಾದ ಅನ್ಯದೇಶ ಪದಗಳನ್ನು ಸಂದರ್ಭಕ್ಕೆ ಬೇಕಾದ ಹಾಗೆ ಸಮಾಸ ಪದಗಳನ್ನು ನಿರ್ಮಿಸಿಕೊಂಡಿದೆ.
- ಪ್ರತ್ಯಯಗಳನ್ನು ಹಚ್ಚಿ ಹೊಸ ಪದಗಳನ್ನು ಸೃಷ್ಟಿಸಿಕೊಂಡಿದೆ.
- ಸ್ವೀಕರಣ ಪದಗಳಿಗೆ ಸಮಾನವಾಗಿ ಅನೇಕ ಹೊಸ ಪದಗಳನ್ನು ನಿರ್ಮಿಸಿಕೊಂಡಿದೆ.

ಕನ್ನಡ ಸಮಾಜಕ್ಕೆ ಹೊಸ ಸಂಗತಿಗಳು ಬಂದು ತಟ್ಟುತ್ತಿರುವಂತೆಯೆ ಅವರ ಬದುಕಿನ ಶೈಲಿಯಷ್ಟೆ ಅಲ್ಲ ಅವರ ಭಾಷೆ, ಸಂಸ್ಕೃತಿಯಲ್ಲಿ ಅನೇಕ ಬದಲಾವಣೆಯಾಗಿರುವುದನ್ನು ವಿವರಿಸುತ್ತಾರೆ. ಹೊಸಗನ್ನಡವು ಯಾವ ಯಾವ ಭಾಷೆಯಿಂದ ಹೇಗೆಲ್ಲ ಪ್ರಭಾವಿತವಾಗಿದೆ ಎನ್ನುವುದನ್ನು ವಿವರಿಸಿದ್ದಾರೆ. ಈ ಅಧ್ಯಾಯವು ಪ್ರಸ್ತುತ ಶೀರ್ಷಿಕೆಗೆ ಅನೇಕ ಪೂರಕ ಮಾಹಿತಿಯನ್ನು ಒದಗಿಸಬಲ್ಲದಾಗಿದೆ.

ರಾ.ಯ. ಧಾರವಾಡಕರರ ಕನ್ನಡ ಭಾಷಾಶಾಸ್ತ್ರ(೨೦೦೪) ಗ್ರಂಥವು ಕನ್ನಡ ಭಾಷೆಯ ಇತಿಹಾಸವನ್ನು ವಿವರಿಸುವಂತಹದು. ಈ ಗ್ರಂಥದ ನಾಲ್ಕನೆಯ ಅಧ್ಯಾಯದಲ್ಲಿ ಕನ್ನಡ ಪದಕೋಶದ ಬಗ್ಗೆ ವಿವರಿಸಲಾಗಿದೆ. ಕನ್ನಡವು ಆಧುನೀಕರಣಕ್ಕೆ ಒಳಗಾಗಿ ಹೊಸ ಬಗೆಯ ಸ್ವರೂಪ ಪಡೆದುಕೊಂಡಿರುವ ಬಗ್ಗೆ ವಿವರಿಸಲಾಗಿದೆ. ಹೊಸ ಕನ್ನಡದಲ್ಲಿ ಅನೇಕ ಪದಗಳ ಅರ್ಥವು ಬದಲಾಗಿ ಬಳಕೆಯಲ್ಲಿವೆ ಅವುಗಳ ಸ್ವರೂಪ ಮತ್ತು ಕನ್ನಡವು ಸ್ವೀಕರಣ ಪದಗಳಲ್ಲಿ ಮಾಡಿಕೊಂಡ ಬದಲಾವಣೆಯನ್ನು ವಿವರಿಸಲಾಗಿದೆ.

■■■■■

# ಅಧ್ಯಾಯ : ಮೂರು

## ಪದಕೋಶದ ಬೆಳವಣಿಗೆಗೆ ಕಾರಣವಾದ ಅಂಶಗಳು

೩.೧ ರಾಜಕೀಯ ಕಾರಣಗಳು

೩.೨ ಸಾಹಿತ್ಯಿಕ ಕಾರಣಗಳು

೩.೩ ಸಾಂಸ್ಕೃತಿಕ ಕಾರಣಗಳು

೩.೪ ಗಡಿಪ್ರದೇಶಗಳ ಪ್ರಭಾವ

೩.೫ ಹೊಸ ವಸ್ತು/ವಿಷಯಗಳ ಕಾರಣ

## ಅಧ್ಯಾಯ : ಮೂರು

# ಪದಕೋಶದ ಬೆಳವಣಿಗೆಗೆ ಕಾರಣವಾದ ಅಂಶಗಳು

**ಬೆ**ಳವಣಿಗೆ ಎನ್ನುವುದು ಜೀವಂತಿಕೆಯ ಲಕ್ಷಣವಾಗಿದೆ. ಬೆಳವಣಿಗೆ ನಿಲ್ಲುವುದು ಸಾವಿನ ಸಂಕೇತವಾಗಿರುತ್ತದೆ. ಇದು ಸಮಾಜ, ಸಂಸ್ಕೃತಿ, ಜನಾಂಗ ಮತ್ತು ಭಾಷೆ ಈ ಎಲ್ಲ ವಿಷಯಗಳಿಗೂ ಅನ್ವಯಿಸುವಂತಹದ್ದಾಗಿದೆ. ಭಾಷೆಯ ಬೆಳವಣಿಗೆ ಎನ್ನುವುದೆ ಭಾಷಿಕ ಅಂಶಗಳಲ್ಲಿ ಆಗುವ ಬದಲಾವಣೆ ಅಥವಾ ಸೇರ್ಪಡೆಗಳ ಮೇಲೆ ಅವಲಂಬಿಸಿದೆ. ಬೆಳವಣಿಗೆ ಎನ್ನುವುದು ಯಾವುದೇ ಜೀವಂತ ಭಾಷೆಯ ಲಕ್ಷಣವಾಗಿರುತ್ತದೆ.

ಭಾಷೆಯ ಬೆಳವಣಿಗೆ ಪದಕೋಶದ ಮೇಲೆ ಹೆಚ್ಚು ಅವಲಂಬಿಸಿರುತ್ತದೆ. ಪದಕೋಶದಲ್ಲಾಗುವ ಬದಲಾವಣೆಗಳು ಆ ಭಾಷೆಯ ಬೆಳವಣಿಗೆ ಅಥವಾ ಅಳಿವನ್ನು ನಿರ್ಧರಿಸುತ್ತದೆ. ಪದಗಳ ವೃದ್ಧಿ ಭಾಷೆಯ ಬೆಳವಣಿಗೆಯಾದರೆ, ಪದಗಳು ಬಳಕೆಯಿಂದ ಹಿನ್ನೆಲೆಗೆ ಸರಿಯುವುದು ಆ ಭಾಷೆಯ ಅಳಿವಿನ ಲಕ್ಷಣವಾಗಿದೆ. ಪದಕೋಶದ ಬೆಳವಣಿಗೆ ಸ್ವಭಾಷಿಕ ಪದಗಳ ಬೆಳವಣಿಗೆ ಅಥವಾ ಅನ್ಯಭಾಷಿಕ ಪದಗಳ ಸ್ವೀಕರಣ, ಈ ಎರಡು ಪ್ರಕಾರಗಳಿಂದ ಆಗುತ್ತದೆ.

ಪದಕೋಶದ ಬೆಳವಣಿಗೆಯೆನ್ನುವುದು ಯಾವುದೋ ಒಂದು ಕ್ಷಣದ ಅಥವಾ ನಿಗದಿತ ಸಮಯದಲ್ಲಿ ಘಟಿಸುವ ಘಟನೆಯಲ್ಲ. ಅದು ನಿರಂತರವಾಗಿ ನಡೆಯುವ ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆ ಸಾಧ್ಯವಾಗಲು ಅನೇಕ ಕಾರಣಗಳಿರುತ್ತವೆ. ಈ ಕಾರಣಗಳು ಪ್ರತ್ಯಕ್ಷ ಅಥವಾ ಪರೋಕ್ಷ ಮಾರ್ಗವಾಗಿ ಘಟಿಸುತ್ತವೆ. ಈ ಕಾರಣಗಳು ಭಾಷೆಯಿಂದ ಭಾಷೆಗೆ ಬೇರೆ ಬೇರೆಯಾಗಿರುತ್ತವೆ. ಯಾವುದೇ ಭಾಷೆ ಬಳಕೆಯಾಗುತ್ತಿರುವ ಪರಿಸರದ ಭಾಷಿಕ ಪರಿಸ್ಥಿತಿಯು ಈ ಬದಲಾವಣೆಯ ಮಾನದಂಡವನ್ನು ನಿರ್ಧರಿಸುತ್ತದೆ.

ಕನ್ನಡ ಪದಕೋಶದ ಬೆಳವಣಿಗೆಗೆ ಸಂಬಂಧಿಸಿದಂತೆ ಅನೇಕ ಅಂಶಗಳು ಕಾರಣಗಳಾಗಿವೆ. ಈ ಕಾರಣಗಳು ಕಾಲ ಕಾಲಕ್ಕೆ ಬೇರೆ ಬೇರೆಯಾಗಿವೆ. ಪ್ರತಿಯೊಂದು ಅಂಶವೂ ಅದರದ್ದೇ ಆದ

ಸ್ವರೂಪ ಹೊಂದಿವೆ. ಈ ಸ್ವರೂಪಗಳು ಕೆಲವೊಮ್ಮೆ ಒಂದಕ್ಕೊಂದು ಸಂಬಂಧಿಸಿವೆ ಅಥವಾ ಒಂದರ ಕಾರಣದಿಂದ ಇನ್ನೊಂದರ ಪ್ರಭಾವವಾಗಿದೆ. ಈ ಅಂಶಗಳಲ್ಲಿ ಕೆಲವು ಅಂಶಗಳು ಒಂದು ಕಾಲಘಟ್ಟದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿದ್ದು ಆನಂತರ ಹಿನ್ನೆಲೆಗೆ ಸರಿದ ಅಥವಾ ನಿಂತು ಹೋದ ಸಂದರ್ಭಗಳು ಕಂಡುಬಂದಿವೆ. ಹೀಗೆ ಪ್ರಭಾವ ನಿಂತ ಸಂದರ್ಭದಲ್ಲೂ ಆ ಸಂದರ್ಭದಲ್ಲಿ ಬಂದ ಪದಗಳು ಕನ್ನಡದಲ್ಲಿ ಬಳಕೆಯಲ್ಲಿ. ಕಾಲಘಟ್ಟದ ಪರಿಸ್ಥಿತಿಗಳ ಕಾರಣದಿಂದ ಘಟಿಸಿದ ಪದಕೋಶದ ಬೆಳವಣಿಗೆಯು ಪ್ರತಿಯೊಂದು ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಒಂದೊಂದು ವಲಯದ ಪದಗಳು ಹೆಚ್ಚು ಬೆಳವಣಿಗೆ ಹೊಂದಿರುವುದು ಕಂಡುಬಂದಿದೆ.

ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾದ ಅಂಶಗಳನ್ನು ಈ ಕೆಳಗಿಂತೆ ಕಾಣಬಹುದು.

### ೩.೧ ರಾಜಕೀಯ ಕಾರಣಗಳು

ಕನ್ನಡ ಪದಕೋಶದ ಬೆಳವಣಿಗೆಗೆ ರಾಜಕೀಯ(ರಾಜಕೀಯ ಎನ್ನುವುದು ಆಡಳಿತಾತ್ಮಕ ಎನ್ನುವ ಅರ್ಥದಲ್ಲಿ ಗ್ರಹಿಸಲಾಗಿದೆ.) ಅಂಶಗಳು ತುಂಬಾ ಮಹತ್ವದ ಕಾರಣವಾಗಿವೆ. ರಾಜಕೀಯ ಕಾರಣದಿಂದ ಕನ್ನಡದಲ್ಲಿ ಆಡಳಿತಾತ್ಮಕ ಅಂಶಗಳಿಗೆ ಸಂಬಂಧಿಸಿದಂತೆ ಹೆಚ್ಚು ಹೆಚ್ಚು ಪದಗಳು ಕನ್ನಡ ಪದಕೋಶ ಸೇರಿಕೊಂಡಿವೆ. ಅವುಗಳಲ್ಲಿ ಹೆಚ್ಚಿನವು ಇಂದಿಗೂ ಬಳಕೆಯಲ್ಲಿವೆ.

ಭರತ ಖಂಡದ ಸಂಸ್ಕೃತಿಯ ಚೌಕಟ್ಟಿನಲ್ಲಿ ಅಳವಟ್ಟು ಸುಂದರವಾಗಿ ಅರಳಿರುವ ಸಂಸ್ಕೃತಿ ಕುಸುಮಗಳಲ್ಲಿ ಕರ್ನಾಟಕದ ಸ್ಥಾನ ಬಹಳ ಹಿರಿದು, ಮತ್ತು ವಿಶಿಷ್ಟವಾದುದು. ಸಾಮ್ರಾಜ್ಯಗಳ ನಿರ್ಮಾಣ ಮತ್ತು ಅವುಗಳ ವ್ಯವಸ್ಥೆಯಲ್ಲಿ, ಧಾರ್ಮಿಕ ದರ್ಶನದ ದಿವ್ಯದೃಷ್ಟಿಯಲ್ಲಿ, ಸಾಹಿತ್ಯ ಸೃಷ್ಟಿಯ ರಸಮಾರ್ಗದಲ್ಲಿ, ಶಿಲ್ಪ ಸಂಗಿತಾದಿಗಳ ಕಲೋಪಾಸನೆಯಲ್ಲಿ, ಹೀಗೆ ಜೀವನದ ಎಲ್ಲ ರಂಗಗಳಲ್ಲಿಯೂ ಕರ್ನಾಟಕದ ಸಾಧನೆ ಸಾರ್ಥಕತೆಯನ್ನು ಪಡೆದಿದೆ. ಅತಿ ಪ್ರಾಚೀನಕಾಲದಿಂದಲೂ ಭಾರತೀಯ ಸಂಸ್ಕೃತಿಗೆ ತನ್ನದೇ ಆದ ಉಜ್ವಲ ಪರಂಪರೆಯನ್ನಿತ್ತು ಅದನ್ನು ಬೆಳಸಿಕೊಂಡು ಬಂದಿದೆ*(ತಿಪ್ಪೇರುದ್ರಸ್ವಾಮಿ ಎಚ್.:೨೦೧೬:೭೪)*

ಹಿಂದೆ ಕನ್ನಡ ಭಾಷೆಯನ್ನಾಡುವ ಪ್ರದೇಶಕ್ಕೆಲ್ಲಾ 'ಕರ್ನಾಟಕ' ಎಂಬ ಹೆಸರೊಂದೇ ಪ್ರಚಲಿತವಾಗಿದ್ದಂತೆ ಕಾಣುವುದಿಲ್ಲ 'ಮಹಾರಾಷ್ಟ್ರ', ಲಾಟ, ಕುಂತಲ, ಕೊಂಕಣ, ಪುನ್ನಾಟ, ಇತ್ಯಾದಿ ಹೆಸರುಗಳು ಈ ನಾಡಿನ ಬೇರೆ ಬೇರೆ ಭಾಗಗಳಿಗೆ ಇದ್ದವು. ನಂದರು ದಕ್ಷಿಣ ಭಾರತವನ್ನು ಆಳಿದ್ದರ ಬಗ್ಗೆ ಕೆಲವು ಶಾಸನಗಳಿಂದ ತಿಳಿದು ಬರುತ್ತದೆ. ಅದು ಕರ್ನಾಟಕ ಭಾಗವೇ ಆಗಿರಬೇಕು ಎನ್ನಲಾಗುತ್ತದೆ. ಇವರ ನಂತರ ಚಾಣಕ್ಯನ ಸಹಾಯದಿಂದ ಪಟ್ಟಕ್ಕೆ ಬಂದ ಮೌರ್ಯರ ಚಂದ್ರಗುಪ್ತನು ತನ್ನ ಗುರುವಿನೊಡನೆ ಶ್ರವಣಬೆಳಗೊಳಕ್ಕೆ ಬಂದು ತಪಸ್ಸು ಮಾಡಿ ಸಲ್ಲೇಖನ ವ್ರತದಿಂದ ದೇಹವನ್ನು ಬಿಟ್ಟನೆಂದು ತಿಳಿದು ಬರುತ್ತದೆ. ಈತನ ಮೊಮ್ಮಗನೇ ಆದ ಅಶೋಕ(ಕ್ರಿ.ಪೂ.೨೭೪ ರಿಂದ ೨೭೩) ಆಳ್ವಿಕೆಗೆ ಬಂದನು. ಈತನ ಕೆಲವು ಶಾಸನಗಳು ಕನ್ನಡನಾಡಿನಲ್ಲಿ ದೊರಕಿವೆ. ಈ ಶಾಸನಗಳೇ

ಕರ್ನಾಟಕದ ಐತಿಹಾಸಿಕ ಸ್ಪಷ್ಟತೆಗೆ ಮೊಟ್ಟಮೊದಲನೆಯ ಸಾಕಿಗಳೆನ್ನಬಹುದು. ಕ್ರಿ.ಶ.ದ ಪ್ರಾರಂಭದಲ್ಲಿ ಶಾತವಾನರು ಪ್ರಬಲವಾದ ರಾಜಕೀಯ ಶಕ್ತಿಯಾಗಿ ಕನ್ನಡರಾಜ್ಯವನ್ನು ಆಳಿ ಈ ಸಂಸ್ಕೃತಿಯನ್ನು ಬೆಳೆಯಲು ಕಾರಣರಾದರು. ಕರ್ನಾಟಕವನ್ನಾಳಿದ ಮೊಟ್ಟಮೊದಲನೆಯ ಪ್ರಮುಖ ರಾಜವಂಶ ಇದು. ಚಿತ್ರದುರ್ಗ ಜಿಲ್ಲೆಯಲ್ಲಿರುವ ಚಂದ್ರವಳ್ಳಿಯಲ್ಲಿ ನಡೆದ ಭೂಸಂಶೋಧನೆಗಳಿಂದ ಇವರು ಇಟಲಿ, ಚೀನಾ, ಮೊದಲಾದ ದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿರುವ ಬಗ್ಗೆ ಕುರುಹುಗಳು ಸಿಗುತ್ತವೆ*(ತಿಪ್ಪೇರುದ್ರಸ್ವಾಮಿ ಎಚ್.:೨೦೧೬:೮೨)*.

ಈವರೆಗೂ ಲಭ್ಯವಾಗಿರುವ ಐತಿಹಾಸಿಕ ಆಧಾರಗಳನ್ನು ಗಮನಿಸಿ ಹೇಳಿರುವುದಾದರೆ ಶಾತವಾಹನ, ಗಂಗ ಕದಂಬ, ರಾಷ್ಟ್ರಕೂಟ, ಚಾಲುಕ್ಯ, ವಿಜಯನಗರದಿಂದ ಮೈಸೂರು ಅರಸರವರೆಗೂ ಕರ್ನಾಟಕವನ್ನು ಆಳಿದ ಪ್ರಮುಖ ರಾಜವಂಶಗಳು ಹಲವಾರು. ಅವರಿಗೆ ಅಧೀನರಾಗಿದ್ದ ಚಿಕ್ಕಪುಟ್ಟ ರಾಜವಂಶಗಳಿಗಂತೂ ಲೆಕ್ಕವೇ ಇಲ್ಲ. ಈ ಸಾಮಂತರು ಪ್ರಮುಖ ರಾಜವಂಶಗಳಿಗೆ ಅಧೀನರಾಗಿದ್ದುಕೊಂಡು, ಅವರ ಆಡಳಿತ ಕ್ರಮವನ್ನೇ ಅನುಸರಿಸುತ್ತಾ, ಅವರ ಆಶ್ರಯಕ್ಕೆ ಅಳವಟ್ಟು ನಡೆಯುತ್ತಿದ್ದರು. ಪ್ರಮುಖ ರಾಜವಮಶಗಳಿಗೂ ಸಹ ಅಧಿಕಾರಕ್ಕೆ ಬಂದೊಡನೆ ಹಿಂದಿನದೆಲ್ಲವನ್ನು ನಿರ್ನಾಮಗೊಳಿಸಿ, ಹೊಸ ಸಮಾಜವನ್ನು ಪ್ರಾರಂಭಿಸುವಂತಿರಲಿಲ್ಲ. ಅಧಿಕಾರವನ್ನು ಚಲಾಯಿಸುವ ಕೈ ಬದಲಾಗುತಿತ್ತು; ಅಷ್ಟೆ. ಆಯಾಕಾಲದ ಅವಶ್ಯಕತೆಗಳಿಗನುಗುಣವಾಗಿ ಮತ್ತು ರಾಜರುಗಳ ವ್ಯಕ್ತಿವೈಶಿಷ್ಟ್ಯವನ್ನ ಅವಲಂಬಿಸಿ, ಅವು ವ್ಯಕ್ತವಾಗುವ ರೂಪದಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆ ಕಂಡಿರಬಹುದು. ಆದರೆ ರಾಜತ್ವದ ಗುರಿ ಒಂದೇ ಆಗಿರುತಿತ್ತು*(ತಿಪ್ಪೇರುದ್ರಸ್ವಾಮಿ ಎಚ್.:೨೦೧೬:೧೭೩)* ರಾಜನ ಸಹಾಯಕ್ಕಾಗಿ ಪ್ರತಿಯೊಂದು ರಾಜಮನೆತನಗಳೂ ಅನೇಕ ಪದವಿಗಳನ್ನು ಸೃಷ್ಟಿಸಿಕೊಂಡಿವೆ. ಇವುಗಳು ಸಾಮ್ರಾಜ್ಯದ ವಿಸ್ಥಾರತೆ ಮತ್ತು ಆಡಳಿತ ಕ್ರಮದ ಆಧಾರದ ಮೇಲೆ ರಚನೆಗೊಂಡಿವೆ. ರಾಜನ ಸಹಾಯಕ ಸಲಹೆಗಾರನಾಗಿ ಮಹಾಮಂತ್ರಿ ಆದರೇ ವಿದೇಶ ವ್ಯವಹಾರ, ನ್ಯಾಯ ತಿರ್ಮಾನ, ಹಣಕಾಸು, ಯುದ್ಧ, ತೆರಿಗೆ ಸಂಗ್ರಹ, ರಕ್ಷಣೆ, ಸೈನ್ಯ, ಧರ್ಮ ಮತ್ತು ನೀತಿ ಹೀಗೆ ಅನೇಕ ವಿಷಯಗಳ ಮತ್ರಿಗಳಾಗಿ ನೇಮಕ ಮಾಡುವ ಕ್ರಮವಿತ್ತು. ಇವುಗಳಲ್ಲದೆ ಇವರ ಸಹಾಯಕ್ಕಾಗಿ ಅನೇಕ ಹೊಸ ಆಡಳಿತ ಹುದ್ದೆಗಳು ಹುಟ್ಟಿಕೊಂಡವು. ಈ ಆಡಳಿತ ಹುದ್ದೆಗಳು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ವಿವಿಧ ರಾಜಮನೆತನಗಳ ಆಳ್ವಿಕೆಯಲ್ಲಿ ಅನೇಕ ಬದಲಾವಣೆಗೆ ಒಳಗಾಗಿದ್ದನ್ನು ಗಮನಿಸಬಹುದಾಗಿದೆ. ನಡುಗಾಲದ ಕರ್ನಾಟಕದಲ್ಲಿ ಅನೇಕ ವಿದೇಶಿ ರಾಜಮನೆತನಗಳು ಆಳ್ವಿಕೆಗೆ ಬಂದಿವೆ. ಅವುಗಳಲ್ಲಿ ಮುಸ್ಲಿಂ ರಜಮನೆತನಗಳು ಹೆಚ್ಚು ಪ್ರಭಾವಶಾಲಿಯಾಗಿ ಆಳ್ವಿಕೆ ನಡೆಸಿವೆ. ಈ ಕಾಲದ ಆಡಳಿತ ಕ್ರಮದಲ್ಲಿ ಗಣನೀಯವಾದ ಬದಲಾವಣೆಗಳು ಕಂಡು ಬಂದವು. ಅನೇಕ ಹೊಸ ಹುದ್ದೆಗಳು ಕಂಡುಬಂದವು. ಹದಿನಾರನೆಯ ಶತಮಾನದ ಕಾಲಕ್ಕೆ ಕರ್ನಾಟಕ ಅಥವಾ ಭಾರತೀಯ ಆಡಳಿತಕ್ಕೆ ಬಹುದೊಡ್ಡ ತಿರುವುಗಳು ಕಂಡುಬಂದವು. ರಾಜಮನೆತನಗಳ ಆಳ್ವಿಕೆಯು ನಿಧಾನವಾಗಿ ಹಿನ್ನೆಲೆಗೆ ಸರಿದು ಸಾರ್ವಜನಿಕ

ಸರ್ಕಾರಗಳ ಆಳ್ವಿಕೆಗೆ ಜಾರಿದ ಕಾಲವಿದು. ಈ ಕಾಲದ ಬದಲಾವಣೆಗಳು ಆಡಳಿತ ವಲಯಕ್ಕೆ ಹೊಸ ಆಯಾಮವನ್ನು ತಂದು ಕೊಟ್ಟಿತು. ಮತ್ತು ಆಡಳಿತವು ವಂಶಪಾರಂಪರ್ಯದಿಂದ ಪ್ರಜಾಪ್ರಭುತ್ವದೆಡೆಗೆ ಸಾಗಿತು.

ಆಡಳಿತ ಹುದ್ದೆಗಳು ಆಡಳಿತ ವಿಭಾಗಗಳ ವಿಭಾಗ ಕ್ರಮದ ಮೇಲೆ ಅವಲಂಬಿಸಿರುವುದನ್ನು ಕಾಣಬಹುದಾಗಿದೆ. ಪ್ರತಿಯೊಂದು ರಾಜ ಮನೆತನಗಳು ತಮ್ಮದೇ ಆದ ಆಡಳಿತ ಕ್ರಮವನ್ನು ಅನುಸರಿಸಿವೆ ಮತ್ತು ಆ ಅನುಸರಣೆಯ ಆಧಾರದ ಮೇಲೆ ಆಡಳಿತವನ್ನು ವಿಭಾಗಿಸಿ ಅಧಿಕಾರಿಗಳನ್ನು ನೇಮಿಸಿದ್ದು ಇದೆ. ಆಡಳಿತದಲ್ಲಿ ಮುಖ್ಯವಾಗಿ ಮೂರು ವಿಭಾಗಗಳು ಸಾಮಾನ್ಯವಾಗಿದ್ದರೂ ಇತರೇ ಒಳ ವಿಭಾಗಗಳಲ್ಲಿ ಅನೇಕ ಬದಲಾವಣೆಗಳು ರಾಜಮನೆತನದಿಂದ ರಾಜ ಮನೆತನಕ್ಕೆ ಕಂಡುಬಂದವು. ಇಲ್ಲಿಯು ಕೂಡ ಹದಿನಾರನೆಯ ಶತಮಾನದ ನಂತರ ಹೊಸ ಪ್ರಾದೇಶಿಕ ವಿಭಾಗ ಕ್ರಮ ಕಂಡು ಬಂದಿವೆ.

ಪ್ರಾರಂಭದಲ್ಲಿ ಆಡಳಿತ ಅಧಿಕಾರಿಗಳ, ಆಡಳಿತ ವಲಯಕ್ಕೆ ಸಂಬಂಧಿಸಿದ ಪದಗಳು ಪ್ರಾಕೃತ ಅಥವಾ ಸಂಸ್ಕೃತ ಭಾಷೆಗಳಿಂದ ಸ್ವೀಕರಿಸಿದ್ದಾಗಿವೆ. ಈ ಸ್ವೀಕರಣವು ಮೊಘಲರು ಕರ್ನಾಟಕವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಳ್ಳುವ ವರೆಗೂ ನಡೆಯಿತು. ಮೊಘಲರು ಮತ್ತು ಇತರ ಮುಸ್ಲಿಂ ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಅವರ ಆಡಳಿತ ವರ್ಗ, ಆಡಳಿತ ನೀತಿ ಮತ್ತು ಆಡಳಿತಕ್ಕೆ ಸಂಬಂಧಿಸಿದ ಅನೇಕ ಪದಗಳು ಕನ್ನಡಕ್ಕೆ ಸೇರಿಕೊಂಡವು. ಈ ಕಾಲದಲ್ಲಿ ಭಾರತೀಯ ಆಡಳಿತ ಕ್ರಮದಲ್ಲಿ ಅನೇಕ ಬದಲಾವಣೆಗಳು ಕಂಡುಬಂದು ಆ ಬದಲಾವಣೆಯ ಫಲದಿಂದ ಕನ್ನಡ ಪದಕೋಶಕ್ಕೆ ಅನೇಕ ಪದಗಳ ಸೇರಿಕೆಗೆ ಕಾರಣವಾಗಿದೆ.

೧೫ನೆಯ ಶತಮಾನದ ನಂತರ ಭಾರತಕ್ಕೆ ಬಂದ ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರು ತಮ್ಮ ರಾಜಕೀಯ ಹಕ್ಕನ್ನು ಸಾಧಿಸಲು ಪ್ರಯತ್ನಿಸುತ್ತಿರುವಾಗಲೇ ಭಾರತಕ್ಕೆ ಬಂದ ಬ್ರಿಟೀಶರು ತಮ್ಮ ಅಧಿಪತ್ಯವನ್ನು ಸಾಧಿಸಿದರು. ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿ ಮೂಲಕ ಆಡಳಿತ ಪ್ರಾರಂಭಿಸಿದ ಬ್ರಿಟಿಶರು ಕ್ರಮೇಣ ಸಂಪೂರ್ಣ ಭಾರತದ ಮೇಲೆ ತಮ್ಮ ಅಧಿಪತ್ಯವನ್ನು ಸಾಧಿಸಿದರು.

ಬ್ರಿಟಿಶರ ಆಳ್ವಿಕೆಗೆ ಒಳಪಟ್ಟ ಮೇಲೆ ಕ್ರಮೇಣ ಅವರ ಆಡಳಿತ ಮಾದರಿಗಳು ಬಳಕೆ ಬಂದವು. ಬ್ರಿಟಿಶರ ಆಡಳಿತ ಕ್ರಮಗಳು ಭಾರತಕ್ಕಿಂತ ಸಂಪೂರ್ಣ ಭಿನ್ನವಾಗಿವೆ. ಈ ಭಿನ್ನತೆಗಳು ಮತ್ತು ಇದಕ್ಕೆ ಸಂಬಂಧಿಸಿದ ಪದಕೋಶವು ಈ ಹಿಂದೆ ಇದ್ದ ಸಂಸ್ಕೃತ, ಪಾರಸಿ, ಅರಬ್ಬಿ ಪದಗಳೊಂದಿಗೆ ಕನ್ನಡದಲ್ಲಿ ಬಳಕೆಗೆ ಬಂದವು. ಕ್ರಮೇಣ ಸಂಸ್ಕೃತ ಪದಗಳ ಸ್ಥಾನದಲ್ಲಿ ಇಂಗ್ಲಿಶ್ ಪದಗಳು ಬಳಕೆಗೆ ಬಂದವು. ಭಾರತವು ರಾಜಸತ್ಯತ್ತೆಯಿಂದ ಪ್ರಜಾಪ್ರಭುತ್ವ ವ್ಯವಸ್ಥೆಗೆ ಒಳಪಟ್ಟ ಮೇಲೆ ಆಡಳಿತ ಕ್ರಮಗಳು ಬ್ರಿಟಿಶ್ ಮಾದರಿಯಲ್ಲಿಯೇ ಮುಂದುವರೆದಿದ್ದು ಪ್ರಸ್ತುತ ಉರ್ದು(ಹೆಚ್ಚಿನ ಪದವು ಪಾರಸಿ, ಅರಬ್ಬಿ ಮೂಲದ್ದಾಗಿವೆ) ಮತ್ತು ಇಂಗ್ಲಿಶ್ ಪದಗಳು ಆಡಳಿತಾತ್ಮಕ ಪರಿಭಾಷೆಗಳಾಗಿ

ಉಳಿದು ಕೊಂಡಿವೆ. ಕೆಲವು ಪದಗಳನ್ನು ಕನ್ನಡಕ್ಕೆ ಅನುವಾದಿಸಿ ಬಳಕೆಗೆ ತರಲಾಗಿದ್ದರೂ ಅವುಗಳು ಅಷ್ಟು ವ್ಯಾಪಕತೆ ಹೊಂದಿಲ್ಲ.

ರಾಜಕೀಯ ಅಂಶಗಳ ಕಾರಣದಿಂದ ಆಡಳಿತಕ್ಕೆ ಸಂಬಂಧಿಸಿದಂತೆ ಅನೇಕ ಪದಗಳು ಸ್ವೀಕರಣವಾಗಿ ಬಂದು ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾಗಿವೆ.

**೩.೨ ಸಾಹಿತ್ಯಿಕ ಕಾರಣಗಳು**

ಒಂದು ಜನಾಂಗದ ಸಂಸ್ಕೃತಿಯ ಸಾಧನೆ ಸ್ಪಷ್ಟವಾಗಿ ಗೋಚರವಾಗುವುದು ಅವರ ಸಾಹಿತ್ಯದಲ್ಲಿ. ಮಾನವರು ಕಂಡುಕೊಂಡ ಅಭಿವ್ಯಕ್ತಿಯ ಸಾಧನೆಗಳಲ್ಲೆಲ್ಲಾ ಉಕ್ತಿಯೇ ಅತ್ಯಂತ ಪ್ರಭಾವಶಾಲಿಯಾದುದು. ಸಾಹಿತ್ಯ ರಚನೆಗಳಲ್ಲಿ ಶಾಸ್ತ್ರ ಮತ್ತು ಸಾಹಿತ್ಯ ಎಂಬ ಎರಡು ವಿಭಾಗಗಳು ಕಾಣಬಹುದು. ಈ ಎರಡು ವಿಭಾಗಗಳಲ್ಲಿ ಕನ್ನಡದಲ್ಲಿ ಹುಲುಸಾದ ಸಾಹಿತ್ಯ ರಚನೆಗೊಂಡಿದೆ.

ಕನ್ನಡದಲ್ಲಿ ಈವರೆಗೆ ಉಪಲಬ್ದವಾಗಿರುವ ಗ್ರಂಥಗಳಲ್ಲಿ ಕವಿರಾಜಮಾರ್ಗ ಮೊದಲಿನದು. ಆನಂತರ ಪಂಪ, ರನ್ನ, ಜನ್ನ, ನಾಗವರ್ಮ, ಅಂಡಯ್ಯ, ಹರಿಹರ, ರಾಘವಾಂಕರಂತಹ ಅನೇಕ ಕವಿಗಳು ಕಾವ್ಯ ರಚನೆ ಮಾಡಿದ್ದಾರೆ. ಹಾಗೆಯೇ ಅನೇಕ ಶಾಸ್ತ್ರ ಕೃತಿಗಳು ರಚನೆಯಾಗಿವೆ. ಇವುಗಳಲ್ಲಿ ಹೆಚ್ಚಿನವು ಇತರೇ ಸಾಹಿತ್ಯ ಕೃತಿಗಳ ಪ್ರಭಾವದಿಂದ ರಚನೆಗೊಂಡಿವೆ. ಕನ್ನಡ ಸಾಹಿತ್ಯದ ಬೆಳವಣಿಗೆ ವಿವಿಧ ಕಾಲಘಟ್ಟಗಳಲ್ಲಿ ಒಂದಲ್ಲ ಒಂದು ಭಾಷಿಕ ಸಾಹಿತ್ಯದಿಂದ ಪ್ರೇರಣೆ, ಪ್ರಭಾವಕ್ಕೆ ಒಳಗಾಗಿರುವುದರಿಂದ ಕನ್ನಡ ಸಾಹಿತ್ಯಿಕ ಪದಕೋಶದ ಬೆಳವಣಿಗೆಗೆ ಕಾರಣವಾಗಿದೆ.
ಸಾಮಾನ್ಯವಾಗಿ ಪ್ರಾಚೀನ ಕಾಲದಲ್ಲಿ ಕನ್ನಡದಲ್ಲಿ ರಚನೆಗೊಂಡ ಹೆಚ್ಚಿನ ಕೃತಿಗಳು ಸಂಸ್ಕೃತ ಸಾಹಿತ್ಯದ ಪ್ರಭಾವದಿಂದ ರಚನೆಗೊಂಡಿವೆ. ಪ್ರಾರಂಭದ ಕನ್ನಡವು ಪ್ರಾಕೃತ ಮತ್ತು ಸಂಸ್ಕೃತದ ಕಾವ್ಯ, ನಾಟಕ, ವ್ಯಾಕರಣ, ಛಂದಸ್ಸು ಮತ್ತು ಇತರ ಶಾಸ್ತ್ರಗಳಿಂದ ಪ್ರಭಾವಕ್ಕೆ ಒಳಗಾಗಿ ಅಲ್ಲಿನ ವಿಷಯ ವಸ್ತುಗಳನ್ನು ಕನ್ನಡದಲ್ಲಿ ತರಲು ಮಾಡಿದ ಪ್ರಯತ್ನದ ಫಲವಾಗಿ ಅಲ್ಲಿಯ ಅನೇಕ ಕಾವ್ಯಗಳು ಕನ್ನಡದಲ್ಲಿ ಮರು ವಾಖ್ಯಾನಗೊಂಡಿವೆ. ಪಂಪ, ರನ್ನ, ಜನ್ನ ಮೊದಲಾದ ಅನೇಕ ಕವಿಗಳು ಸಂಸ್ಕೃತ ಕಾವ್ಯಗಳ ಪ್ರಭಾವದಿಂದ ಕನ್ನಡದಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಈ ಕಾವ್ಯಗಳ ಮೂಲಕ ಸಂಸ್ಕೃತ ಮತ್ತು ಪ್ರಾಕೃತ ಪದಗಳು ಕನ್ನಡಕ್ಕೆ ಸ್ವೀಕರಣವಾಗಿವೆ.

ನಡುಗನ್ನಡ ಕಾಲದಲ್ಲಿ ಸಂಸ್ಕೃತ ಕಾವ್ಯಗಳ ಪ್ರಭಾವ ಕಡಮೆಯಾದರು, ಕಾವ್ಯರಚಿಸಲು ಬಳಸಿಕೊಂಡ ಛಂದಸ್ಸು ಮತ್ತು ಛಂದಸ್ಸಿಗೆ ಸಂಬಂಧಿಸಿದ ಪದಗಳು ಕನ್ನಡ ಪದಕೋಶದ ಭಾಗವಾದವು. ಈ ಕಾಲದಲ್ಲೇ ಕನ್ನಡಕ್ಕೆ ವ್ಯಾಕರಣ ಬರೆಯುವ ಪ್ರಯತ್ನಗಳು ಎರಡನೆಯ ನಾಗವರ್ಮ ಮತ್ತು ಕೇಶಿರಾಜರಿಂದ ಕಂಡು ಬಂದು ಸಂಸ್ಕೃತ ವ್ಯಾಕರಣವನ್ನು ಕನ್ನಡಕ್ಕೆ ಅನ್ವಯಿಸಿ ಹೇಳಲಾಯಿತು. ಈ ಕಾರಣದಿಂದ ಅಲ್ಲಿಯ ವ್ಯಾಕರಣ ಪರಿಭಾಷೆಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದವು.

ಈ ಕಾಲದಲ್ಲಿ ಇಸ್ಲಾಂ ರಾಜಮನೆತನಗಳ ಆಸ್ಥಾನಗಳಲ್ಲಿ ಚಾಲ್ತಿಯಲ್ಲಿದ್ದ ಉರ್ದು ಸಾಹಿತ್ಯವು ನಡುಗನ್ನಡ ಕಾಲದ ಕನ್ನಡದ ಮೇಲೆ ಅಷ್ಟೊಂದು ಪ್ರಭಾವ ಬೀರದಿದ್ದರೂ ಹೊಸಗನ್ನಡದಲ್ಲಿ ಇದರ ಪ್ರಭಾವ ಕಾಣಿಸಿಕೊಂಡು ಉರ್ದು ಸಾಹಿತ್ಯದ ಅನೇಕ ಪ್ರಕಾರಗಳು ಕನ್ನಡದಲ್ಲಿ ಬಳಕೆಗೆ ಬರಲು ಕಾರಣವಾಯಿತು.

೧೯ನೆಯ ಶತಮಾನದ ಆನಂತರ ಭಾರತೀಯ ಸಾಹಿತ್ಯದಲ್ಲಿ ಕಂಡುಬಂದ ಪರಿವರ್ತನೆಗಳು ಕನ್ನಡಕ್ಕೆ ಹೊಸ ಆಯಾಮಗಳನ್ನು ನೀಡಿದವು. ಈ ಕಾಲದ ಅನಿವಾರ್ಯದಂತಿರುವ ಇಂಗ್ಲಿಶ್ ಸಾಹಿತ್ಯವು ತನ್ನ ವಿಶಿಷ್ಟ ಕಥನ ವಿಷಯಗಳಿಂದ ಕನ್ನಡ ಪ್ರವೇಶಿಸಿ ಸಾಹಿತ್ಯಕ್ಕೆ ಹೊಸತನವನ್ನು ನೀಡಿತು. ಸಾಹಿತ್ಯ ಪ್ರಕಾರಗಳು, ಸಾಹಿತ್ಯ ವಿಮರ್ಶೆಯ ಪರಿಭಾಷೆಗಳು, ಸಂಶೋಧನೆಗೆ ಸಂಬಂಧಿಸಿದ ಪರಿಭಾಷೆಗಳು ಕನ್ನಡಕ್ಕೆ ಸೇರಿಕೊಂಡು ಅನೇಕ ಪದಗಳು ರಚನೆ ಹೊಂದಲು ಕಾರಣವಾಯಿತು. ಸಾಹಿತ್ಯವು ಬಹುಬೇಗ ಜನಮಾನಸದಲ್ಲಿ ಉಳಿಯಬಲ್ಲ ಮಾಧ್ಯಮವಾಗಿದೆ. ಮತ್ತು ಇದು ಯಾವಾಗಲೂ ಉತ್ಪ್ರೇಕ್ಷೆಗೆ ಒಳಗೊಳ್ಳುವ ಮಾಧ್ಯಮವೂ ಹೌದು. ಹೀಗಾಗಿ ಇಲ್ಲಿ ಪದಗಳ ಬಳಕೆ ಹೆಚ್ಚು ಮಹತ್ವದ್ದಾಗಿರುತ್ತದೆ. ಕನ್ನಡ ಸಾಹಿತ್ಯವು ಎಲ್ಲ ಕಾಲಘಟ್ಟದಲ್ಲೂ ಯಾವುದಾದರೊಂದು ಭಾಷಿಕ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿದೆ. ಈ ಪ್ರಭಾವ ಮತ್ತು ಅಲ್ಲಿಯ ಮಾದರಿ ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾಗಿದೆ.

### ೩. ೩ ಸಾಂಸ್ಕೃತಿಕ ಕಾರಣಗಳು

ಕರ್ನಾಟಕ ತನ್ನ ಜೀವನದ ಎಲ್ಲ ಮುಖಗಳಲ್ಲಿಯೂ ಧರ್ಮವನ್ನಳವಡಿಸಿಕೊಂಡಿತು. ವೇದ ಉಪನಿಷತ್ತುಗಳು, ಆಗಮ ಸ್ಮೃತಿಗಳು, ಇತಿಹಾಸ, ಪುರಾಣಗಳು ನಿರೂಪಿಸಿದ ಮತ್ತು ರೂಪಿಸಿದ ಭಾರತೀಯ ಸಂಸ್ಕೃತಿಯ ಒಂದು ಅವಿಭಾಜ್ಯವಾದ ಅಂಗವಾಗಿ ಇದು ಬೆಳೆದುದಲ್ಲದೆ ಆ ಪರಂಪರೆಯನ್ನು ಬೆಳೆಸುವುದಕ್ಕೆ ತನ್ನ ಕೊಡುಗೆಯನ್ನು ನೀಡಿತು. ಭೌಗೋಳಿಕ ದೃಷ್ಟಿಯಿಂದಲೂ ದಕ್ಷಿಣ ಭಾರತದ ಕೇಂದ್ರವಾಗಿರುವ ಈ ನಾಡು, ಉದಾರವಾದ ಪ್ರಕೃತಿಯ ಅನುಕೂಲಗಳನ್ನು ಒದಗಿಸಿ ಎಲ್ಲ ಧರ್ಮಗಳನ್ನು ಆಕರ್ಷಿಸಿತು. ವೇದಕಾಲಕಿಂತ ಪ್ರಾಚೀನವಾದ ನಾಗಧರ್ಮದಿಂದ ಮೊದಲುಗೊಂಡು ಕಾಲಕಾಲಕ್ಕೆ ಬಂದ ಎಲ್ಲ ಧರ್ಮಗಳೂ ಇಲ್ಲಿ ಆಶ್ರಯ ಪಡೆದವು. ಧರ್ಮ ಸಮನ್ವಯದ ಆದರ್ಶಕ್ಕೆ ಸಮೃದ್ಧವಾದ ರಂಗಭೂಮಿಯಾಗಿ ಪರಿಣಮಿಸಿತು ಕರ್ನಾಟಕ *(ತಿಪ್ಪೇರುದ್ರಸ್ವಾಮಿ ಎಚ್.:೨೦೧೬::೧೯೩).* ಭಾರತವು ಸಾಂಸ್ಕೃತಿಕ ವಿಷಯದ ಪ್ರಯೋಗ ಶಾಲೆಯಂತಿದೆ. ಇಲ್ಲಿ ಅನೇಕ ಧರ್ಮ, ಸಂಪ್ರದಾಯ, ಆಚರಣೆಗಳು ಹುಟ್ಟಿಕೊಂಡಿವೆ. ಬೇರೆಡೆಯಿಂದ ಬಂದು ನೆಲೆಸಿವೆ. ಒಂದು ಧರ್ಮ ಅಥವಾ ಸಂಪ್ರದಾಯ ಹುಟ್ಟುವ ಅಥವಾ ಬೇರೆಡೆಯಿಂದ ಬಂದು ನೆಲಸುವುದರೊಂದಿಗೆ ಆ ಧರ್ಮ ಮತ್ತು ಸಂಪ್ರದಾಯಗಳಿಗೆ ಸಂಬಂಧಿಸಿದ ಅನೇಕ ಪರಿಭಾಷೆಗಳು ಪದಕೋಶದ ಭಾಗವಾಗುತ್ತವೆ.

ಭಾರತದಲ್ಲಿ ಅತಿಪ್ರಾಚೀನ ಧಾರ್ಮಿಕ ಕುರುಹುಗಳು ಸಿಂಧೂ ನಾಗರಿಕತೆಯಲ್ಲಿ ಕಂಡು ಬಂದಿವೆ. ಇಲ್ಲಿ ಶೈವ ಧರ್ಮಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳು ಕಂಡು ಬಂದಿವೆ. ಮತ್ತು ಭಾರತದ ಮೂಲ ನಿವಾಸಿಗಳಲ್ಲಿ ದ್ರಾವಿಡ ಜನಾಂಗವೂ ಒಂದು ಎನ್ನಲಾಗುತ್ತದೆ. ಸಿಂಧೂ ನಾಗರಿಕತೆಯಲ್ಲಿ ಸಿಕ್ಕ ಬರವಣಿಗೆ ದ್ರಾವಿಡದ್ದು ಎನ್ನಲಾಗುತ್ತದೆ. ಇದನ್ನು ನಂಬುವುದಾದರೆ ಭಾರತದಲ್ಲಿ ಮೊದಲು ಶೈವ ಆರಾಧನೆ ಆಚರಣೆಯಲ್ಲಿದ್ದು ಆನಂತರ ವೈಷ್ಣವ ಧರ್ಮದ ಆಗಮನವಾಗಿದೆ. ಕರ್ನಾಟಕಕ್ಕೆ ವೈಷ್ಣವ ಆಚರಣೆಗಳು ಯಾವಾಗ ಬಂದಿತು ಎನ್ನುವುದಕ್ಕೆ ಯಾವುದೇ ಮಾಹಿತಿಗಳಿಲ್ಲ. ಆದರೇ ವೇದ ಉಪನಿಷತ್ತುಗಳು ಭಾರತದಂತೆ ಕರ್ನಾಟಕದಲ್ಲಿ ಆಚರಣೆಯಲ್ಲಿತ್ತು. ಆನಂತರ ಈ ಎರಡೂ ಪರಂಪರೆಗಳನ್ನು ಹಿಂದು ಧರ್ಮವೆಂದು ಗುರುತಿಸಲಾಗುತ್ತದೆ. ಇದರ ಜೊತೆಗೆ ಪ್ರಾಚೀನ ಭಾರತದಲ್ಲಿ ಮುಖ್ಯವಾಗಿ ಕಂಡುಬಂದ ಧರ್ಮಗಳಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ಪ್ರಮುಖವಾದವುಗಳು. ಬೌದ್ಧ ಧರ್ಮವು ದಕ್ಷಿಣಕ್ಕೆ ಯಾವಾಗ ಬಂದಿತೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಮೌರ್ಯರ ಕಾಲಕ್ಕೂ ಹಿಂದೆಯೇ ಈ ಧರ್ಮ ಇಲ್ಲಿ ಪ್ರಚಲಿತವಾಗಿದ್ದಿತೆಂಬುದು ಕೆಲವರ ಅಭಿಪ್ರಾಯ. ಅಶೋಕನ ಕಾಲದಲ್ಲಿಯಂತೂ ಕರ್ನಾಟಕದಲ್ಲಿ ಆಚರಣೆಗೆ ಬಂದಿತ್ತೆನ್ನುವುದಕ್ಕೆ ಮಸ್ಕಿ, ಜಟಿಂಗರಾಮೇಶ್ವರ, ಕೊಪ್ಪಳ, ಸಿದ್ದಾಪೂರಗಳಲ್ಲಿ ಸಿಕ್ಕ ಶಾಸನಗಳಿಂದ ತಿಳಿದುಕೊಳ್ಳಬಹುದು. ಕ್ರಿ.ಪೂ. ೨೨೫ ರಿಂದ ಕ್ರಿ.ಶ. ೨೨೫ರವರೆಗೆ ದಖನ್ನಿನ ಧಾರ್ಮಿಕ ಜೀವನದ ಮೇಲೆ ಪ್ರಭಾವವನ್ನು ಬೀರಿದ ಧರ್ಮಗಳಲ್ಲಿ ಬೌದ್ಧ ಧರ್ಮವೇ ಪ್ರಮುಖವಾದದು.

ಕ್ರಿ.ಪೂ. ೩೦೦ರಲ್ಲಿ ಉತ್ತರದಲ್ಲಿ ಭೀಕರ ಕ್ಷಾಮ ತಲೆದೋರಲು ಭದ್ರಬಾಹು ಮತ್ತು ಚಂದ್ರಗುಪ್ತನೂ ಸೇರಿ ನೂರಾರುಜನ ಶಿಷ್ಯರೊಂದಿಗೆ ಶ್ರವಣ ಬೆಳಗೊಳಕ್ಕೆ ಬಂದರೂ. ಇವರೊಂದಿಗೆ ಜೈನಧರ್ಮವು ಕರ್ನಾಟಕ ಪ್ರವೇಶಿಸಿತು. ಆನಂತರ ಬಂದ ಎಲ್ಲ ರಾಜಮನೆತನಗಳು ಜೈನ ಧರ್ಮಕ್ಕೆ ಪ್ರೋತ್ಸಾಹ ನೀಡಿದವು. ಸುಮಾರು ೧೦ನೆಯ ಶತಮಾನದವರೆಗೂ ಪ್ರಭಾವಶಾಲಿಯಾಗಿ ಆಚರಣೆಯಲ್ಲಿದ್ದ ಜೈನ ಧರ್ಮವು ಆನಂತರ ಕ್ರಮೇಣ ಹಿನ್ನೆಲೆಗೆ ಸರಿಯಿತು.

೧೨-೧೩ನೆಯ ಶತಮಾನದಲ್ಲಿ ಹುಟ್ಟಿಕೊಂಡ ಲಿಂಗಾಯತ ಧರ್ಮದ ಆಚರಣೆಗಳು ಈ ಹಿಂದೆ ಇದ್ದ ಆಚರಣೆಗಳೊಂದಿಗೆ ಸಮಾನತೆ ಹೊಂದಿದ್ದರೂ ಅನೇಕ ಹೊಸ ಪರಿಕಲ್ಪನೆಗಳು ಹೊಸದಾಗಿ ಹುಟ್ಟಿಕೊಂಡವು. ಈ ಕಾಲಕ್ಕಾಗಲೇ ಇಸ್ಲಾಂ ಭಾರತ ಪ್ರವೇಶಿಸಿಯಾಗಿತ್ತು. ಈ ಧರ್ಮದ ಆಚರಣೆಗಳು ಭಾರತೀಯ ಆಚರಣೆಗೆ ತುಂಬಾ ಹೊಸ ಪರಿಕಲ್ಪನೆಗಳನ್ನು ಸೇರಿಸಿತು. ಇದು ಆಚರಣೆ, ಉಡುಗೆ, ತೊಡುಗೆ, ಧಾರ್ಮಿಕ ನಂಬಿಕೆ ಹೀಗೆ ಅನೇಕ ವಿಷಯಗಳಲ್ಲಿ ಭಾರತೀಯತೆಯಿಂದ ಭಿನ್ನವಾಗಿದೆ. ಈ ಧರ್ಮಕ್ಕೆ ಸಂಬಂಧಿಸಿದ ಮತ್ತು ಈ ಧರ್ಮದಿಂದ ಕವಲೊಡೆದ ಸೂಫಿಯಂತ(ಸೂಫಿ ಕಲಬುರಗಿಯಲ್ಲಿ ಹುಟ್ಟಿದೆ ಎನ್ನುವ ವಾದವಿದೆ.) ಹೊಸ ಧರ್ಮ ಹುಟ್ಟಿಕೊಂಡಿದ್ದು ನಡುಗನ್ನಡದ ಪದಕೋಶದ ಬೆಳವಣಿಗೆಗೆ ಪೂರಕವಾಯಿತು. ೧೬ನೆಯ ಶತಮಾನದಲ್ಲಿ ಬ್ರಿಟಿಶ್‌ರ ಆಗಮನದೊಂದಿಗೆ ಕ್ರಿಶ್ಚಿಯನ್ ಧರ್ಮವು ಭಾರತ ಪ್ರವೇಶಿಸಿತು. ಈ

ಧರ್ಮ ಕೂಡ ತನ್ನೊಂದಿಗೆ ಅನೇಕ ಸಂಪ್ರದಾಯಿಕ ಆಚರಣೆಗಳು ಮತ್ತು ಆಚರಣೆಗೆ ಸಂಬಂಧಿಸಿದ ಪದಕೋಶದೊಂದಿಗೆ ಕನ್ನಡ ನೆಲ ಪ್ರವೇಶಿಸಿತು.

ಈ ಎಲ್ಲ ಧರ್ಮಗಳು ಕರ್ನಾಟಕ ಧಾರ್ಮಿಕ ಪರಿಭಾಷೆಗಳ ಬೆಳವಣಿಗೆಗೆ ಕಾರಣವಾಯಿತು. ಹೊಸ ಹೊಸ ಆಚರಣೆಗಳು ಆ ಆಚರಣೆಗೆ ಸಂಬಂಧಿಸಿದ ಪದಗಳು ಕನ್ನಡದಲ್ಲಿ ಬಳಕೆಗೆ ಬಂದವು. ಭಾರತದ ಸಾಂಸ್ಕೃತಿಕ ಇತಿಹಾಸ ತುಂಬ ಹುಲುಸಾಗಿದ್ದು ಧರ್ಮ ಮತ್ತು ಆಚರಣೆಗೆ ಸಂಬಂಧಿಸಿ ಅನೇಕ ಪದಗಳು ಕನ್ನಡ ಪದಕೋಶದ ಭಾಗವಾಗಿವೆ.

### ೩.೪ ಗಡಿಪ್ರದೇಶಗಳ ಪ್ರಭಾವ

ಯಾವುದೇ ಭಾಷಿಕ ಪ್ರದೇಶಕ್ಕೆ ಅದರ ನೆರೆ ಭಾಷಿಕ ಪರಿಸರವು ತುಂಬಾ ಪ್ರಭಾವ ಬೀರುವಂತದ್ದಾಗಿರುತ್ತದೆ. ಗಡಿಗಳಲ್ಲಿ ಅನೇಕ ಕೊಡುಕೊಳ್ಳುವಿಕೆ ನಡೆಯುವುದರಿಂದ ಪದಗಳ ಚಲನೆ ಸಾಮಾನ್ಯವಾಗಿರುತ್ತದೆ. ಈ ಚಲನೆಯ ಸ್ವರೂಪ ಎಂತದ್ದಿರುತ್ತದೆ ಎನ್ನುವುದು ಮುಖ್ಯವಾಗಿರುತ್ತದೆ.

ಕರ್ನಾಟಕವು ಪ್ರಾದೇಶಿಕವಾಗಿ ಮಹಾರಾಷ್ಟ್ರ, ತೆಲಂಗಾಣ, ಆಧ್ರ ಪ್ರದೇಶ, ತಮಿಳನಾಡು, ಕೇರಳ ರಾಜ್ಯಗಳೊಂದಿಗೆ ಗಡಿಯನ್ನು ಹಂಚಿಕೊಂಡಿದೆ. ಈ ಕಾರಣದಿಂದ ಗಡಿಭಾಗಗಳಲ್ಲಿರುವ ಕನ್ನಡವು ಈ ರಾಜ್ಯಗಳಲ್ಲಿ ಬಳಕೆಯಲ್ಲಿರುವ ಭಾಷೆಗಳ ಪ್ರಭಾವಕ್ಕೆ ಒಳಗಾಗಿದೆ. ದ್ರಾವಿಡ ಭಾಷೆ ಬಳಕೆಯಲ್ಲಿರುವ ಪ್ರದೇಶಗಳೊಂದಿಗೆ ಗಡಿ ಹಂಚಿಕೊಂಡಿರುವುದರಿಂದ ಅಲ್ಲಿಂದಲೂ ಪದಗಳು ಕನ್ನಡಕ್ಕೆ ಬಂದಿವೆಯಾದರೂ ಈ ಪದಗಳೆಲ್ಲ ಒಂದು ಕಾಲದಲ್ಲಿ ಒಂದೇ ಮೂಲದಿಂದ ಬಂದಿರುವುದರಿಂದ ಇವುಗಳು ಪದಕೋಶದ ಬೆಳವಣಿಗೆಗೆ ಕಾರಣವಾಗಲಾರವು. ಆದರೇ ಮಹಾರಾಷ್ಟ್ರ ಗಡಿಯಾಗಿ ಹೊಂದಿರುವುದರಿಂದ ಅಲ್ಲಿಂದ ಅನೇಕ ಮರಾಠಿ ಪದಗಳು ಕನಡಕ್ಕೆ ಬಂದಿವೆ. ಮಹಾರಾಷ್ಟ್ರದಿಂದ ಅನೇಕ ಸಾಂಸ್ಕೃತಿಕ ಆಚರಣೆಗಳು ಕನ್ನಡಕ್ಕೆ ಬಂದಿರುವುದರಿಂದ ಅದಕ್ಕೆ ಸಂಬಂಧಿಸಿದ ಅನೇಕ ಪದಗಳು ಕನ್ನಡ ಪದಕೋಶಕ್ಕೆ ಸೇರಲು ಕಾರಣವಾದವು. ಉತ್ತರ ಕರ್ನಾಟಕದ ಅನೇಕ ಪ್ರದೇಶಗಳು ಮಹಾರಾಷ್ಟ್ರದೊಂದಿಗೆ ವ್ಯಾಪಾರ ಸಂಬಂಧ ಹೊಂದಿರುವುದರಿಂದ ವ್ಯಾಪಾರಕ್ಕೆ ಸಂಬಂಧಿಸಿದ ಅನೇಕ ಪದಗಳು ಕನ್ನಡ ಪದಕೋಶಕ್ಕೆ ಸೇರಲು ಕಾರಣವಾಗಿದೆ. ಮಹಾರಾಷ್ಟ್ರದೊಂದಿಗೆ ವೈವಾಹಿಕ ಸಂಬಂಧಗಳು ನೆರವೇರುವುದರಿಂದ ಸಂಬಂಧ ಸೂಚಿಸುವ ಪದಗಳು ಕನ್ನಡದಲ್ಲಿ ಬಳಕೆಯಾಗಲು ಕಾರಣವಾಗಿದೆ. ಹೀಗೆ ಅನೇಕ ಕಾರಣದಿಂದ ಗಡಿಭಾಗಗಳಲ್ಲಿ ಇತರ ಭಾಷೆಗಳಿಂದ ಪದಗಳು ಕನ್ನಡ ಪದಕೋಶ ಸೇರಿಕೊಂಡಿವೆ.

### ೩.೫ ಹೊಸ ವಸ್ತು/ವಿಷಯಗಳ ಕಾರಣ

ಯಾವುದೇ ಒಂದು ಜನಜೀವನ ಯಾವಾಗಲೂ ತನ್ನಲ್ಲಿರುವ ಕೌಶಲ್ಯವನ್ನು ಬಳಸಿಕೊಂಡು ಹೊಸತನ್ನು ಕಂಡುಕೊಳ್ಳುವ ಪ್ರಯತ್ನಶೀಲವಾಗಿರುತ್ತೆ. ಈ ಪ್ರಯತ್ನಶೀಲತೆಯ ಕಾರಣದಿಂದಲೆಯೇ

ಅನೇಕ ಹೊಸ ಹೊಸ ವಸ್ತು ವಿಷಯಗಳನ್ನು ಕಂಡುಕೊಂಡು ತಮ್ಮ ಜೀವನವನ್ನು ಸುಲಭಗೊಳಿಸಿಕೊಂಡಿರುತ್ತಾರೆ.

ಜಾಗತೀಕರಣದ ಪ್ರಭಾವದಿಂದ ಅನೇಕ ಹೊಸ ಆವಿಷ್ಕಾರಗಳು ಘಟಿಸುತ್ತಿವೆ. ಮಾನವಜೀವನ ಸುಲಭವಾಗಿಸಲು ಅನೇಕ ಸಾಧನಗಳು ಬಳಕೆಗೆ ಬಂದಿವೆ. ಆಧುನಿಕತೆಯ ಸಂಶೋಧನೆಗಳು ಜಾಗತಿಕವಾಗಿ ಜನರನ್ನು ಪರಸ್ಪರ ಸಮೀಪವಾಗಿಸಿವೆ. ಈ ಸಾಮಿಪ್ಯವನ್ನು ಅನೇಕ ಸಾಧನಗಳ ಮೂಲಕ ಸಾಧಿಸಲಾಗುತ್ತಿದೆ. ಈ ಸಾಧನಗಳಿಗೆ ಸಂಬಂಧಿಸಿದಂತೆ ಅನೇಕ ಪದಗಳು ರಚನೆಯಾದವು. ಈ ರಚನೆಗಳು ಜಗತ್ತಿನ ಎಲ್ಲ ಭಾಷೆಗಳಿಗೂ ವಿಸ್ತಾರಗೊಂಡಿವೆ.

ಈ ಕಾಲದಲ್ಲಿ ಸಾರಿಗೆಗೆ ಸಂಬಂಧಿಸಿದಂತೆ ಅನೇಕ ವಾಹನಗಳು ಬಳಕೆಗೆ ಬಂದವು. ರಸ್ತೆಮಾರ್ಗ, ಜಲಮಾರ್ಗ, ವಾಯುಮಾರ್ಗಕ್ಕೆ ಸಂಬಂಧಿಸಿದ ಅನೇಕ ವಾಹನಗಳು ಬಳಕೆಗೆ ಬಂದಿವೆ. ಸಣ್ಣ ದೊಡ್ಡ ಗಾತ್ರದ ಮತ್ತು ಸಾರ್ವಜನಿಕ ವೈಯಕ್ತಿಕ ಬಳಕೆಗಾಗಿ ಬೇರೆ ಬೇರೆ ಮಾದರಿಯ ವಾಹನಗಳು ಬಳಕೆಯಲ್ಲಿವೆ. ಇದರಲ್ಲಿಯೂ ವಸ್ತುಗಳನ್ನು ಸಾಗಿಸಲು ಬೇರೆ ಮಾದರಿಯ ವಾಹನಗಳೂ ಇವೆ. ಮತ್ತು ಇವುಗಳಿಗೆ ಸಂಬಂಧಿಸಿದಂತೆ ಅನೇಕ ಪದಗಳು ಬರಲು ಕಾರಣವಾಯಿತು.

ಭಾರತೀಯ ಶೈಕ್ಷಣಿಕ ಕಲಿಕೆ ಮತ್ತು ಕಲಿಸುವಿಕೆಯಲ್ಲಿ ಅನೇಕ ಬದಲಾವಣೆಗಳು ನಡೆದು ಹೊಸ ಮಾದರಿಗಳು ಬಂದವು. ಕಲಿಯುವ ವಿಷಯಗಳಲ್ಲೂ ಬದಲಾವಣೆಗಳು ಬಂದವು. ವೈದ್ಯಕಿಯ, ತಾಂತ್ರಿಕ, ಇಂತಹ ಅನೇಕ ವಿಷಯಗಳಲ್ಲಿ ಬದಲಾವಣೆಗಳು ಕಂಡುಬಂದು ಇದಕ್ಕೆ ಸಂಬಂಧಿಸಿದ ಪದಕೋಶ ರಚನೆಗೊಂಡಿತು. ಈ ಪದಕೋಶವು ಯಾವ ಯಾವ ಭಾಷಿಕ ಸಮುದಾಯಗಳ ಜೀವನದ ಭಾಗವಾಗುತ್ತವೆಯೊ ಆ ಭಾಷೆಯ ಪದಕೋಶದ ಭಾಗವಾಗಿ ಬೆಳವಣಿಗೆಗೆ ಕಾರಣವಾದವು.

ಒಂದು ಭಾಷೆ ಯಾಕೆ ಬೆಳವಣಿಗೆ ಹೊಂದುತ್ತದೆ ಎನ್ನುವುದು ನಿಶ್ಚಿತವಾಗಿ ಹೀಗೇ ಎಂದು ಹೇಳುವುದು ಕಷ್ಟ ಆದರೂ ಪ್ರತಿಯೊಂದು ಭಾಷೆ ಬೆಳವಣಿಗೆ ಹೊಂದಲು ಆ ಭಾಷೆಯ ಬಳಕೆಯ ಸಮುದಾಯವು ಎಂತಹ ಪರಿಸ್ಥಿತಿಯಲ್ಲಿ ಬಳಕೆಯಾಗಿತ್ತಿದೆ ಎನ್ನುವುದು ಮುಖ್ಯವಾಗಿರುತ್ತದೆ. ಕನ್ನಡವು ಅನೇಕ ಭಾಷಿಕ ಪರಿಸರಗಳೊಂದಿಗೆ ಸಹಯೋಗದೊಂದಿಗೆ ಬಳಕೆಯಾಗುತ್ತ ಬಂದಿದೆ. ಪ್ರತಿಯೊಂದು ಭಾಷೆಯ ಸಂಪರ್ಕಕ್ಕೂ ಅದರದ್ದೆ ಆದ ಕಾರಣಗಳು ನಿರ್ಮಾಣವಾಗುತ್ತ ಬಂದಿವೆ. ಪ್ರತಿಯೊಂದು ಭಾಷೆಯೊಂದಿಗೆ ಅದರ ಸಂಪರ್ಕಕ್ಕೆ ಕಾರಣವಾದ ಅಂಶಗಳು ಒಂದೊಂದು ವಲಯದ ಪದಕೋಶವನ್ನು ವಿಸ್ತರಿಸಿವೆ. ಒಂದೊಂದು ವಲಯವೆನ್ನುವಾಗ ಕೇವಲ ಆ ವಲಯ ಕೋಶ ಮಾತ್ರ ಬೆಳೆದಿದೆ ಎನ್ನುವುದಕ್ಕಿಂತ ಆ ವಲಯಕ್ಕೆ ಸಂಬಂಧಿಸಿದ ಹೆಚ್ಚು ಪದಗಳು ಸೇರಿಕೊಂಡಿವೆ ಎಂದು ಅರ್ಥ. ಹೊಸ ವಲಯಕ್ಕೆ ಸಂಬಂಧಿಸಿ ಬಂದ ಪದಗಳು ಆ ವಲಯದ ಪದಕೋಶ ವಿಸ್ತರಿಸಿವೆ. ಈ ಮೇಲೆ ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾದ ಅಂಶಗಳನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.



# ಅಧ್ಯಾಯ : ನಾಲ್ಕು

## ಪದಕೋಶದ ಬೆಳವಣಿಗೆ : ವಿವಿಧ ವಲಯಗಳು

೪.೧ ಆಡಳಿತ

೪.೨ ಸೈನ್ಯ, ಪೊಲೀಸ್ ಮತ್ತು ನ್ಯಾಯ ವ್ಯವಸ್ಥೆ

೪.೩ ಶಿಕ್ಷಣ

೪.೪. ಸಾಹಿತ್ಯ

೪.೫ ಧರ್ಮ ಮತ್ತು ಆಚರಣೆ

೪.೬ ಸಾಮಾಜಿಕ ಮತ್ತು ಸಾಂಸ್ಕೃತಿಕ

೪.೭ ಮನೋರಂಜನೆ

೪.೮ ವೈದ್ಯಕೀಯ

೪.೯ ಕೃಷಿ

೪.೧೦ ಸಾರಿಗೆ ಮತ್ತು ಸಂಪರ್ಕ

೪.೧೧ ವ್ಯವಹಾರಿಕ

೪.೧೨ ಅಳತೆ ಮತ್ತು ತೂಕ

## ಅಧ್ಯಾಯ : ನಾಲ್ಕು

# ಪದಕೋಶದ ಬೆಳವಣಿಗೆ : ವಿವಿಧ ವಲಯಗಳು

ಪದಕೋಶದ ಬೆಳವಣಿಗೆ ಹಲವು ವಿಧಗಳಲ್ಲಿ ಆಗುತ್ತದೆ. ಈ ಬೆಳವಣಿಗೆಯ ಸ್ವರೂಪ ಎಲ್ಲ ವಿಷಯಗಳಲ್ಲು ಒಂದೆ ಮಾದರಿಯದ್ದಾಗಿರುತ್ತೆ ಎನ್ನುವುದು ಕಷ್ಟಸಾಧ್ಯ. ಪ್ರತಿಯೊಂದು ಪದಕೋಶಕ್ಕೂ ಅದರದ್ದೇ ಆದ ಬಳಕೆಯ ವಲಯವಿರುತ್ತದೆ(ಆ ವಲಯದ ಆಚೆ ಅಲ್ಲಿಯ ಪದಗಳು ಬಳಕೆಯ ಸಾಧ್ಯತೆ ತುಂಬಾ ಕಡಿಮೆ. ಕೆಲವು ಪದಗಳು ಮಾತ್ರ ಬಳಕೆಯ ವಲಯದಿಂದ ಬೇರೆ ವಲಯಗಳಲ್ಲಿ ಬಳಕೆಯಾಗಬಲ್ಲವು ಮತ್ತು ಕೆಲವು ಸಾಮಾನ್ಯ(ಬೇಸಿಕ್) ಪದಗಳು ಮಾತ್ರ ಎಲ್ಲ ವಲಯಗಳಲ್ಲು ಬಳಕೆಯಾಗಬಲ್ಲವು). ಹೀಗಾಗಿ ಪದಕೋಶದ ಬಳವಣಿಗೆಯನ್ನು ಎಲ್ಲ ವಲಯಗಳಿಗೆ ಸಂಬಂಧಿಸಿದಂತೆ ಒಂದೇ ಮಾದರಿಯಲ್ಲಿ ಗುರುತಿಸಲಾಗದು. ಪ್ರತಿಯತೊಂದು ವಲಯದಲ್ಲಿ ಘಟಿಸುವ ಬದಲಾವಣೆಗಳು ಆ ವಲಯದ ಪದಕೋಶದ ಬೆಳವಣಿಗೆಯ ಮೇಲೆ ಪ್ರಭಾವ ಬೀರಿರುತ್ತವೆ. ಈ ಬದಲಾವಣೆಗೆ ಕಾರಣವಾದ ಅಂಶಗಳಾ ಆಧಾರದ ಮೇಲೆ ಪದಕೋಶದಲ್ಲಿ ಪದಗಳು ರಚನೆಗೊಳ್ಳುತ್ತವೆ ಅಥವ ಸ್ವೀಕರಣವಾಗಿ ಬರುತ್ತವೆ.

ಮಾನವರ ವಿಕಾಸವಾದಂತೆಲ್ಲ ಅವರ ಬದುಕಿನ ಕ್ರಮದಲ್ಲಿ ಬದಲಾವಣೆಗಳು ಸಂಭವಿಸುತ್ತಲೇ ಇರುತ್ತವೆ. ಪ್ರತಿಯೊಂದು ಬದಲಾವಣೆಯು ಒಂದಷ್ಟು ಹೊಸತನವನ್ನು ಒಳಗೂ ಮಾಡಿಕೊಳ್ಳುತ್ತದೆ. ಇದು ಎಲ್ಲ ಜನ ಸಮುದಾಯಗಳಲ್ಲೂ ಸಂಭವಿಸುವಂಥದ್ದು. ಈ ಬದಲಾವಣೆಗಳು ಸಾಂಸ್ಕೃತಿಕ, ಸಾಮಾಜಿಕ, ವ್ಯವಹಾರಿಕ ಹೀಗೆ ಅವರ ಬದುಕಿನ ಎಲ್ಲ ವಲಯಗಳಲ್ಲು ಕಂಡುಬರುತ್ತವೆ. ಈ ಬದಲಾವಣೆಗಳನ್ನು ಗುರುತಿಸಲು ಹೊಸ ಹೊಸ ಪದಗಳು ರಚನೆಗೊಳ್ಳುತ್ತವೆ. ಅಥವ ಇನ್ನೊಂದು ಭಾಷೆಯಿಂದ ಸ್ವೀಕರಿಸಲಾಗುತ್ತದೆ.

ಕರ್ನಾಟಕದ ಜನಸಮುದಾಯಗಳ ಇತಿಹಾಸವನ್ನು ಗಮನದಲ್ಲಿರಿಕೊಂಡು ನೋಡುವುದಾದರೇ ಕಾಲಕಾಲಕ್ಕೆ ಅನೇಕ ಬದಲಾವಣೆಗೆ ಒಳಗಾಗಿರುವುದು ಕಾಣಬಹುದಾಗಿದೆ.

ಈ ಬದಲಾವಣೆಗಳು ವಿವಿಧ ವಲಯಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ಸ್ವರೂಪದಲ್ಲಿರುತ್ತವೆ ಎಂಬುದನ್ನು ಕನ್ನಡ ಸಂದರ್ಭವನ್ನಿಟ್ಟುಕೊಂಡು ಕಾರಣಗಳನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ.

ಈ ಅಧ್ಯಾಯದಲ್ಲಿ ವಿವಿಧ ವಲಯಗಳಲ್ಲಿ ಕನ್ನಡ ಪದಕೋಶದ ಬೆಳವಣಿಗೆಯ ಸ್ವರೂಪವನ್ನು ಪರಿಶೀಲಿಸಲಾಗಿದೆ. ಒಂದೊಂದು ವಲಯಗಳಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಿ ಹೊಸ ಪದಗಳು ರಚನೆ ಅಥವ ಸ್ವೀಕರಣಕ್ಕೆ ಕೂಡಿಬಂದ ಸಂದರ್ಭವನ್ನು ವಿವರಿಸಲಾಗಿದೆ. ವಲಯುಗಳಾಗಿ ವಿಂಗಡಿಸಿಕೊಳ್ಳುವಾಗ ಸಾಮಾನ್ಯ ಜನಜೀವನದಲ್ಲಿ ಭಾಷಾಬಳಕೆಯ ಮುಖ್ಯವಲಯಗಳಿಗೆ ಮಹತ್ವ ನೀಡಲಾಗಿದೆ. ಪ್ರತಿವಲಯದ ಪದಕೋಶದಲ್ಲಿರುವ ಪದಗಳನ್ನು ನೀಡುವಾಗ ಅವುಗಳು ಕನ್ನಡ, ಪ್ರಾಕೃತ ಮತ್ತು ಸಂಸ್ಕೃತ ರಚನೆಗಳಾಗಿದ್ದರೇ ಅವುಗಳ ಭಾಷೆ ಹೆಸರಿಸದೆ ನೀಡಲಾಗಿದೆ. ಮತ್ತು ಬೇರೆ ಭಾಷೆಗಳಿಂದ ಸ್ವೀಕರಿಸಿಕೊಂಡಿರುವ ಪದಗಳನ್ನು ನೀಡುವಾಗ ಪದಗಳು ಯಾವ ಭಾಷೆಯಿಂದ ಸ್ವೀಕರಿಸಲಾಗಿದೆಯೋ ಆ ಭಾಷೆಯ ಹೆಸರು ಸೂಚಿಸಲಾಗಿದೆ.ಉರ್ದು ಮತ್ತು ಮರಾಠಿಯಿಂದ ಸ್ವೀಕರಿಸಿದ ಪದಗಳ ಮೂಲವು ಅರಬ್ಬಿ ಮತ್ತು ಪಾರಸಿ ಹಾಗೂ ಕೆಲವು ಪದಗಳು ಸಂಸ್ಕೃತ ಮೂಲದ್ದಾಗಿರುವುದರಿಂದ ಅವುಗಳನ್ನು ಪಾರಸಿ ಮತ್ತು ಅರಬ್ಬಿ ಪದಗಳ ಯಾದಿಯಲ್ಲಿ ನೀಡಲಾಗಿದೆ.

## ೪.೧ ಆಡಳಿತ

ಕನ್ನಡದಲ್ಲಿ ಆಡಳಿತಕ್ಕೆ ಸಂಬಂಧಿಸಿದ ಹೆಚ್ಚಿನ ಪದಗಳು ಸ್ವೀಕರಣದಿಂದ ಬಂದ ಪದಗಳಾಗಿವೆ. ಈ ಪದಗಳು ಪ್ರಾಕೃತ, ಸಂಸ್ಕೃತ, ಪಾರಸಿ, ಅರಬ್ಬಿ, ಮರಾಠಿ, ಉರ್ದು, ಇಂಗ್ಲಿಶ್ ಮತ್ತು ಇತರ ಇಂಡೊ-ಆರ್ಯನ್ ಭಾಷೆಗಳ ಮೂಲಕ ಕನ್ನಡಕ್ಕೆ ಬಂದವುಗಳಾಗಿವೆ. ಬೇರೆ ಬೇರೆ ಕಾಲಘಟ್ಟದಲ್ಲಿ ಬೇರೆ ಬೇರೆ ಭಾಷೆಗಳಿಂದ ಸ್ವೀಕರಣವಾಗಿ ಬಂದು ಕನ್ನಡದಲ್ಲಿ ಬಳಕೆಯಲ್ಲಿವೆ.

ಕನ್ನಡ ನಾಡಿನಲ್ಲಿ ಅನೇಕ ರಾಜ ಮನೆತನಗಳು ಆಳ್ವಿಕೆ ನಡೆಸಿವೆ. ಆಯಾ ರಾಜ ಮನೆತನಗಳು ಆಡಳಿತದಲ್ಲಿ ತಮ್ಮ ಮಾತೃಭಾಷೆಯನ್ನು ಬಳಸಿರುವುದು ತಿಳಿದ ಸಂಗತಿ. ಅಥವಾ ಆಡಳಿತ ಭಾಷೆಯು ಬಳಕೆಯ ಭಾಷೆಗಿಂತ ಭಿನ್ನವಾಗಿರುವುದನ್ನು ಗುರುತಿಸಲಾಗಿದೆ. ಕನ್ನಡಿಗರು ಪ್ರಭುತ್ವಗಳ ಭಾಷಿಕ ಹೇರಿಕೆಗೆ ಒಳಗಾಗಿದ್ದಾರೆ. ಅನ್ಯಭಾಷಿಕ ಪ್ರಭುತ್ವವು ಕನ್ನಡ ಪದಕೋಶದ ಮೇಲೆ ತುಂಬಾ ಪ್ರಭಾವ ಬೀರಿದೆ.

ಕರ್ನಾಟಕವನ್ನು ಕನ್ನಡ ರಾಜ ಮನೆತನಗಳು ಮತ್ತು ಅನ್ಯ ಭಾಷಿಕ ರಾಜ ಮನೆತನಗಳು ಆಳ್ವಿಕೆ ನಡೆಸಿರುವ ಕಾಲಾವಧಿಗೂ ಸಾಕಷ್ಟು ಅಂತರವಿರುವುದನ್ನು ಕಾಣಬಹುದು. ಅನೇಕ ಕನ್ನಡ ರಾಜಮನೆತನಗಳು ಕೂಡ ಈ ಹಿಂದೆ ರೂಪುಗೊಂಡಿರುವ ಆಡಳಿತ ಪದಕೋಶವನ್ನೇ(ಹೆಚ್ಚಾಗಿ

ಅನ್ಯಭಾಷೆಗಳಿಂದ ಸ್ವೀಕರಿಸಿಕೊಂಡ) ಬಳಕೆಗೆ ತಂದಿರುವುದನ್ನು ಕಾಣಬಹುದು. ಕೆಲವು ರಾಜಮನೆತನಗಳು ಕನ್ನಡವನ್ನು ಆಡಳಿತ ಭಾಷೆಯಾಗಿ ಘೋಷಿಸಿಕೊಂಡಿದ್ದರೂ ಆಡಳಿತಕ್ಕೆ ಸಂಬಂಧಿಸಿದ ಪದಕೋಶವು ಸಂಸ್ಕೃತ ಅಥವಾ ಇತರ ಭಾಷೆಗಳಿಂದ ಸ್ವೀಕರಿಸಿಕೊಂಡ ಪದಗಳೇ ಆಗಿರುತ್ತಿದ್ದವು. ಆರಂಭ ಕಾಲಘಟ್ಟದಿಂದ ವಸಾಹತೋತ್ತರ ಕಾಲಘಟ್ಟದವರೆಗೂ ನಮ್ಮ ಆಡಳಿತ ಪರಿಭಾಷೆಗಳು ಹೆಚ್ಚಾಗಿ ಸಂಸ್ಕೃತ, ಪ್ರಾಕೃತ, ಉರ್ದು, ಪಾರಸಿ, ಅರಬ್ಬಿ, ಮರಾಠಿ ಮತ್ತು ಇಂಗ್ಲಿಶ್ ಭಾಷೆಗಳಿಂದ ಸ್ವೀಕರಿಸಿಕೊಂಡಿದ್ದಾಗಿವೆ.

ಆಡಳಿತಕ್ಕೆ ಸಂಬಂಧಿಸಿದ ಪದಗಳನ್ನು ೧) ಆಡಳಿತ ಘಟಕಗಳು ೨) ಪದನಾಮಗಳು ಹೀಗೆ ಎರಡು ವಿಭಾಗಗಳಾಗಿ ವಿಂಗಡಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೪.೧.೧ ಆಡಳಿತ ಘಟಕ

ಆಡಳಿತವನ್ನು ಸುಸೂತ್ರವಾಗಿ ನಡೆಸಲು ಅನೇಕ ವಿಭಾಗಗಳಾಗಿ ವಿಂಗಡಿಸಿ ಆಡಳಿತವನ್ನು ನಡೆಸಲಾಗುತ್ತದೆ. ಹೀಗೆ ಪ್ರದೇಶಗಳನ್ನು ವಿಂಗಡಿಸುವಾಗ ಅವುಗಳಿಗೆ ಒಂದೊಂದು ಹೆಸರುಗಳಿಂದ ಗುರುತಿಸುಲಾಗುತ್ತದೆ. ಈ ವಿಭಾಗಗಳು ಸಣ್ಣ ಹಂತದಿಂದ ದೊಡ್ಡ ಹಂತದ ಪ್ರದೇಶಗಳಿಗೆ ವಿಭಾಗಿಸಲಾಗುತ್ತದೆ. ಈ ವಿಭಾಗ ಕ್ರಮವು ಒಟ್ಟು ಮೂರು ಮಾದರಿಯದ್ದಾಗಿದೆ. ೧) ಗ್ರಾಮ ೨) ಪ್ರಾಂತ ೩) ರಾಜ್ಯ. ಈ ವಿಭಾಗಗಳನ್ನು ಮತ್ತೆ ಅನೇಕ ಉಪ ವಿಭಾಗಗಳಾಗಿ ವಿಂಗಡಿಸಿ ಹೆಸರಿಸಲಾಗಿದೆ. ಉದಾ.

ಕಾಲುವಳಿ(ಉಪಗ್ರಾಮ)
ಊರು
ಕಂಪಣ
ವಿಷಯ
ಕಾಲೂರು
ಖರ್ವಡ
ಖೇಟ/ಖೇಡ
ಗ್ರಾಮ
ಗ್ರಾಮ ಪಂಚಕ
ಬಾಡ
ಪಟ್ಟಣ
ಪ್ರಾಂತ
ಭಾಗೆ

ಭೂಕ್ತಿ

ಮಂಡಕ

ಮಂಡಲ

ಮಾಗಣಿ

ರಾಜ್ಯ

ಜನಪದ

ದೇಶ

ದ್ರೋಣಮುಖ

ನಾಡು

ರಾಷ್ಟ್ರ

ವಳನಾಡು

ವೇಂಟೆ

ಸಹಸ್ರ ಮಂಡಲ

ಸಾಸಿರನಾಡು,

ಇತ್ಯಾದಿ ಪದಗಳು ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗವನ್ನು ಗುರುತಿಸಲು ಬಳಕೆಯಲ್ಲಿದ್ದವು. ಮಧ್ಯಕಾಲೀನ ಕರ್ನಾಟಕದಲ್ಲಿ ಬಂದ ಅನೇಕ ಅನ್ಯಭಾಷಿಕ ರಾಜಮನೆತನಗಳು ತಮ್ಮ ಮಾತೃಭಾಷೆಯಲ್ಲಿ ಆಡಳಿತವನ್ನು ಪ್ರಾರಂಭಿಸಿದ ಮೇಲೆ ಪ್ರದೇಶವನ್ನು ಗುರುತಿಸುವಲ್ಲಿ ಬದಲಾವಣೆಗಳು ಬಂದವು. ಈ ಬದಲಾವಣೆಯ ಕಾರಣದಿಂದ ಪ್ರದೇಶವನ್ನು ಗುರುತಿಸುವ ಅನೇಕ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದು ಕನ್ನಡ ಪದಕೋಶದ ಭಾಗವಾದವು. ಉದಾ.

**ಅರಬ್ಬಿ**

ಮೊಹಲ್ಲಾ

ತಹಸೀಲು/ತಾಸಿಲ್

ತಾಲ್ಲೂಕು/ತಾಲೂಕ್

ಕಸಬೆ

ಜಿಲ್ಲಾ

ಸುಬೆ

**ಪಾರಸಿ**

ಶಹರು

ತಕತ್ತು

ಪರಗಣಿ

೧೬ನೆಯ ಶತಮಾನದಲ್ಲಿ ಬ್ರಿಟಿಶರ ಆಗಮನದ ನಂತರ ರಾಜ್ಯಾಡಳಿತವು ನಿಂತು ಹೋಗಿ, ಸರಕಾರದ ಆಳ್ವಿಕೆ ಮಾದರಿ ಬಂದ ಮೇಲೆ ಆಡಳಿತ ಪ್ರಾಂತ್ಯಗಳ ವಿಭಾಗ ಕ್ರಮದಲ್ಲಿ ಗಣನೀಯ ಬದಲಾವಣೆಗಳು ಕಾಣದಿದ್ದರೂ ಪದಕೋಶದಲ್ಲಿ ಬದಲಾವಣೆ ಕಂಡುಬಂತು. ಪಾರಸಿ, ಅರಬ್ಬಿ, ಮರಾಠಿ ಪದಗಳ ಜೊತೆಗೆ ಇಂಗ್ಲಿಶ್ ಪದಗಳು ಬಳಕೆಗೆ ಬಂದವು. ಉದಾ.

**ಇಂಗ್ಲಿಶ್**

ವಿಲೇಜ್

ವಾರ್ಡ್

ಲೇಔಟ್

ರೂರಲ್

ಎಕ್ಸಟೆನಕ್ಷನ್

ಸಬರ್ಬ್

ಟೌನ್

ಸಿಟಿ

ಡಿಸ್ಟಿಕ/ಡಿಸ್ಟ್ರಿಕ್ಟ್

ಜೋನ್

ಡಿವಿಷನ್/ಡಿವಿಜನ್

ಸ್ಟೇಟ್

ಕಂಟ್ರಿ,

ಇತ್ಯಾದಿ, ಈ ಪದಗಳಲ್ಲಿ ಹೊಸ ಮಾದರಿಯನ್ನು ಗುರುತಿಸುವ ಪದಗಳಿರದಿದ್ದರೂ ಈ ಪದಗಳು ಕನ್ನಡ ಪದಕೋಶದ ಭಾಗವಾಗಿ ಬಳಕೆಗೆ ಬಂದಿವೆ. ಮತ್ತು ಇವುಗಳ ವ್ಯಾಪಕ ಬಳಕೆಯು ಕಂಡುಬಂದಿದೆ. ಈ ಪದಗಳನ್ನು ಕನ್ನಡಕ್ಕೆ ಅನುವಾದಿಸಿ ಬಳಸಿಯೂ ಪದಕೋಶದ ವಿಸ್ತರಣೆಯನ್ನು ಕಾಣಬಹುದು. ಉದಾ.

ಬಡಾವಣೆ

ವಿಭಾಗ

ವಲಯ,

ಇತ್ಯಾದಿ, ಈ ಪದಗಳು ದಿನಬಳಕೆಯಲ್ಲಿ ಅಷ್ಟಾಗಿ ಕಂಡುಬರದಿದ್ದರೂ ಸರಕಾರಿ, ಸಾಹಿತ್ಯಿಕ ಮತ್ತು ಇತರ ಬರವಣಿಗೆಯಲ್ಲಿ ಕಂಡು ಬಂದಿವೆ. ಮತ್ತು ಪ್ರಸ್ತುತ ದೇಶಿ ಮತ್ತು ಸ್ವೀಕರಣದಿಂದ ಬಂದ ಪದಗಳು ಬಳಕೆಯಲ್ಲಿರುವ ಹೊಸಪದ ರಚನೆಗಳನ್ನು ಹೀಗೆ ಗುರುತಿಸಬಹುದು. ಉದಾ.

ಗ್ರಾಮ

ಗ್ರಾಮ ಪಂಚಾಯತಿ

ಹೋಬಳಿ

ಪಟ್ಟಣ ಪಂಚಾಯತಿ

ತಾಲೂಕು

ತಾಲೂಕು ಪಂಚಾಯತಿ

ಮುನಿಸಿಪಲ್

ಜಿಲ್ಲೆ

ಜಿಲ್ಲಾ ಪಂಚಾಯತ

ಕಾರ್ಪೋರೇಷನ್

ವಿಭಾಗ

ರಾಜ್ಯ

ರಾಜಧಾನಿ

ದೇಶ,

ಇತ್ಯಾದಿ, ಇಂತಹ ಆಡಳಿತ ಘಟಕಗಳು ಬಳಕೆಯಲ್ಲಿವೆ. ಈ ಪರಿಭಾಷೆಗಳು ಬೇರೆ ಬೇರೆ ಭಾಷೆಗಳಿಂದ ನೇರ ಎರವಲು ಪಡೆದವು ಕೆಲವಾದರೇ ಇನ್ನು ಕೆಲವು ಬೇರೆ ಭಾಷೆಯ ಪ್ರಭಾವದಿಂದ ಕನ್ನಡದಲ್ಲಿ ರಚನೆಗೊಂಡ ಪದಗಳಾಗಿವೆ.

### ೪.೧.೨ ಅಧಿಕಾರ ಸೂಚಿಸುವ ಪದನಾಮ

ಈ ಮೇಲೆ ಉಲ್ಲೇಖಿಸಿದ ಎಲ್ಲ ಆಡಳಿತ ವಿಭಾಗಗಳನ್ನು ನೋಡಿಕೊಳ್ಳಲು ಒಬ್ಬೊಬ್ಬ ಅಧಿಕಾರಿಗಳನ್ನು ನೇಮಿಸಲಾಗುತಿತ್ತು. ಈ ಅಧಿಕಾರಿಗಳು ಆ ವಿಭಾಗದ ಎಲ್ಲ ಮಾದರಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಈ ಅಧಿಕಾರಿಗಳನ್ನು ಗುರುತಿಸಲು ಕೆಲವು ಪರಿಭಾಷೆಗಳು ಬಳಕೆಯಾಗುತ್ತಿದ್ದವು ಈ ಪರಿಭಾಷೆಗಳು ಆರಂಭ ಕಾಲದಲ್ಲಿ ಪ್ರಾಕೃತ ಮತ್ತು ಸಂಸ್ಕೃತದಿಂದ ಸ್ವೀಕರಿಸಿದವಾಗಿದ್ದವು. ಕಾಲಾಂತರದಲ್ಲಿ ಅನೇಕ ಬದಲಾವಣೆಗಳು ಕಂಡುಬಂದಿವೆ.

ಕನ್ನಡದ ಮೊದಲ ರಾಜಮನೆತನವಾದ ಕದಂಬರ ಕಾಲದಲ್ಲಿ ರಾಜ, ಮಂತ್ರಿ ಮುಂತಾದ ಪರಮಾಧಿಕಾರಗಳೊಂದಿಗೆ ಸೇನಾಪತಿ, ದೇಶ ಮತ್ತು ಗ್ರಾಮಗಳ ಭೋಜ, ಭೋಜಕ, ಆಯುಕ್ತಕ ಮುಂತಾದ ಆಡಳಿತ ವರ್ಗ ಗುರುತಿಸುವ ಪರಿಭಾಷೆಗಳ ಉಲ್ಲೇಖ ಸಿಗುತ್ತದೆ.

ಆನಂತರ ಬಂದ ಬಾದಾಮಿ ಚಾಲುಕ್ಯರ(೬-೭ನೆಯ ಶತಮಾನ) ಕಾಲದಲ್ಲಿ ರಾಜ, ಮಂತ್ರಿಯಂತಹ ಪ್ರಧಾನ ಅಧಿಕಾರದೊಂದಿಗೆ ಇತರೆ ಅನೇಕ ಹೊಸ ಪರಿಭಾಷೆಗಳ ಉಲ್ಲೇಖ ಕಂಡುಬಂದಿದೆ.

ಉದಾ.

ವಿಷಯಪತಿ

ವಿಷಯಾಧಿಪತಿ

ಸಾಮಂತ

ಗ್ರಾಮ ಭೋಗಿಕ

ಮಹತ್ತರ

ದೇಶಾಧಿಪತಿ

ನಗರ ಮಹಲ್ಲಕ

ರಾಜಪುರುಷ

ಮಹಾಸಂಧಿ ವಿಗ್ರಹಿ

ಮಹಾಕ್ಷಪಟ ಲಾಧಿಕೃತ

ಗಾಮುಂಡ

ಕರಣ

ಇತ್ಯಾದಿ ಪದಗಳು ಕಂಡುಬಂದಿವೆ. ರಾಷ್ಟ್ರಕೂಟರ ಕಾಲದಲ್ಲಿ ಈ ಮೇಲಿನ ಎಲ್ಲ ಪರಿಭಾಷೆಗಳೊಂದಿಗೆ ಇನ್ನು ಕೆಲವು ಹೊಸ ಪರಿಭಾಷೆಗಳು ಬಳಕೆಗೆ ಬಂದವು. ಉದಾ.

ಭೋಗಪತಿ

ರಾಷ್ಟ್ರಪತಿ

ದಂಡನಾಯಕ

ನಾಳ್ಗಾವುಂಡ, ಇತ್ಯಾದಿ.

ಚಾಲುಕ್ಯ ಮತ್ತು ಹೊಯ್ಸಳರ ಕಾಲದ ಆಡಳಿತದಲ್ಲಿ ಅಧಿಕಾರ ವಿಸ್ತಾರಗೊಂಡು ಅನೇಕ ಹೊಸ ಹುದ್ದೆಗಳು ಚಾಲ್ತಿಗೆ ಬಂದವು ಈ ಕಾರಣದಿಂದ ಹೊಸ ಹೊಸ ಪರಿಭಾಷೆಗಳು ಬಳಕೆಗೆ ಬಂದವು. ಉದಾ.

ಪ್ರಧಾನ

ಮನೆವೆರ್ಗಡೆ

ತಂತ್ರಪಾಲ

ತಂತ್ರಸೇನ ಬೋವ

ಹಡಪದ

ತಂತ್ರಪಾಳದಧೀಷ್ಠಾಯಕ

ಹೇರಿಲಾಳ

ಕನ್ನಡ ಸಂಧಿವಿಗ್ರಹಿ

ವಡ್ಡರಾವುಳದಧಿಕಾರಿ

ಭಂಡಾರಿ

ಅಧ್ಯಕ್ಷ

ಸರ್ವಾಧ್ಯಕ್ಷ

ಅಂತಪುರಗ್ಗಡೆ

ಬಾಹತ್ತರ ನಿಯೋಗಾಧಿಪತಿ

ಪಟ್ಟಸಾಸಣಿ

ಪಟ್ಟಸಾಸಣಾ

ಧಿಷ್ಠಾಯಕ

ಅಚುಪನ್ನಾಯದಧಿಷ್ಠಾಯಕ

ಪಡಿಹಾರ

ಚೊಳಾಯ್ತ

ಶ್ರೀಕರಣಾಧಿಕಾರಿ

ಹೆಗ್ಗಡೆ

ಮಹಾಪಸಾಯಿತ

ಸೇನಬೋವ

ಸಾಸಣಿ

ಮಾವಂತ,

ಇತ್ಯಾದಿ, ಅಧಿಕಾರ ವಾಚಕ ಪದಗಳ ಉಲ್ಲೇಖ ಕಂಡುಬಂದಿದೆ. ವಿಜಯನಗರ ಕಾಲದ ಆಡಳಿತದಲ್ಲಿ ಈ ಪದಕೋಶವು ಇನ್ನೂ ಬೆಳವಣಿಗೆ ಹೊಂದಿ ಮತ್ತಷ್ಟು ಪರಿಭಾಷೆಗಳ ಸೇರ್ಪಡೆಯಾಗಿದೆ. ಉದಾ.

ದಂಡನಾಯಕ

ದಳವಾಯಿ

ಮಾಗಣಿಗಾರ

ಮಹಾನಾಯಕಾಚಾರ್ಯ

ಪ್ರಧಾನಿ

ಗ್ರಾಮ ಹೆಬ್ಬಾರವ

ಪ್ರಭು

ಒಡೆಯ

ಮೂಲಿಗ

ಇತ್ಯಾದಿ, ಪದಗಳು ಗುರುತಿಸಬಹುದು. ವಿಜಯನಗರ ಆಳ್ವಿಕೆಯ ಸಮಕಾಲದಲ್ಲೇ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಮಹತ್ತರ ಬದಲಾವಣೆಗಳು ಕಂಡುಬಂದವು. ಈ ಕಾಲದಲ್ಲಿ ಮುಸ್ಲಿಂ ಅರಸರ ಅಧಿಕಾರವು ವಿಸ್ತಾರಗೊಂಡು ಕರ್ನಾಟಕಕ್ಕೂ ವ್ಯಾಪಿಸಿತು. ಮುಸ್ಲಿಂ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿ ಆಡಳಿತಕ್ಕೆ ಸಂಬಂಧಿಸಿದ ಹೆಚ್ಚು ಪದಗಳು ಪಾರಸಿ, ಅರಬ್ಬಿ ಮೂಲದಿಂದ ಸ್ವೀಕರಿಸಿದ್ದಾಗಿವೆ. ಉದಾ.

**ಅರಬ್ಬಿ**

ವಜೀರ

ನಿಜಾಮ

ದಿವಾನ

ಅಮೀಲ್

ಅಸಫ್

ಜಿಲ್ಲೆದಾರ

ತಸೀಲದಾರ/ತಾಹಸಿಲದಾರ

ಅಸಬದಾರ

ಇಜಾರದಾರ

ಇನಾಮದಾರ

ನಮುರ

ನಾಯಿಬ

ಶೇಕದಾರ

ಸುಬೇದಾರ

ಖಿಲ್ಲೇದಾರ

ಜಮಾದಾರ

ಜಾಸೂದ

ಮುನಸಿ

ಮುನಸಫ

ಪಾರಸಿ

ಬಾದಶಹ

ಸುಲ್ತಾನ

ಸರದಾರ

ಪೇಶವಾ

ದಿವಾಣ

ಬಕ್ಷಿ

ಅಹಲೇಕಾರ

ಚಿಟ್ನಿಸ್(ಚಿಟ + ನವಾಸ್)

ಜಿಲೇಬಿದಾರ

ತಾಬೇದಾರ

ದಫೇದಾರ

ದಪ್ತರದಾರ

ಜಮೀನದಾರ

ಜಹಗೀರದಾರ

ನವೀಸ್

ಮಹಸಾಲದಾರ

ರಿಸಾಲುದಾರ

ಶಿರಸ್ತೆದಾರ

ಚಟ್ನಿಸ್

ಚೌಕರ

ಕಾರಕುನ್

ಖಜಾಂಚಿ

ಗುಮಾಸ್ತ

ಚಪರಾಸಿ/ಚಪ್ರಾಸಿ

ಜವಾನ

ಇಂಗ್ಲಿಶ್

ಪ್ರೆಸಿಡೆಂಟ್

ಪ್ರೈಮಿನಿಸ್ಟರ್

ಮಿನಿಸ್ಟರ್

ಗವರ್ನರ್

ಸ್ಪೀಕರ್

ಮೇಯರ್

ಡೈರೆಕ್ಟರ್

ಅಕೌಟೆಂಟ್

ಚೇರ್‌ಮನ್

ಪೀವನ್ ಇತ್ಯಾದಿ, ಪದಗಳು ಸ್ವೀಕರಣವಾಗಿ ಬಂದಿವೆ.

ಕನ್ನಡ ಪದಕೋಶದ ಸ್ವರೂಪವನ್ನು ನೋಡಿದರೇ ಆಡಳಿತ ವಲಯದ ಪದಕೋಶವು ಹೆಚ್ಚು ಬೆಳವಣಿಗೆ ಹೊಂದಿದೆ ಎನಿಸುತ್ತದೆ. ಶತಮಾನಗಳಿಂದ ಶತಮಾನಕ್ಕೆ, ಒಂದು ರಾಜಮನೆತದ ಆಳ್ವಿಕೆಯಿಂದ ಇನ್ನೊಂದು ರಾಜ ಮನೆತನದ ಆಳಿಕೆಗೆ ತುಂಬಾ ಬದಲಾವಣೆಗಳು ಕಂಡು ಬಂದು ಹೊಸ ಹೊಸ ಪದಗಳು ಕಂಡುಬಂದಿವೆ. ಅರಬ್ಬಿ, ಪಾರಸಿ ಪದಗಳು ಹೆಚ್ಚು ಸ್ವೀಕರಣಕ್ಕೆ ಒಳಗಾಗಿದ್ದು ಮತ್ತು ಇವತ್ತಿಗೂ ಬಳಕೆಯಲ್ಲಿರುವುದು ಈ ವಲಯದಲ್ಲಿಯೆ. ಕಾಲಕಾಲಕ್ಕೆ ಆದ ಆಡಳಿತದಲ್ಲಿಯ ಬದಲಾವಣೆಗಳು ಹೆಚ್ಚು ಪದಗಳ ಸ್ವೀಕರಣಕ್ಕೆ ಕಾರಣವಾಗಿದೆ. ಈ ವಲಯವು ಹೆಚ್ಚು ಭಾಷೆಗಳಿಂದ ಹೆಚ್ಚು ಸ್ವೀಕರಣ ಪದಗಳಿಂದಲೇ ತುಂಬಿದ ವಲಯವಾಗಿದೆ.

## ೪.೨ ಸೈನ್ಯ, ಪೊಲೀಸ್ ಮತ್ತು ನ್ಯಾಯ ವ್ಯವಸ್ಥೆ

ರಕ್ಷಣೆ ಎನ್ನುವುದು ಮಾನವರಿಗೆ ಅನ್ನ, ನೀರು, ಅರಿವೆ, ಮತ್ತು ಆಶ್ರಯಗಳಂತೆ ಮೂಲಭೂತ ಅಗತ್ಯಗಳಲ್ಲಿ ಒಂದಾಗಿದೆ. ತನ್ನನು ತಾನು ರಕ್ಷಿಸಿಕೊಳ್ಳಬೇಕೆಂಬ ಅಥವಾ ತನ್ನವರನ್ನು ರಕ್ಷಿಸಬೇಕೆಂಬ ಉದ್ದೇಶ ಅತ್ಯಂತ ಪ್ರಾಚೀನ ಕಾಲದಿಂದಲೂ ಮಾನವರಲ್ಲಿ ಇತ್ತು. ಈ ಕಾರಣದಿಂದ ರಕ್ಷಣೆಗಾಗಿ ಜನರನ್ನು ನೇಮಿಸುವ ಪದ್ದತಿ ಆಚರಣೆಗೆ ಬಂತು. ಇದು ಆನಂತರ ದಿನಗಳಲ್ಲಿ ಒಂದು ವ್ಯವಸ್ಥೆಯಾಗಿ ರೂಪುಗೊಂಡಿತು. ಈ ವ್ಯವಸ್ಥೆಯು ವಿವಿಧ ಹಂತಗಳಲ್ಲಿ ಬೇರೆ ಬೇರೆ ಮಾದರಿಗಳಲ್ಲಿ ನಡೆಯುತ್ತಿದೆ. ರಾಜಮನೆತನಗಳ ಆಳ್ವಿಕೆಗೆ ಒಳಗಾದಾಗ ರಕ್ಷಣೆಯ ಹೊಣೆಯೂ ರಾಜರುಗಳ ಕರ್ತವ್ಯವಾಗಿ ಪರಿಣಮಿಸಿತು. ರಕ್ಷಣೆಗೆ ಸಂಬಂಧಿಸಿದ ವ್ಯವಸ್ಥೆಗಳಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳನ್ನು ಕಾಣಬಹುದು. ಸ್ಥಳೀಯ ರಕ್ಷಣೆಗೆ ಪೊಲೀಸ್ ಮಾದರಿ ಮೊದಲನೆಯದಾದರೇ, ರಾಜ್ಯ(ಪ್ರಾಚೀನ ಕಾಲದ), ಅಥವಾ ದೇಶದ ರಕ್ಷಣೆಗೆ ಸೈನ್ಯ ಎರಡನೆಯ ಮಾದರಿಯಾಗಿದೆ.

ಪ್ರಾಚೀನ ಭಾರತದ ಇತಿಹಾಸವನ್ನು ಅಧ್ಯಯನ ಮಾಡಿದಾಗ ರಕ್ಷಣೆಗೆ ಸಂಬಂಧಿಸಿದ ಪೊಲೀಸ್ ಮತ್ತು ಸೈನ್ಯವು ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಆಡಳಿತಾಂಗದ ಪ್ರಭಲ ವ್ಯವಸ್ಥೆಯಾಗಿವೆ. ಈ ವ್ಯವಸ್ಥೆಗಳಗೆ ಕರ್ನಾಟಕವನ್ನು ಆಳಿದ ಎಲ್ಲ ರಾಜಮನೆತನಗಳು ತುಂಬಾ

ಮಹತ್ವದ ಸ್ಥಾನ ನೀಡಿವೆ. ಇತರೆ ಸಾಮ್ರಾಜ್ಯಗಳ ದಾಳಿಗಳನ್ನು ತಡೆಯುವುದು ಸೈನ್ಯದ ಕೆಲಸವಾದರೇ, ಇತರೆ ಆಂತರಿಕ ಅಪರಾಧಿಕ ಘಟನೆಗಳು ಅಥವಾ ನ್ಯಾಯಿಕ ವ್ಯವಸ್ಥೆಗಳನ್ನು ನೋಡಿಕೊಳ್ಳುವುದು ಪೊಲೀಸ್ ವ್ಯವಸ್ಥೆಯ ಕರ್ತವ್ಯವಾಗಿತ್ತು. ಭಾರತದಲ್ಲಿ ಪೊಲೀಸ್ ಬಗೆಗಿನ ವಿವರ ಸುಮಾರು ಕ್ರಿ.ಪೂ. ೨೦೦ ವರ್ಷಗಳ ಹಿಂದೆ ರಚಿತವಾದ ಮನುವಾದದಲ್ಲಿ ಕಂಡುಬಂದರೆ, ಆನಂತರ ಕ್ರಿ.ಪೂ. ೩೦೦ರಲ್ಲಿ ರಚಿತವಾದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಚರ್ಚೆಗೊಂಡಿದೆ.

ಭಾರತದಲ್ಲಿ ಉಪಲಬ್ಧವಿರುವ ನ್ಯಾಯಶಾಸ್ತ್ರಗಳಲ್ಲಿ ಹಿಂದೂ ನ್ಯಾಯಶಾಸ್ತ್ರ ಅತ್ಯಂತ ಪ್ರಾಚೀನವಾದದ್ದು. ಸಹಸ್ರಾರು ವರ್ಷಗಳ ಹಿಂದಿನ ವೇದವಾಙ್ಮಯಗಳಲ್ಲಿಯೇ ನ್ಯಾಯಿಕ ತತ್ವಗಳು ರೂಪುಗೊಂಡಿವೆ. ವೃತ್ತಿ, ವರ್ಗ, ಜೀವನಗಳಿಗೆ ಸಂಬಂಧಿಸಿದ ನಿಯಮಗಳ ಜೊತೆಗೆ ಕಳ್ಳತನ, ಜಾರತನ, ಮತ್ತು ಜೂಜು ಮೊದಲಾದ ಅಪರಾದಗಳ ವಿವರಗಳಿವೆ. ಯಾವ ಕೃತ್ಯಗಳು ಅಪರಾಧಗಳು ಅವುಗಳಿಗೆ ಏನು ಶಿಕ್ಷೆ ಎನ್ನುವ ಚರ್ಚೆಗಳು ಇವೆ. ವೇದಗಳ ಕಾಲದಲ್ಲಿ ಮುಖ್ಯವಾಗಿ ರಾಜಾಜ್ಞೆ ಉಲ್ಲಂಘನೆ, ಸ್ತ್ರೀ ಹತ್ಯೆ, ವರ್ಣಸಂಕರ, ಜಾರತನ ಕಳ್ಳತನ, ಪರಪುರುಷನಿಂದ ಗರ್ಭಧಾರಣೆ, ನಿಂದೆ, ಅಪಚಾರ, ಅಶ್ಲೀಲತೆ, ಬಲಪ್ರಯೊಗ, ಗರ್ಭಪಾತ ಈ ಹತ್ತು ಬಗೆಯ ಅಪರಾಧಗಳನ್ನು ಗುರುತಿಸಲಾಗಿದೆ. ಈ ಅಪರಾಧಗಳನ್ನು ತಡೆಗಟ್ಟಲು ದೇಶವನ್ನು ನಾಡು, ವಿಷಯ, ವೆಂತ್ಯ, ಕಂಪಣ ಮತ್ತು ಗ್ರಾಮಗಳಾಗಿ ವಿಂಗಡಿಸಿ ನ್ಯಾಯ ವ್ಯವಸ್ಥೆಯನ್ನು ರೂಪಿಸಿ ಅದರ ರಕ್ಷಣೆಗೆ ವಿವಿಧ ವ್ಯವಸ್ಥೆಯನ್ನು ಮಾಡಲಾಗಿತ್ತು. ವೇದಗಳಲ್ಲಿ;

ಗ್ರಾಮಿಣಿ,

ಗ್ರಾಮಕೂಟ

ಗ್ರಾಮನೇತೃ

ಗ್ರಾಮಪತಿ

ಗ್ರಾಮಭತೃ

ಗ್ರಾಮಾಧಿಪತಿ

ಗ್ರಾಮಿಕ

ಈ ಹೆಸರಿನ ರಕ್ಷಣಾ ಪಡೆಗಳ ಬಗ್ಗೆ ಉಲ್ಲೇಖವಿದೆ(ವೇಂಕಟೇಶ ಪ್ರಸಾದ:೨೦೧೭:೪). ಮನುಸ್ಮೃತಿಯಲ್ಲಿ ಅಧಿಪತಿ(ಗ್ರಾಮ ರಕ್ಷಕ) ಮತ್ತು ನಗರಾಧಿಪತಿ(ನಗರಾಧಿತಿ) ಎಂಬ ಪದಗಳು ನ್ಯಾಯ ಮತ್ತು ರಕ್ಷಣೆಗೆ ನೇಮಿಸಿದ ವ್ಯವಸ್ಥೆಗಳನ್ನು ಸೂಚಿಸುತ್ತವೆ.

ಕರ್ನಾಟಕವನ್ನು ಆಳಿದ ರಾಜ ಮನೆತನಗಳು ಬೇರೆ ಬೇರೆ ಮಾದರಿಯಲ್ಲಿ ನಾಡ ರಕ್ಷಣೆ ಮಾಡಲು ವಿವಿಧ ಹುದ್ದೆಗಳು ರಚಿಸಿದನ್ನು ಕಾಣಬಹುದಾಗಿದೆ. ಮೌರ್ಯರ ಮೊದಲುಗೊಂಡು ಗಂಗ, ಕದಂಬ, ಚಾಲುಕ್ಯ, ವಿಜಯನಗರ ಮತ್ತು ಇತರೆ ಸಣ್ಣ ಪುಟ್ಟ ರಾಜ ಮನೆತನಗಳು ಈ

ವ್ಯವಸ್ಥೆಯನ್ನು ಹೊಂದಿರುವುದು ಶಾಸನ ಮತ್ತು ಆ ಕಾಲದಲ್ಲಿ ರಚನೆಗೊಂಡ ಸಾಹಿತ್ಯಿಕ ರಚನೆಗಳಿಂದ ತಿಳಿದುಕೊಳ್ಳಬಹುದಾಗಿದೆ. ಉದಾ.

ದೇಶಕಾವಲಿಗರ

ಹದಿಕಾರ

ಗರುಡ

ದಂಡಪಾರಸಿಕ

ಚೌರಾಧಿಕರಣರು

ಚೌಟರೂ

ಪ್ರಭೂಗಾವುಂಡ

ನಾಡಗಾವುಂಡ

ರಾಷ್ಟ್ರಪಾಲ

ತಳಾರಿ

ಕಾಮ

ಗಾವುಂಡ

ಕರ್ಣ(ಶಾನುಭೋಗ)

ಅರಿಯ ಗಾವುಂಡ

ತಳವಾರ

ಕಾವಲುಗಾರ

ಇತ್ಯಾದಿ, ಈ ಪದಗಳು ಪ್ರಾಚೀನ ಕಾಲದ ಅಥವಾ ಹಿಂದೂ ರಾಜ ಮನೆತನಗಳು ಆಳ್ವಿಕೆಯ ರಾಜ್ಯಗಳಲ್ಲಿ ಬಳಕೆಯಲ್ಲಿ ಇದ್ದಿದ್ದನ್ನು ಗುರುತಿಸಲಾಗಿದೆ. ಕರ್ನಾಟಕವನ್ನಾಳಿದ ಬಹುಮನಿ ಮತ್ತು ವಿಜಯಪುರ ಸುಲ್ತಾನರ ಮತ್ತು ಹೈದರ ಅಲಿ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಅನೇಕ ಉರ್ದು ಭಾಷೆಯ ರಕ್ಷಣೆಗೆ ಸಂಬಂಧಿಸಿದ ಪದಗಳನ್ನು ಕಾಣಬಹುದಾಗಿದೆ. ಉದಾ.

ಸಾಹಿಬ್ –ಇ– ಅರ್ಜ್

ನಾಯಿಬ ಬರ್ಬಕ

ದಬೀರ

ದಿವಾನ

ದವತ ದಾರ

ಸೈಯದ್ ಉಲ್ ಹುಜ್ಜುಬ್

ಹಾಜೀಬ್ ಉಲ್ ಕಾಸ್‌ಹಾಬ

ಶಹ್ನಾ ಇ ಬರ್ಗ

ಸಲಾರ ಚಸ್ತಗಿರಸಾನ್

ಚಂಚದಾರ

ಜಾಹಗೀರದಾರ

ಕೊತ್ವಾಲ

ಚೌಕಿದಾರ

ಕಿಲ್ಲೆದಾರ

ಅಮಲದಾರ

ಜುಮ್ಲೆದರ್

ಆಮಿನ್

ಜಮಾದಾರ

ಸುಬೇದಾರ

ದರೋಗ

ಶಿರಸ್ತೇದಾರ

ಹವಾಲದಾರ ಇತ್ಯಾದಿ.



ಭಾರತಕ್ಕೆ ಬ್ರಿಟಿಶ್‌ರು ಬಂದ ಮೇಲೆ ಅಥವಾ ಭಾರತದಲ್ಲಿ ಬ್ರಿಟಿಶ್ ಆಳ್ವಿಕೆ ಪ್ರಾರಂಭಗೊಂಡ ಮೇಲೆ ಸೈನಿಕ ಅಥವಾ ಪೊಲೀಸ್ ವ್ಯವಸ್ಥೆಯಲ್ಲಿ ಬದಲಾವಣೆಗಳು ಕಂಡು ಬಂದವು. ಆಧುನಿಕ ಕಾಲದ ರಕ್ಷಣಾ ವ್ಯವಸ್ಥೆಯಲ್ಲಿ ಮುಖ್ಯವಾಗಿ ಮೂರು ಮಾದರಿಗಳು ಕಂಡು ಬಂದವು. ಒಂದು ಸೇನೆ (Army), ಎರಡು ಪೊಲೀಸ್ (Police), ಮೂರು ಇಂಡಿಯನ್ ಸಿವಿಲ್ ಸರ್ವಿಸ್ (Indian Civil Service). ಈ ಸೇವೆಗಳನ್ನು ಗುರುತಿಸಲು ಕನ್ನಡದಲ್ಲಿ ಹೊಸ ಪದಗಳನ್ನು ರಚಿಸಲಾಗಿದೆ. ಪೋಲಿಸ್ > ಆರಕ್ಷಕ ಸೇವೆ ಮತ್ತು ಇಂಡಿಯನ್ ಸಿವಿಲ್ ಸರ್ವಿಸ್ > ಭಾರತೀಯ ನಾಗರಿಕ ಸೇವೆ ಹೀಗೆ ಅನುವಾದಿಸಿ ಬಳಕೆಗೆ ತರಲಾಗಿದೆ. ಲಾರ್ಡ್ ಕಾರ್ನ್‌ವಾಲಿಸ್‌ನು ಪೊಲೀಸ್ ವ್ಯವಸ್ಥೆಗೆ ಹೊಸ ರೂಪವನ್ನು ನೀಡಿದನು. ಕರ್ನಾಟಕದಲ್ಲಿ ಮೊಟ್ಟಮೊದಲ ಬಾರಿಗೆ ಮದ್ರಾಸ ಪ್ರೆಸಿಡೆನ್ಸಿಯಲ್ಲಿ ಈ ವ್ಯವಸ್ಥೆ ಪ್ರಾರಂಭಗೊಂಡಿತು. ಇದು ಮೊಘಲರ ಕಾಲದ ಠಾಣೆಗಳಲ್ಲಿ ದರೋಗಾ ಮುಖ್ಯಸ್ಥಿಕೆಯಲ್ಲಿ ಆಚರಣೆಗೆ ತಂದರು. ಆನಂತರ ಅನೇಕ ಹುದ್ದೆಗಳನ್ನು ಅಳವಡಿಸಲಾಯಿತು. ಸೈನಿಕ ಮಾದರಿಯಲ್ಲೂ ಬದಲಾವಣೆಗಳು ಕಂಡುಬಂದು ಸಂಪೂರ್ಣ ಇಂಗ್ಲೆಂಡ್ ಮಾದರಿಯ ಸೈನಿಕ ವ್ಯವಸ್ಥೆ ಭಾರತ ಅಥವಾ ಕರ್ನಾಟಕದಲ್ಲಿ ಕಂಡು ಬಂದಿದೆ.

ಕೂಡಿದ್ದು ಮತ್ತು ತುಂಬಾ ಕಠಿಣ ಉಚ್ಚರಣಾ ಸಾಧ್ಯತೆಗಳನ್ನು ಹೊಂದಿರುವುದರಿಂದ ಹೆಚ್ಚು ಬಳಕೆಗೆ ಬರಲಿಲ್ಲ. ಔಪಚಾರಿಕ ಬರವಣಿಗೆಯಲ್ಲಿ ಮಾತ್ರ ಕಂಡು ಬರುತ್ತವೆ.

ಪ್ರಾಚೀನ ಭಾರತದಲ್ಲಿ ರಕ್ಷಣಾ ವ್ಯವಸ್ಥೆಯನ್ನು ನೋಡಿಕೊಳ್ಳುವ ಕೇಂದ್ರವನ್ನು ಗುರುತಿಸುವ ಪದಗಳು ಯಾವವು ಎನ್ನುವುದು ಅಷ್ಟು ಸ್ಪಷ್ಟವಾಗಿಲ್ಲ. ಪ್ರಾಚೀನ ಭಾರತದಲ್ಲಿ ಹೆಚ್ಚು ಬಳಕೆಯಲ್ಲಿದ್ದ ಪದವೆಂದರೆ ಕಾರಾಗೃಹ, ಆನಂತರ ಕನ್ನಡದಲ್ಲಿ **ಠಾಣಾ, ಪೊಲೀಸ್ ಸ್ಟೇಷನ್, ಜೈಲ್**(Jail) ಪದಗಳು ಬಳಕೆಗೆ ಬಂದವು. ಈ ಪದಗಳನ್ನು ಕನ್ನಡದಲ್ಲಿ ಸೆರೆಮನೆ ಎಂದು ಅನುವಾದಿಸಿ ಬಳಸಲಾಗುತ್ತಿದೆ.

ಮಾನವರು ಪ್ರಾಚೀನ ಕಾಲದಿಂದಲೂ ತಮ್ಮ ರಕ್ಷಣೆಗೆ ಅನೇಕ ಆಯುಧಗಳನ್ನು ಬಳಸಿಕೊಂಡು ಬಂದಿದ್ದಾರೆ. ಪ್ರಾರಂಭದಲ್ಲಿ ಕಲ್ಲಿನಿಂದ ಮಾಡಿದ ವಿವಿಧ ಆಕಾರದ ಆಯುಧಗಳು ಕಂಡುಬಂದಿವೆ. ಬೇಟೆಯಾಡಲು **ಬಿಲ್ಲು ಬಾಣ, ಈಟಿ, ಬರ್ಜಿ, ಕೈಗೊಡಲಿ**ಯಂತಹ ಆಯುಧಗಳ ಉಲ್ಲೇಖಗಳು ಪುರಾತತ್ವೀಯ ಅಧ್ಯಯನ ಮತ್ತು ಸಾಹಿತ್ಯಿಕ ಬರೆಹಗಳಲ್ಲಿ ಕಂಡುಬಂದಿವೆ. ರಾಜಸತ್ತೆಯ ಆಳ್ವಿಕೆಗೆ ಒಳಪಟ್ಟ ಮೇಲೆ ಯುದ್ಧಗಳು ಹೆಚ್ಚಾಗಿ ಅನೇಕ ಆಯುಧಗಳು ಬಳಕೆಗೆ ಬಂದವು. ಇದರಲ್ಲಿಯು ಕೂಡ ಕಾಲಕಾಲಕ್ಕೆ ಅನೇಕ ಬದಲಾವಣೆಗಳು ಬಂದವು. ಉದಾ.

ಬಿಲ್ಲು
ಸರಳು
ತೋಮರ
ಖಡ್ಗ
ಸಬಳ
ಕೊಂತ
ಶ್ಯಲ್ಯ
ಕಣೆಯ
ಕರ್ಕಡೆ
ಪರಿಘ
ಸುರಿಗೆ
ಮುಸಲ
ತೀರಿಕೆ
ಜಟ್ಟಿಗೆ
ಭಿಂಡಿವಾಳ
ಆವುತಿ

ಮಾಜಳಿಗೆ

ಪಿಡಿಕತ್ತು

ಕಂಪಣ

ಮುಸುಂಡಿ

ಮುದ್ಗರ,

ಇತ್ಯಾದಿ, ಇವು ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದ ರಕ್ಷಣಾ ಆಯುಧಗಳಿಗೆ ಸಂಬಂಧಿಸಿದ ಪದಗಳಾಗಿವೆ. ಮಧ್ಯಕಾಲೀನ ಸಮಯದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದ ಆಯುಧಗಳಲ್ಲಿ ಸಿಡಿಮದ್ದು ತುಂಬಾ ಪ್ರಮುಖವಾದದ್ದು. ಪ್ರಾಚೀನ ಕಾಲದಲ್ಲಿ(ವೇದಗಳಲ್ಲಿ) **ಅಗ್ನಿಚೂರ್ಣ, ಶತಘ್ನಿ** ಪದಗಳ ಬಳಕೆಯಲ್ಲಿದ್ದರೂ ಅವುಗಳ ಸ್ವರೂಪದ ಬಗ್ಗೆ ಯಾವುದೇ ಮಾಹಿತಿಯಿಲ್ಲ. ಸುಮಾರು ಕ್ರಿ.ಶ. ೧೩೭೮ರ ಆಸುಪಾಸಿನಲ್ಲಿ ಮುಸ್ಲಿಂ ದೊರೆಗಳ ಕಾರಣದಿಂದ ಭಾರತದಲ್ಲಿ ಮದ್ದು ಬಳಸಿ ಹಲ್ಲೆ ಮಾಡಬಲ್ಲ ಆಯುಧಗಳು ಬಳಕೆಗೆ ಬಂದು ಅದಕ್ಕೆ ಸಂಬಂಧಿಸಿದ ಪದಗಳು ಕನ್ನಡದಲ್ಲಿ ಬಳಕೆಗೆ ಬಂದವು. ಉದಾ.

ಫಿರಂಗಿ

ತೋಪ್

ಬಂದೂಕ್

ತುಪಾಕಿ

ಕಾಡತೋಸು

ಗನ್

ಪಿಸ್ತೂಲ್

ಬುಲೆಟ್

ಬಾಂಬ್

ಆಟಂಬಾಂಬು

ರಿವಾಲ್ವರ್

ರೈಫಲ್

ಟ್ಯಾಂಕರ್

ಮಷಿನ್‌ಗನ್ ಇತ್ಯಾದಿ, ಆಯುಧಗಳು ಕಂಡು ಬಂದಿವೆ.

ಸೈನ್ಯ ಮತ್ತು ಪೋಲಿಸ್ ವ್ಯವಸ್ಥೆಗಳು ಪ್ರಾಚೀನ ಕಾಲದಿಂದಲೂ ಅಪರಾಧವನ್ನು ತಡೆಯುವ ಮತ್ತು ನಡೆದ ಅಪರಾಧಕ್ಕೆ ನ್ಯಾಯ ಒದಗಿಸುವ ಕೆಲಸ ಮಾಡಿಕೊಂಡೇ ಬಂದಿವೆ. ಅನೇಕ ಅಪರಾಧಗಳನ್ನು ಮತ್ತು ಶಿಕ್ಷೆಗಳಿಗೆ ಸಂಬಂಧಿಸಿದ ಪದಗಳೂ ಕಂಡು ಬಂದಿವೆ. ಉದಾ.

**ಪಾರಸಿ**

ಖೂನಿ

ಗಸ್ತು/ಗಸ್ತಿ

ಶಬುಕ

ಬಿಲಪತ್ತು

ತುಪಾಕಿ ಸೇನೆ

ತೋಪುಖಾನೆ

ನಾಟಿಸಿಪಾಯಿ

ಪಹರೆ

ಬಾರ್ ಸಿಪಾಯಿ

ಮೋರ್ಚೆ

ಲಷ್ಕರ್

ಸರಂಜಾಮು

ಅಲಿಯಾಸ್

ಆಸಾಮಿ

ಉಗ್ರಗಾಮಿ

ಕುಖ್ಯಾತ

ಖದೀಮ

ಗಾಂಜಾ

ಗೂಂಡಾ

ಗೂಂಡಾಗಿರಿ

ಗೋಲಿಬಾರ್

ಘರವಾಲಿ

ತಲಾಶ್

ದಾದಾಗಿರಿ

ಧಮಕಿ

ಪಾತಕಿ

ಪುಂಡ

ಮುಡಾರಿ

ಮಾಫಿಯಾ

**ಅರಬ್ಬಿ**

ಕಂಜರ್

ಕತಲ್

ಕರಾಮತಿ

ಕವಾಯತ್

ಜಂಗಿ

ಜಂಗಿ ಸರಂಜಾಮ್

ಜಂಗಿ ಲಡಾಯಿ

ಜಂಗಿ ಸಿಪಾಯಿ

ಜಮಾಯತ್ತು

ಪೋರ್ಚುಗೀಸ್

ಚಾಪು

ಪಲಟಣ

**ಇಂಗ್ಲಿಶ್**

ಕ್ಯಾಂಪು

ಗ್ಯಾಂಗು

ಟೆಂಟು

ಟ್ರೂಪ್

ತುರುಪು

ನ್ಯಾಪಬಾಕ್

ಪರೇಡು

ಬೆಟಾಲಿಯನ

ಮಿಲಿಟರಿ

ಆ್ಯಕ್ಸಿಡೆಂಟ್

ಎನ್‌ಕೌಂಟರ್

ಎಸ್ಕೇಪ್

ಕಿಲ್ಲರ್
ಕಿಲ್ಲಿಂಗ್
ಕ್ರಿಮಿನಲ್
ಕೇಸ್
ಕ್ರೈಮ್
ಗ್ಯಾಂಗ್
ಗ್ಯಾಂಗ್‌ವಾರ್
ಡ್ರಗ್ಸ್
ಡೀಲ್
ನಕ್ಸಲ್, ನಕ್ಸಲೈಟ್
ಪಬ್
ಪಿಂಪ್
ಪೋಸ್ಟ್ ಮಾರ್ಟಂ
ಫಿನಿಶ್
ಫೈರ್
ಮಟ್ಯಾಶ್
ಮರ್ಡರ್
ಮಾರ್ಕೆಟ್ ಮಾಫಿಯಾ
ರಾಬರ್
ರಿಮಾಂಡ್ ಹೋಮ್
ರೈಡ್
ರೇಪ್
ರೋಲ್ ಕಾಲ್
ರೌಡಿ
ರೈಫಲ್
ಲಾಂಗ್
ಶೂಟೌಟ್
ಸರೆಂಡರ್
ಸೆಕ್ಸ್ ಗರ್ಲ್

ಇತ್ಯಾದಿ ಪದಗಳು ಕಂಡು ಬಂದಿವೆ. ಈ ಪದಗಳಲ್ಲಿ ಹೆಚ್ಚಿನವು ಔಪಚಾರಿಕ ವಲಯಗಳಲ್ಲಿ ಮಾತ್ರ ಬಳಕೆಯಾಗುವಂತಹ ಪದಗಳಾಗಿವೆ. ಈ ಪದಗಳು ಸೈನ್ಯ ಮತ್ತು ಪೋಲಿಸ್ ವಲಯಗಳಲ್ಲಿ ಬಳಕೆಯಾಗುತ್ತಿವೆ. ಈ ಪದಗಳಿಗೆ ಸಂವಾದಿಯಾಗಿ ಅನೇಕ ಪದಗಳನ್ನು ರಚಿಸಿಕೊಳ್ಳಲಾಗಿದೆ.

ಪರಾರಿಯಾಗು

ಜೀವಾವಧಿ ಶಿಕ್ಷೆ

ಮರಣದಂಡನೆ

ಮಾರಕಾಸ್ತ್ರ

ಬಾಲಾಪರಾಧಿ

ಬಂಧಿಸು

ಬಂಧನ ಪತ್ರ

ಅಪಘಾತ

ಕೊಲೆಗಡುಕ

ಪ್ರಕರಣ

ಬಂದೂಕುಧಾರಿ

ಗುಂಪು

ಗುಂಪು ಘರ್ಷಣೆ

ಮಾದಕ ವಸ್ತು

ತಲೆಹಿಡುಕ

ಮರಣೋತ್ತರ ಪರೀಕ್ಷೆ

ಗುಂಡು ಹಾರಿಸು

ಸೆರೆಮನೆ

ದಾಳಿ

ಬಂಧನ ಪತ್ರ

ಶರಣಾಗುವುದು, ಇತ್ಯಾದಿ.

ಭಾರತದಲ್ಲಿ ನ್ಯಾಯ ವ್ಯವಸ್ಥೆಯು ಬಹು ಪ್ರಾಚೀನ ಕಾಲದಿಂದಲೂ ಇದ್ದ ಬಗ್ಗೆ ಉಲ್ಲೇಖಗಳು ಕಂಡು ಬರುತ್ತವೆ. ವೇದ, ಸ್ಮೃತಿ ಮೊದಲಾದ ಧರ್ಮಗ್ರಂಥಗಳು ಕಾನೂನನ್ನು ರೂಪಿಸಿ ನಿಯಮಿಸುವ ಪ್ರಮಾಣ ಗ್ರಂಥಗಳಾಗಿದ್ದವು. ಪರಂಪರೆಯಿಂದ ಬಂದ ರೂಢಮೂಲವಾದ ಆಚರಣೆಗಳೂ ಕಾನೂನುಗಳಾಗಿ ಪರಿಣಮಿಸಿದವು. ಮನುಧರ್ಮಶಾಸ್ತ್ರ, ಪರಾಶರಸ್ಮೃತಿ ಮತ್ತು ೬ನೆಯ ವಿಕ್ರಮಾದಿತ್ಯನ

ಕಾಲದಲ್ಲಿ ರಚಿತವಾದ ವಿಜ್ಞಾನೇಶ್ವರನ ಮಿತಾಕ್ಷರ ಮೊದಲಾದವು ಕಾನೂನು ವ್ಯವಸ್ಥೆ ರೂಪಿಸಲು ಪ್ರಭಾವ ಬೀರಿದ್ದವು*(ತಿಪ್ಪೇರುದ್ರಸ್ವಾಮಿ ಎಚ್.:೨೦೧೬:೧೮೬).*

ವ್ಯಾಜ್ಯಗಳನ್ನು ಬಗೆಹರಿಸಲು ಹಳ್ಳಿಗಳ ಗ್ರಾಮ ಸಭೆಗಳೇ ನ್ಯಾಯ ನಿರ್ವಹಣೆಯ ಅಧಿಕಾರವನ್ನು ಹೊಂದಿದ್ದವು. ಈ ನಿರ್ಣಯಗಳನ್ನು ವಿವಿಧ ಹಂತದ ಅಧಿಕಾರಿಗಳು ನೋಡಿಕೊಳ್ಳುತ್ತಿದ್ದರೂ ಒಂದು ವೇಳೆ ನ್ಯಾಯ ತೀರ್ಮಾನ ತೃಪ್ತಿ ತರದಿದ್ದರೆ ರಾಜನವರೆಗೂ ಹೋಗುವ ಅವಕಾಶಗಳು ಜನರಿಗಿತ್ತು. ಪ್ರಾಚೀನ ಕಾಲದಲ್ಲಿ ನ್ಯಾಯವನ್ನು ನೋಡಿಕೊಳ್ಳುವ ವಿವಿಧ ಹಂತಗಳನ್ನು ಸೂಚಿಸುವ ಪದಗಳನ್ನು ಹೀಗೆ ಪಟ್ಟಿ ಮಾಡಬಹುದು. ಉದಾ:

ಕುಲಸಭೆ

ಶ್ರೇಣಿ

ಗಣ

ಅಧಿಕೃತ

ನೃಪ

ಪ್ರತಿಷ್ಠಿತ

ಮುದ್ರಿತ

ಶಾಸಿತ

ಈ ವ್ಯವಸ್ಥೆಯು ಸುಮಾರು ೧೬ನೆಯ ಶತಮಾನದವರೆಗೂ ನಡೆದು ಬಂದು ಬ್ರಿಟಿಶ್‌ರ ಆಗಮನದ ನಂತರ ಬದಲಾವಣೆಗೆ ಒಳಗಾಯಿತು. ನಡುಗಾಲದಲ್ಲಿ ಬಂದ ಮೊಘಲರಲ್ಲಿ ಇಸ್ಲಾಂ ನ್ಯಾಯಿಕ ಪದ್ಧತಿ ಚಾಲ್ತಿಯಲ್ಲಿತ್ತು. ಈ ಪ್ರಕಾರವು ಕರ್ನಾಟಕದಲ್ಲಿ ಚಲಾವಣೆಗೆ ಬರುವ ವೇಳೆಗೆ ಮುಸ್ಲಿಂ ಅಲ್ಲದವರಿಗೆ ಬೇರೆ ನ್ಯಾಯಾಡಳಿತ ಮಾಡುವ ಪದ್ಧತಿ ಚಾಲ್ತಿಗೆ ಬಂದಿತ್ತು. ಆಧುನಿಕ ಕಾಲದಲ್ಲಿಯೂ ಊರುಗಳಲ್ಲಿ ನ್ಯಾಯ ವ್ಯವಸ್ಥೆಗಳು ಕಂಡು ಬಂದರೂ ಅವು ಸಾಮಾನ್ಯವಾದ ವ್ಯಾಜ್ಯಗಳ ನಿರ್ವಹಿಸುತ್ತವೆ. ಅಪರಾಧ ಎಂದು ಪರಿಗಣಿಸಲ್ಪಡುವ ಘಟನೆ ಅಥವಾ ವಿಚಾರಗಳನ್ನು ನೋಡಿಕೊಳ್ಳುವ ವ್ಯವಸ್ಥೆಯನ್ನು **ಕೋರ್ಟ್** > **ನ್ಯಾಯಾಲಯ** ಎಂಬ ಪದಗಳಿಂದ ಗುರುತಿಸಲಾಗುತ್ತದೆ. **ಕೋರ್ಟ್**ನಲ್ಲಿ ಮತ್ತೆ **ಹೈಕೋರ್ಟ್, ಸುಪ್ರಿಂಕೋರ್ಟ್, ಡಿಸ್ಟ್ರಿಕ್‌ಕೋರ್ಟ್** ಎನ್ನುವ ಪದಗಳು ನ್ಯಾಯಾಲಯಗಳ ವಿವಿಧ ಹಂತಗಳನ್ನು ಗುರುತಿಸಲು ಬಳಕೆಯಾಗುತ್ತವೆ. ಇದರಲ್ಲಿ ಸಿವಿಲ್ ಮತ್ತು ಕ್ರಿಮಿನಲ್ ಎಂಬ ಎರಡು ಬಗೆಯುಂಟು. ಈ ನ್ಯಾಯ ವ್ಯವಸ್ಥೆಯು ಬಳಕೆಗೆ ಬಂದ ಮೇಲೆ ಇದಕ್ಕೆ ಸಂಬಂಧಿಸಿದ ಅನೇಕ ಪದಗಳು ಸ್ವೀಕರಣವಾಗಿ ಬಂದಿವೆ. ಈ ವಲಯದಲ್ಲಿ ಕೆಲಸ ಮಾಡುವ ವ್ಯಕ್ತಿಗಳನ್ನು/ ಹುದ್ದೆಗಳನ್ನು ಹೆಸರಿಸುವ ಪದಗಳನ್ನು ಇತರೆ ಭಾಷೆಗಳಿಂದ ಸ್ವೀಕರಿಸಲಾಗಿದೆ. ಉದಾ.

ನ್ಯಾಯಾಧೀಶ

ನ್ಯಾಯಪೀಠ

ವಕೀಲ

ಜಡ್ಜ್

ಲಾಯರ್,

ಇತ್ಯಾದಿ, ಈ ಪದಗಳಲ್ಲದೇ ನ್ಯಾಯಾಲಯಗಳಲ್ಲಿ ಬಳಕೆಯಾಗುವ

**ಇಂಗ್ಲಿಶ್**

ಸಮನ್ಸ್

ವಾರೆಂಟ್

ಅಪೀಲ್

ಕೇಸ್

ಅರೆಸ್ಟ್ ವಾರೆಂಟ್

ಆ್ಯಕ್ಟ್

ಕಂಪ್ಲೇಂಟ್

ಹಿಯರಿಂಗ್

ಶೋಕಾಸ್ ನೋಟಿಸ್

ವಿಟ್‌ನೆಸ್ < ಸಾಕ್ಷಿ

**ಅರಬ್ಬಿ**

ಜಾಮೀನ್

ಜುಲ್ಮಾನೆ

ತಕರಾರು

ದಾವೆ

ಮೊಕದ್ದಮ್ಮೆ

ಪಾಟಿಸವಾಲ್

ಮಾಫಿ

ರಾಜಿ

ಖುಲಾಸೆ

ಫಿರ್ಯಾದಿ

ಸಜಾ

ದಸ್ತಗಿರಿ

ಇತ್ಯಾದಿ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ. ಈ ಪದಗಳು ನಿರ್ದಿಷ್ಟ ವಲಯದಲ್ಲಿ ಮಾತ್ರ ಬಳಕೆಯಾಗುವುದರಿಂದ ಈ ಪದಗಳು ವ್ಯಾಪಕ ಬಳಕೆಯಲ್ಲಿಲ್ಲ. ಕೆಲವು ಪದಗಳು ಮಾತ್ರ ಸಾಮಾನ್ಯ ಬಳಕೆಗೆ ಬಂದಿವೆ. ಇಲ್ಲಿಯ ಅನೇಕ ಪದಗಳು ಕನ್ನಡಕ್ಕೆ ಅನುವಾದಿಸಿ ಬಳಕೆಗೆ ತರಲಾಗಿದೆ.

ಜೀವಾವಧಿಶಿಕ್ಷೆ

ಅನ್ಯಾಯ

ಅಪರಾಧ

ಅಪರಾಧಿ

ಅನೈತಿಕ

ಗಲ್ಲು

ಗಲ್ಲು ಶಿಕ್ಷೆ

ಆಪಾದನೆ

ಆರೋಪ

ಅತ್ಯಾಚಾರ

ಅನಾಚಾರ

ಅಪಹರಣ

ಆತ್ಮಹತ್ಯೆ, ಇತ್ಯಾದಿ.

ಪ್ರಾಚೀನ ಕಾಲದಿಂದಲೂ ಸೇನೆ ಮತ್ತು ಪೊಲೀಸ್ ವ್ಯವಸ್ಥೆಗಳು ಜನರ ರಕ್ಷಣೆ ಮತ್ತು ನ್ಯಾಯಿಕ ವ್ಯವಸ್ಥೆಗೆ ಸಂಬಂಧಿಸಿದಂತೆ ಅನೇಕ ಪದಗಳು ಕನ್ನಡದಲ್ಲಿ ಬಳಕೆಯಲ್ಲಿದ್ದು, ಕಾಲ ಕಾಲಕ್ಕೆ ಬೆಳವಣಿಗೆ ಹೊಂದಿವೆ. ಪಾರಸಿ, ಅರಬ್ಬಿ, ಉರ್ದು, ಇಂಗ್ಲಿಶ್ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿಕೊಂಡು ಕನ್ನಡ ಪದಕೋಶ ಬೆಳವಣಿಗೆಗೆ ಕಾರಣವಾಗಿವೆ.

### ೪.೩. ಶಿಕ್ಷಣ

ಶಿಕ್ಷಣವೆನ್ನುವುದು ಮನುಷ್ಯ ಜೀವನದ ಮಹತ್ವದ ಸಂಗತಿಗಳಲ್ಲಿ ಒಂದಾಗಿದೆ. ಶಿಕ್ಷಣ ಇಲ್ಲದವನ ಜೀವನ ಹಾಳೂರು ಹದ್ದಿಗೆ ಸಮ ಎಂಬ ಗಾದೆ ನಮ್ಮಲಿದೆ. ಮನುಷ್ಯ ಜೀವನದ ಗುರಿ ಆತ್ಮ ಜ್ಞಾನವನ್ನು ಪಡೆಯುವುದು ಆಗಿದೆ. ಶಿಕ್ಷಣವು ಈ ಆತ್ಮ ಜ್ಞಾನವನ್ನು ಪಡೆಯುವ ಮಾರ್ಗ

ಎಂಬ ನಂಬಿಕೆ ಪ್ರಾಚೀನ ಕರ್ನಾಟಕ(ಭಾರತ)ದಲ್ಲಿತ್ತು. ಈ ಕಾಲದ ಶಿಕ್ಷಣವು ಮನುಷ್ಯ ಅವಶ್ಯಕತೆಗಳಿಗೆ ಅನುಗುಣವಾಗಿ ತರಬೇತು ಮಾಡುವ ಹಿನ್ನೆಲೆಗೆ ಹೆಚ್ಚು ಮಹತ್ವ ನೀಡಿದ್ದು ಕಂಡುಬರುತ್ತದೆ. ಅಂದರೆ ಒಂದು ಮಗು ಮುಂದೆ ದೊಡ್ಡವನಾಗಿ ಯಾವ ವೃತ್ತಿಯನ್ನು ಮಾಡಲಿರುವನೋ ಅವನಿಗೆ ಆ ವೃತ್ತಿ ಸಂಬಂಧಿತ ಶಿಕ್ಷಣ ನೀಡಲಾಗುತ್ತಿತ್ತು. ಉದಾ. ಬ್ರಾಹ್ಮಣನಾದವನಿಗೆ ಪೂಜಾಕಾರ್ಯಗಳಲ್ಲಿ ಸಹಾಯವಾಗಲು ವೇದಾಧ್ಯಯನ, ಕ್ಷತ್ರಿಯನಾದವನಿಗೆ ಯುದ್ಧ ಕೌಶಲ, ವರ್ತಕನಾಗುವವನಿಗೆ ವ್ಯವಹಾರ ಜ್ಞಾನಕ್ಕೆ ಸಂಬಂಧಿಸಿದ ಶಿಕ್ಷಣ ನೀಡಲಾಗುತಿತ್ತು. ಮತ್ತು ಶಿಕ್ಷಣವು ಔಪಚಾರಿಕವಾದದ್ದಾಗಿತ್ತು. ಕೆಲವು ಸೀಮಿತ ವರ್ಗಗಳು ಮಾತ್ರ ಈ ವ್ಯವಸ್ಥೆಗೆ ಒಳಗಾಗುತ್ತಿದ್ದವು. ಉಳಿದ ವರ್ಗಗಳು ತಮ್ಮ ವಂಶಪಾರಂಪರ್ಯವಾಗಿ ಬಂದ ವೃತ್ತಿಗಳನ್ನು ಅವಲಂಬಿಸಿದ್ದವು. ತಂದೆಯ ವೃತ್ತಿ ಮಗ ಮಗನಿಂದ ಅವನ ಮಗ ಹೀಗೆ ಮುಂದುವರೆಯುತಿತ್ತು.

ಪ್ರಾಚೀನ ಕರ್ನಾಟಕ(ಭಾರತ)ದಲ್ಲಿ ಶಿಕ್ಷಣ ಪದ್ದತಿಯು ಬಹುಪಾಲು ಧಾರ್ಮಿಕವಾಗಿತ್ತು*(ಚಿದಾನಂದಮೂರ್ತಿ ಎಂ.೨೦೦೨:೨೨೬)*, ಆದ್ದರಿಂದ ಅದು ಆರಂಭ ಕಾಲದಿಂದಲೂ ಧರ್ಮಗಳ ಆಸರೆಯಲ್ಲಿ ಬೆಳೆಯಿತು. ಈ ಕಾಲದ ಸಾಮಾಜಿಕ ರಚನೆ ನೋಡಿದರೆ ಅದು ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಅವನ ವಿಕಾಸವನ್ನೇ ಮುಖ್ಯವಾಗಿಟ್ಟುಕೊಂಡು ರೂಪಿತವಾದಂತೆ ಕಾಣುತ್ತದೆ. ಇದರ ಪರಿಣಾಮ ಪ್ರಾಚೀನ ಕಾಲದ ಶಿಕ್ಷಣ ಪದ್ದತಿಯ ಮೇಲು ಆಗದೇ ಹೋಗಿಲ್ಲ. ಶಿಕ್ಷಣದ ಗುರಿ ವ್ಯಕ್ತಿತ್ವ ವಿಕಸನವಾದ್ದರಿಂದ ಶಿಕ್ಷನವು ಅದನ್ನು ಹೊಂದಿಕೊಂಡಂತೆ ಕಾಣುತ್ತದೆ*(ಚಿದಾನಂದಮೂರ್ತಿ ಎಂ.೨೦೦೨:೨೨೭)*.

ಕರ್ನಾಟಕದಲ್ಲಿ ಶಿಕ್ಷಣವನ್ನು ವ್ಯವಸ್ಥಿತವಾಗಿ ನೀಡುವ ಕ್ರಮ ಯಾವಾಗಿನಿಂದ ಪ್ರಾರಂಭವಾಯಿತು ಎಂದು ಹೇಳುವುದು ಕಷ್ಟವಾದದ್ದು. ಇದಕ್ಕೆ ಸ್ಪಷ್ಟವಾದ ಸಾಕ್ಷಾಧಾರಗಳ ಕೊರತೆಯಿದೆ. ಕ್ರಿ.ಶ. ಸುಮಾರು ೫ನೆಯ ಶತಮಾನದ ಹೊತ್ತಿಗೆ ಬೌದ್ಧ ವಿಹಾರಗಳಲ್ಲಿ ವಿದ್ಯಾಭ್ಯಾಸದ ಚಟುವಟಿಕೆಗಳು ದಿನನಿತ್ಯದ ಚಟುವಟಿಕೆಗಳಾಗಿದ್ದರ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಮುಂದೆ ೯-೧೦ನೆಯ ಶತಮಾನದ ಹೊತ್ತಿಗೆ ಹಿಂದೂ ದೇವಾಲಯಗಳು ಶಿಕ್ಷಣ ನೀಡುತಿದ್ದುದ್ದು ಕಂಡುಬರುತ್ತದೆ*(ಮಂಜುನಾಥ ಸಿ.ಯು.:೨೦೧೨:೩೩೧)*. ಈ ಕಾಲದಲ್ಲಿ ಶಿಕ್ಷಣ ನೀಡುವ ಸಂಸ್ಥೆಗಳು ಮುಖ್ಯವಾಗಿ ಧಾರ್ಮಿಕ ಕೇಂದ್ರಗಳೇ ಆಗಿರುವುದನ್ನು ಗುರುತಿಸಬಹುದು. ಉದಾ.

ಅಗ್ರಹಾರ

ದೇವಸ್ಥಾನ/ಮಠಗಳು

ಬೌದ್ಧ ವಿಹಾರಗಳು

ಬ್ರಹ್ಮಪುರಿ

ಘಟಿಕಾ/ಘಟಿಕಾ ಸ್ಥಾನ

ಮಹಾಘಟಿಕಾಸ್ಥಾನ

ಮಹಾಪರಿಷೆ

ವಕ್ಖಣಶಾಲೆ

ಶಾಲಾ/ಶಾಲೆ

ಸತ್ರ

ಸತ್ರಶಾಲಾ

ಅಭ್ಯಾಸಗೃಹ

ವಿದ್ಯಾದಾನ ಸತ್ರ (ವಸತಿ ನಿಲಯ)

ವಾಗ್ಲಲನಾಮಂಟಪ/ಸರಸ್ವತೀಮಂಟಪ(ಚರ್ಚೆ, ಉಪನ್ಯಾಸ ಸಭಾಗೃಹ)

ಸರಸ್ವತೀ ಬಂಡಾರ

ಪುಸ್ತಕ ಬಂಡಾರ(ಗ್ರಂಥಾಲಯ)

ಪ್ರಾಚೀನ ಕಾಲದಲ್ಲಿ ಕಲಿಕಾವೀಡುಗಳನ್ನು ಗುರುತಿಸಲು ಈ ಮೇಲಿನ ಪದಗಳಿದ್ದವು. ನಡುಗನ್ನಡ ಕಾಲದಲ್ಲೂ ಈ ಮಾದರಿಯಲ್ಲೇ ಧರ್ಮಾಧಾರಿತ ಶಿಕ್ಷಣ ಪದ್ಧತಿ ಮುಂದುವರೆಯಿತು. ಈ ಕಾಲಕ್ಕೆ ಇಸ್ಲಾಂ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದರಿಂದ, ಈ ಧರ್ಮದ ಕಲಿಕಾರ್ಥಿಗಳಿಗೆ ಮದರಸಾ ಎಂಬ ಹೊಸ ಮಾದರಿಯ ಶಿಕ್ಷಣ ಪದ್ಧತಿಯು ಕರ್ನಾಟಕದಲ್ಲಿ ಕಂಡುಬಂದಿತು. ಬ್ರಿಟಿಶರ ಆಗಮನದ ನಂತರ ಶಿಕ್ಷಣ ನೀಡುವ ಮಾದರಿಗಳಲ್ಲಿ ಬದಲಾವಣೆಗಳು ಕಂಡುಬಂದವು. ಕಲಿಕಾ ಕೇಂದ್ರಗಳಲ್ಲೂ ಅನೇಕ ಬದಲಾವಣೆಗಳಾಗಿ ಅನೇಕ ಹೊಸಪದ ಕಂಡುಬಂದವು. ಈ ಕಾಲದಲ್ಲಿ ಸ್ಕೂಲ್, ಕಾಲೇಜ್ ಎಂಬ ಹೊಸ ಪದಗಳು ಕನ್ನಡ ಪದಕೋಶದ ಭಾಗವಾದವು. ಈ ಪದಗಳು ಈ ಹಿಂದೆ ಇದ್ದ ಶಾಲೆಯೆಂಬ ಪದದ ಸಮಾನ ಅರ್ಥದಲ್ಲಿಯೇ ಬಳಕೆಗೆ ಬಂದರೆ, ಕಾಲೇಜ್ ಎಂಬ ಹೊಸ ಮಾದರಿಯೊಂದು ಕಂಡು ಬಂತು.

ಪ್ರಾಚೀನ ಕರ್ನಾಟಕದಲ್ಲಿ ಶಿಕ್ಷಣವನ್ನು ಪ್ರಾಥಮಿಕ ಮತ್ತು ಪ್ರೌಢ ಎಂಬ ಮಾದರಿಯಲ್ಲಿ ನೀಡಲಾಗುತ್ತಿತ್ತು. ಆನಂತರ ಕಲಿಕಾರ್ಥಿಗಳು ಲೋಕ ಸಂಚಾರ ಕೈಗೊಂಡು ಸಮಾಜದಿಂದ ಪಡೆವ ಅನುಭವಗಳೇ ಮುಂದಿನ ವಿದ್ಯಾಭ್ಯಾಸವಾಗಿರುತಿತ್ತು. ಆಧುನಿಕ ಕಾಲದಲ್ಲಿ ಕಾಲೇಜ್ ಎಂಬ ಹೊಸ ಬಗೆಯ ಅಧ್ಯಯನ ಮಾದರಿಯು ಹೆಚ್ಚಿನ ಅಧ್ಯಯನದ ಅವಕಾಶವನ್ನು ವಿಸ್ತರಿಸಿತ್ತು. ಕೆಲವು ವರ್ಗಗಳಿಗೆ ಸೀಮಿತವಾಗಿದ್ದ ಅಥವಾ ಅವರ ಅವಶ್ಯಕತೆಗೆ ತಕ್ಕಂತೆ ನೀಡುವ ಶಿಕ್ಷಣಕ್ಕಿಂತ ಹೊಸ ಮಾದರಿಯೊಂದು ಕರ್ನಾಟಕದಲ್ಲಿ(ಭಾರತ) ಕಂಡುಬಂದಿತು. ಕಲಿಕೆಯನ್ನು ವಿವಿಧ ಪ್ರಕಾರಗಳಲ್ಲಿ ವಿಂಗಡಿಸಿ ಹಂತ ಹಂತವಾಗಿ ನೀಡುವ ಕ್ರಮವೊಂದು ಬಳಕೆಗೆ ಬಂದ ಪರಿಣಾಮ ಅದಕ್ಕೆ ಸಂಬಂಧಿಸಿದ ಪದಗಳು ರಚನೆಗೊಂಡು ಕನ್ನಡ ಪದಕೋಶದ ಭಾಗವಾದವು. ಉದಾ.

ಪೂರ್ವ ಬಾಲವಾಡಿ

ಬಾಲವಾಡಿ/ಅಂಗನವಾಡಿ

ಪ್ರಾಥಮಿಕ ಶಾಲೆ

ಮಾಧ್ಯಮಿಕ ಶಾಲೆ

ಪ್ರೌಢ ಶಾಲೆ

ಪದವಿ ಪೂರ್ವ ಕಾಲೇಜು

ಪದವಿ ಮಹಾವಿದ್ಯಾಲಯ

ಸ್ನಾತಕೋತ್ತರ ಮಹಾವಿದ್ಯಾಲಯ/ಕೇಂದ್ರ

ವಿಶ್ವವಿದ್ಯಾಲಯ,

ಇತ್ಯಾದಿ, ಇಂತಹ ಕಲಿಕಾ ಕೇಂದ್ರಗಳಲ್ಲಿ ಕಲಿಯುವ ಮತ್ತು ಕಲಿಸುಗರನ್ನು ಗುರುತಿಸಲು ಪ್ರತ್ಯೇಕ ಪದಗಳಿವೆ. ಗುರು–ಶಿಷ್ಯ ಎನ್ನುವ ಪದಗಳು ಹೆಚ್ಚು ಪ್ರಸಿದ್ಧವಾದವುಗಳಾಗಿದ್ದರೂ, ಇವುಗಳ ಹೊರತಾಗಿ ಅನೇಕ ಪದಗಳು ಬಳಕೆಯಲ್ಲಿವೆ. ಉದಾ.

ಅಕ್ಕರಿಗ

ಓದುವ ಮಾಣಿ

ವಿದ್ಯಾರ್ಥಿ

ಅಂತೆವಾಸಿ

ಛಾತ್ರರ

ಚಟ್ಟ

ಆಚಾರ್ಯ

ಉಪಾಧ್ಯಾಯ

ಓಝು

ಉಸ್ತಾದ

ಮುರಿದ

ಮಾಸ್ಟರ್

ಸ್ಟೂಡೆಂಟ್

ಟೀಚರ್ ಇತ್ಯಾದಿ.

ಪ್ರಸ್ತುತ ಬದಲಾದ ಶಿಕ್ಷಣ ಮಾದರಿಯಲ್ಲಿ ಪಾಶ್ಚಿಮಾತ್ಯ ಮಾದರಿಯ ಶಿಕ್ಷಣ ಕ್ರಮ ಅಳವಡಿಕೆಯಿಂದ ವಿದ್ಯಾರ್ಥಿ ಮತ್ತು ಶಿಕ್ಷಕರನ್ನು ಗುರುತಿಸುವ ಹೊಸಪದಗಳು ಬಳಕೆಗೆ ಬಂದಿವೆ. ಉದಾ.

ವಿದ್ಯಾರ್ಥಿ

ಶಿಕ್ಷಕ

ಮುಖ್ಯಶಿಕ್ಷಕರು

ಪ್ರಾಧ್ಯಾಪಕ

ಪ್ರಾಂಶುಪಾಲ/ಪ್ರಾಚಾರ್ಯ

ಸಹ ಪ್ರಾಧ್ಯಾಪಕ

ಸಹಾಯಕ ಪ್ರಾಧ್ಯಾಪಕ

ಪ್ರಾಧ್ಯಾಪಕ

ಕುಲಸಚಿವ

ಉಪಕುಲಪತಿ

ಕುಲಪತಿ,

ಇತ್ಯಾದಿ, ಈ ಪದಗಳನ್ನು ಪುರುಷವಾಚಕವಾಗಿ ಗ್ರಹಿಸಿ ಇವಕ್ಕೆ ಸ್ತ್ರೀವಾಚಕ ರೂಪಗಳನ್ನು ರೂಪಿಸಿಕೊಳ್ಳಲಾಗಿದೆ. ಉದಾ.

ವಿದ್ಯಾರ್ಥಿನಿ

ಶಿಕ್ಷಕಿ

ಮುಖ್ಯಶಿಕ್ಷಕಿ

ಪ್ರಾಂಶುಪಾಲೆ/ಪ್ರಾಚಾರ್ಯೆ

ಸಹ ಪ್ರಾಧ್ಯಾಪಕಿ

ಸಹಾಯಕ ಪ್ರಾಧ್ಯಾಪಕಿ

ಪ್ರಾಧ್ಯಾಪಕಿ ಇತ್ಯಾದಿ.

ಕಲಿಕೆಗೆ ಸಹಾಯಕವಾಗುವ ಇತರ ವಲಯಗಳು ಇದ್ದು, ಅವುಗಳಿಗೆ ಸಂಬಂಧಿಸಿದ ಪದಗಳಲ್ಲೂ ಬೆಳವಣಿಗೆ ಕಂಡುಬಂದಿದೆ. ಉದಾ.

ಪುಸ್ತಕಪಾಲ (ಗ್ರಂಥಪಾಲಕ)

ಸರಸ್ವತಿ ಭಂಡಾರಿಗ

ಲೈಬ್ರೆರಿ

ಲೈಬ್ರರಿಯನ್ ಇತಾದಿ.

ಪ್ರಾಚೀನ ಕಾಲದಲ್ಲಿ ಹೆಚ್ಚು ಹೆಚ್ಚಾಗಿ ಧಾರ್ಮಿಕ ಹಿನ್ನೆಲೆಯ ವಿಷಯಕ್ಕೆ ಶಿಕ್ಷಣದಲ್ಲಿ ಪ್ರಾಶಸ್ತ್ಯ ಕೊಟ್ಟ ಹಾಗೆ ಕಾಣಿಸುತ್ತದೆ. ವಡ್ಡಾರಾಧನೆಯಲ್ಲಿ ಆ ಕಾಲದ ಶಿಕ್ಷಣದಲ್ಲಿ ಕಲಿಸಲಾಗುತಿದ್ದ ವಿಷಯಗಳ ಉಲ್ಲೇಖ ಹೀಗಿದೆ. *"ನಾಲ್ಕು ವೇದಮುಂ ಆಗಮಂ ಪದಿನೆಂಟು ಧರ್ಮಶಾಸ್ತ್ರಂಗಂಳುಂ ಮೀಮಾಂಸಾ ನ್ಯಾಯ ವಿಸ್ತರಣಂ ಪ್ರಮಾಣಂ ಛಂದಂ ಅಲಂಕಾರಂ ನಿಘಂಟು ಕಾವ್ಯನಾಟಕಂಗಳುಂ ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ(=ಅಶ್ವಶಾಸ್ತ್ರ) ಪಾಳಕಾಪ್ಯಂ(=ಗಜವೈದ್ಯ) ಹಾರಿತಂ ಚರಕಂ*

*ಅಶ್ವಿನೀಮತಂ ಬಾಹಲಂ ಸುಶ್ರುತಂ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜೋತಿಷ್ಯಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಗಳೆಲ್ಲಮೊ...."*(ಉದ್ಧೃತ, ಚಿದಾನಂದಮೂರ್ತಿ ಎಂ, ೨೦೦೨:೨೫೭) ಹಾಗೆಯೇ ಕಾಡಿಯೂರು ಅಗ್ರಹಾರದ ಬಗ್ಗೆ ವಿವರಿಸುವ ಕಳಸದ ಶಾಸನವೊಂದರಲ್ಲಿ

*ವ್ಯಾಕರಣಮರ್ಥಶಾಸ್ತ್ರಾ*

*ನೀಕಂ ಸಾಹಿತ್ಯ ವಿದ್ಯೆಯಿತಿಹಾಸಂ ಮಿ*

*ಕ್ಕೇಕಾಕ್ಷರಮಿನಿತರ್ಕಂ*

*ಟೀಕಂ ಬರೆಯಲ್ ಸಮಗ್ರರಾಭ್ಯಾಸಿಸುವರ್ ।* (ಉದ್ಧೃತ, ತಿಪ್ಪೇರುದ್ರಸ್ವಾಮಿ ಎಚ್.:೨೦೦೬:೨೨೬) ಎಂದು ಹೇಳಲಾಗಿದೆ. ಈ ವಿಷಯಗಳನ್ನು ಸಾಮಾನ್ಯವಾಗಿ ಶೈಕ್ಷಣಿಕವಾಗಿ ಕಲಿಯುವ ಅವಕಾಶವಿರುವ ಎಲ್ಲ ವರ್ಗದ ವಿದ್ಯಾರ್ಥಿಗಳು ಕಲಿಯುತ್ತಿದ್ದರು. ಪಂಪನು ರಾಜಕುಮಾರನಾದವನು ಕಲಿಯುತ್ತಿದ್ದ ವಿಷಯಗಳನ್ನು ಹೀಗೆ ಪಟ್ಟಿಮಾಡುತ್ತಾನೆ. *"ಪಂಚಾಂಗ ವ್ಯಾಕರಣದ ವೃತ್ತಿಭೇದಮಪ್ಪ ಛದೋವೃತ್ತಿಯೊಳಂ ಶಬ್ದಾಲಂಕಾರ ನಿಷ್ಠಿತಮಪ್ಪಲಂಕಾರದೊಳಂ ವ್ಯಾಸ ವಾಲ್ಮೀಕಿ ಕಶ್ಯಪ ಪ್ರಭೃತಿ ವಿರಚಿತಂಗಳಪ್ಪ ಮಹಾ ಕಾವ್ಯಂಗಳೊಳಂ ನಾಂದೀ ಪ್ರರೋಚನಾ ಪ್ರಸ್ತಾವನೇತ್ತಿ ವೃತ್ತ ಸಂಧಿ ಪ್ರವೇಶ ವಿಷ್ಕಂಬ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೋಳ ಪದಿನೆಂಟು ಧರ್ಮಶಾಸ್ತ್ರಂಗಳೋಳ್ ನಾಲ್ಕು ವೇದದೊಳಮಾಱಂಗದೊಳಮಯ್ದುತೆಱದ ಮಂತ್ರಂಗಳೊಳಂ ದರ್ಶನದೊಳಂ ನಾರದಾದಿ ಪ್ರಣೀತ ಗಾಮಧರ್ವ ವಿದ್ಯಾ ವಿಶೇಷಂಗಳೊಳಂ ಗಜಾಗಮಜ್ಞ ರಾಜಪುತ್ರ ಗೌತಮ ವಾದ್ವಾಕಿ ಪಾಳಕಶ್ಯಪ (ಪಾ. ಪಾಳಕಾಪ್ಯ) ಸುಪತಿ ಶ್ರೀ ಹರ್ಷಾದಿ ಪುರಾಣಪುರುಷ ವಿರಚಿತಂಗಳಪ್ಪ ಹಸ್ತಿ ಶಾಸ್ತ್ರಂಗಳೋಳಂ ಚಿತ್ರಕ್ರಮ ಪುತ್ರಚ್ಛೇದ ಗ್ರಹಣಗಣಿತ ರತ್ನಪರೀಕ್ಷೆಗಳೊಳಂ ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರ ಪ್ರಯೋಗ ವಿಷಾಹರಣ ಸರಭೇದ ರತಿತಂತ್ರೇಂದ್ರಜಾಲ ವಿವಿಧ ವಿದ್ಯೆಗಳೊಳಮನೇಕಾಕ್ಷರ ಸ್ವರೂಪಂಗಳೊಳಂ ಚಾಪ ಚಕ್ರ ಪರಶು ಕೃಪಾಣ ಶಕ್ತಿ ತೋಮರ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮಯತಿಪ್ರವೀಣನುಮಾರೂಢ ಸರ್ವಜ್ಞ ಮಹೇಂದ್ರ ಜಾಣನುಮಾಗಿ..."* (ಉದ್ಧೃತ, ಚಿದಾನಂದಮೂರ್ತಿ ಎಂ, ೨೦೦೨:೨೫೮-೫೯) ಇದರಿಂದ ಆ ಕಾಲದಲ್ಲಿ ರಾಜನಾಗಬೇಕಿರುವನು ಕಲಿಯಬೇಕಾದ ಅಥವಾ ಪಡಬೇಕಾಗಿದ್ದ ಶ್ರಮದ ಬಗ್ಗೆ ಅರಿಯಬಹುದಾಗಿದೆ.

ನಡುಗನ್ನಡ ಕಾಲದಲ್ಲಿ ಶಿಕ್ಷಣದ ವಿಷಯವಾಗಿ ಕಲಿಸಲಾಗುತ್ತಿದ್ದ ವಿಷಯಗಳ ಬಗ್ಗೆ ಹೆಚ್ಚು ವಿವರಗಳು ಸಿಗದಿದ್ದರೂ ಆ ಕಾಲಕ್ಕೆ ಇಸ್ಲಾಂ ಧರ್ಮದ ಪ್ರಭಾವಿತ ಪ್ರದೇಶಗಳಲ್ಲಿ ಆ ಧರ್ಮದ ವಿಷಯಾನುಸಾರ ಶಿಕ್ಷಣ ನೀಡುವ ಸಾಧ್ಯತೆಗಳು ಹೆಚ್ಚಾಗಿ ಕಂಡುಬರುತ್ತದೆ. ೧೬ನೆಯ ಶತಮಾನದ ನಂತರ ಆಧುನಿಕ ಮಾದರಿಯ ಶಿಕ್ಷನವನ್ನು ಅಳವಡಿಸಿಕೊಂಡ ಮೇಲೆ ಕಲಿಕಾ ವಿಷಯಗಳಲ್ಲಿ ಗಣನೀಯ ಬದಲಾವಣೆಗಳು ಕಂಡು ಬಂದಿವೆ. ಈ ಶಿಕ್ಷಣ ಮಾದರಿಯಲ್ಲಿ ವಿಷಯಗಳನ್ನು ಮುಖ್ಯವಾಗಿ ಮೂರು ಪ್ರಕಾರಗಳಲ್ಲಿ ವಿಂಗಡಿಸಲಾಗುತ್ತದೆ. ೧) ಕಲಾ ೨)

ವಾಣಿಜ್ಯ ೩) ವಿಜ್ಞಾನ. ಈ ಮೂರು ಪ್ರಕಾರಗಳಲ್ಲಿ ಅನೇಕ ಹೊಸ ವಿಷಯಗಳನ್ನು ಕಲಿಕೆಯಲ್ಲಿ ಅಳವಡಿಸಿಕೊಳ್ಳಲಾಯಿತು.

ಭಾರತೀಯ ಪರಂಪರೆಯು ಕಲಿಕೆಯಲ್ಲಿ ವಿಷಯಗಳನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳುವುದಕ್ಕೆ ಹೆಚ್ಚು ಒತ್ತು ಕೊಡಲಾಗುತ್ತಿತ್ತು. ಕಾಲಾನಂತರ ಬರವಣಿಗೆ ರೂಢಿಸಿಕೊಂಡ ಮೇಲೆ ಬರೆಯುವ ಸಾಧನಗಳನ್ನು ರೂಪಿಸಿಕೊಳ್ಳಲಾಯಿತು. ಪ್ರಾರಂಭದಲ್ಲಿ ಕಲ್ಲು, ತಾಮ್ರ, ಕಬ್ಬಿಣ, ಕಂಚು ಮತ್ತು ಬಂಗಾರದಂತ ಲೋಹಗಳ ಮೇಲೆ ಬರೆಯಲಾಗುತಿತ್ತು. ಬರಹದ ಅಗತ್ಯತೆಗಳು ಬೇರೆಯಾದಾಗ ಇದು ಚರ್ಮ, ತಾಳೆಗರಿಯಂತ ಮೆತ್ತಗಿನ ವಸ್ತುಗಳಲ್ಲಿ ಬರೆಯಲಾರಂಭಿಸಿ ಹಾಗೆ ಮುಂದುವರೆದು ವಿಶೇಷವಾಗಿ ಸಿದ್ಧಪಡಿಸಿದ ಬಟ್ಟೆ ಅಥವಾ ಅರಬರಿಂದ ಸ್ವೀಕರಿಸಿದ ಕಾಗದದ ಮೇಲೆ ಬರೆಯುವ ಪದ್ಧತಿ ಬಂದು ಬರವಣಿಗೆ ಸುಲಭವಾಗಿಸಿತು. ಬ್ರಿಟೀಶರ ಆಗಮನದ ನಂತರ ಈ ವಸ್ತುವನ್ನು ಪೇಪರ್ ಎನ್ನುವ ಹೊಸ ಪದದಿಂದ ಗುರುತಿಸಲಾಗುತ್ತದೆ. ಈ ಪೇಪರ್‌ಗಳನ್ನು ಬಳಸಿಕೊಂಡು ತಯಾರಿಸಿದ ಪುಸ್ತಕ, ಬರವಣಿಗೆಗೆ ನೋಟ್‌ಬುಕ್‌ಗಳಂತ ಕಲಿಕಾ ಸಾಮಗ್ರಿಗಳೊಂದಿಗೆ ಅವನ್ನು ಗುರುತಿಸುವ ಪದಗಳು ಕನ್ನಡದಲ್ಲಿ ಕಾಣಿಸಿಕೊಂಡವು.

ಪ್ರಾಚೀನ ಕಾಲದಲ್ಲಿ ಬರವಣಿಗೆ ಮಾಡಲು ಕಂಠ, ಎಗ್ಗಿಮುಳ್ಳು, ಮೊಳೆ, ನವಿಲುಗರಿ, ಬಳಪದಂತ ಉಪಕರಣಗಳನ್ನು ಬಳಸಲಾಗುತ್ತಿತ್ತು. ಬರೆಯುವ ಮಾಧ್ಯಮಗಳು ಬದಲಾದಂತೆ ಬರವಣಿಗೆಯ ಉಪಕರಣಗಳು ಬದಲಾಗಿದ್ದನ್ನು ಗುರುತಿಸಬಹುದು. ಉದಾ. ಕಲಮು, ಪೆನ್ನು, ಲೇಖನಿ, ಪೆನ್ಸಿಲು>ಸಿಸದ ಕಡ್ಡಿ ಇತ್ಯಾದಿ. ಆಧುನಿಕತೆ ಮುಂದುವರೆದು ಹೊಸ ಆವಿಷ್ಕಾರಗಳು ಬಂದ ಮೇಲೆ ಟೈಪಿಂಗ್ ಎನ್ನುವ ಪದವು ಬರವಣಿಗೆಯನ್ನು ಗುರುತಿಸುವ ಪದವಾಗಿ ಕನ್ನಡಕ್ಕೆ ಸೇರಿಕೊಂಡಿತು. ಇದು ಕೈಬರಹಕ್ಕೆ ಸಂಬಂಧಿಸದೆ ಅಕ್ಷರವನ್ನು ಪೇಪರ್ ಮೇಲೆ ಮೂಡಿಸುವ ಮಾದರಿಯನ್ನು ಗುರುತಿಸುತ್ತದೆ. ಈ ಮಾದರಿಯನ್ನು(concept) ಮತ್ತು ಇದಕ್ಕೆ ಸಂಬಂಧಿಸಿದ ಪದಗಳನ್ನು ಪಾಶ್ಚಾತ್ಯರಿಂದ ಸ್ವೀಕರಿಸಿಕೊಳ್ಳಲಾಗಿದೆ.

ಈ ಪದಗಳೊಂದಿಗೆ ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಪದಗಳು ಕನ್ನಡ ಪದಕೋಶಕ್ಕೆ ಸೇರಿಕೊಂಡಿವೆ. ಅವುಗಳಲ್ಲಿ ಹೆಚ್ಚಿನವು ಸ್ವೀರಣದಿಂದ ಬಂದ ಪದಗಳೇ ಆಗಿವೆ. ಉದಾ.

**ಅರಬ್ಬಿ**

ಶಾಯಿ

ನಕಾಶ

ಇಂಗ್ಲಿಶ್

ಅಕಾಡೆಮಿ/ಅಕಾದೆಮಿ

ಅಟ್ಲಾಸು

ಇಂಕು

ಡಿಕ್ಷನರಿ

ಡಸ್ಟರು

ಬ್ಲಾಕ್ ಬೋರ್ಡ

ರೋಲ್ ದೊಣ್ಣೆ

ರೆಜಿಸ್ಟರ

ಸ್ಲೇಟ್

ಮ್ಯಾಪ್

ಇತ್ಯಾದಿ ಪದಗಳನ್ನು ಗಮನಿಸಬಹುದು. ಈ ಪದಗಳು ನೇರವಾಗಿ ಬಳಕೆಗೊಂಡರೆ ಕೆಲವು ಪದಗಳಿಗೆ ಕನ್ನಡದಲ್ಲಿ ಹೊಸ ಪದಗಳನ್ನು ರಚಿಸಿಕೊಳ್ಳಲಾಗಿದೆ. ಉದಾ. **ಬ್ಲಾಕ್ ಬೋರ್ಡ್**>**ಕಪ್ಪು ಹಲಗೆ, ಟ್ರಾನ್ಸಲೇಶನ್**> **ತರ್ಜುಮೆ**> **ಅನುವಾದ** ಇತ್ಯಾದಿ.

ಶಿಕ್ಷಣಕ್ಕೆ ಸಂಬಂಧಿಸಿದ ಕನ್ನಡ ಪದಕೋಶವು ಅನೇಕ ಹಂತದಲ್ಲಿ ಬೆಳವಣಿಗೆ ಕಂಡಿದೆ. ವಿವಿಧ ಕಾಲಘಟ್ಟದಲ್ಲಿ ಶಿಕ್ಷಣ ಮಾದರಿಯಲ್ಲಿ ಆದ ಬದಲಾವಣೆಗಳು ಪದಕೋಶದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿವೆ. ಆಧುನಿಕ ಮಾದರಿಯ ಶಿಕ್ಷಣ ಪದ್ಧತಿಯು ಪದಕೋಶದ ಬೆಳವಣಿಗೆಯನ್ನು ಹೆಚ್ಚು ಪ್ರಭಾವಿಸಿದ್ದು ಗಮನಿಸಲಾಗಿದೆ.

### ೪.೩ ಸಾಹಿತ್ಯ

ಸಾಮಾನ್ಯವಾಗಿ ಸಾಹಿತ್ಯ ಎನ್ನುವುದು ಭಾಷೆಯ ಕೃಪಾಪೋಷಿತವಾದ ಅಭಿವ್ಯಕ್ತಿಯಾಗಿರುತ್ತದೆ. ಭಾಷಿಕ ಅಭಿವ್ಯಕ್ತಿಗಳು ಪ್ರಾರಂಭವಾದಾಗಲೇ ಸಾಹಿತ್ಯದ ಉಗಮವು ಸಾಧ್ಯವಾಗುತ್ತದೆ. ರಸಾನುಭವದ ಸುಂದರ ಅಭಿವ್ಯಕ್ತಿಯೇ ಸಾಹಿತ್ಯ*(ಮುಗಳಿ ರಂ. ಶ್ರೀ.:೨೦೦೬:೧೧).* ಸಾಹಿತ್ಯಕ್ಕೆ ಈ ಕಸುವನ್ನು ಭಾಷೆಯೇ ಕೊಡಬಲ್ಲದು. ಸಾಹಿತ್ಯ ಎನ್ನುವುದು ಒಂದು ಅರ್ಥದಲ್ಲಿ ಪದ ಪದಾರ್ಥಗಳ ಸುಂದರ ಹೊಂದಾಣಿಕೆಯಾಗಿರುತ್ತದೆ. ಸಾಹಿತ್ಯವು ಪ್ರತಿ ಭಾಷೆಯ ಪದಕೋಶವನ್ನು ಕಾಪಿಡುವ ಸಾಧನವಾಗಿರುತ್ತದೆ. ಒಂದರ್ಥದಲ್ಲಿ ಪದಕೋಶವನ್ನು ಸರಿಯಾಗಿ ಬಳಸಬಲ್ಲ ಮಾಧ್ಯಮವೇ ಇದಾಗಿರುತ್ತದೆ. ಇದು ಭಾಷೆಯನ್ನು ಕಾಲದಿಂದ ಕಾಲಕ್ಕೆ ಮುಂದುವರೆಸುವಲ್ಲಿ ಕಾರಣೀಭೂತವಾಗಿರುತ್ತದೆ.

ಸಾಹಿತ್ಯವು ಕನ್ನಡ ಭಾಷೆಯ ಬೆಳವಣಿಗೆಗೆ ಬಹು ಮುಖ್ಯವಾದ ಕಾರಣವಾಗಿದೆ. ಕನ್ನಡವು ಯಾವಾಗ ಹುಟ್ಟಿಕೊಂಡಿದೆ ಎನ್ನುವುದನ್ನು ಹೇಳುವುದು ಕಷ್ಟದ ಸಂಗತಿ. ಅದರ ಆರಂಭಿಕ ಪದಕೋಶದ ಬಗ್ಗೆಯೂ ಇಂತಹದ್ದೇ ಅಸ್ಪಷ್ಟತೆಯಿದೆ. ಕನ್ನಡದ ಪದಕೋಶದ ಸ್ವರೂಪ ಲಭ್ಯವಾಗುವುದು ಸಾಹಿತ್ಯಿಕ ಆಕರಗಳು ಸಿಕ್ಕ ಮೇಲೆಯೆ. ಸಾಹಿತ್ಯದ ಸಾಂಗತ್ಯವೇ ಕನ್ನಡ ಭಾಷೆಯನ್ನು ಹಲವು ಆಯಾಮಗಳಲ್ಲಿ ಬೆಳಸಿದೆ.

ಕನ್ನಡ ಸಾಹಿತ್ಯದ ಉದಯವು ಯಾವಕಾಲದಲ್ಲಿ ಆಯಿತು, ಅದಕ್ಕೆ ಯಾವ ಕಾರಣಗಳು ಕೂಡಿಬಂದವು ಎಂಬ ಪ್ರಶ್ನೆಯಷ್ಟು ಉತ್ತರ ಸರಳವಾಗಿಲ್ಲ. ಖಚಿತವಾದ ಆಧಾರಗಳಂತೂ ಇಲ್ಲ. ದೊರೆತ ಸಾಮಗ್ರಿಯ ಬಲದಿಂದ ಈವರೆಗೂ ಬರೀ ಊಹೆ ಮಾಡಲಾಗಿದೆ. ಸುನಿಶ್ಚಿತವಾದ ಒಂದು ಸಂಗತಿಯೆಂದರೆ ಕ್ರಿ.ಶ. ಒಂಬತ್ತನೆಯ ಶತಮಾನದಲ್ಲಿ ರಚಿತವಾದ ಕವಿರಾಜಮಾರ್ಗವು ನಮಗೆ ನಿರ್ವಿವಾದವಾಗಿ ದೊರೆತ ಮೊದಲ ಗ್ರಂಥವಾದರೂ ಕನ್ನಡದಲ್ಲಿ ಅದು ಮೊದಲನೆಯ ಗ್ರಂಥವಲ್ಲ. ಅದಕ್ಕಿಂತ ಹಿಂದೆ ಕನ್ನಡದಲ್ಲಿ ಸಾಹಿತ್ಯ ಹುಟ್ಟಿತ್ತು. ಮಾತ್ರವಲ್ಲ ಒಂದು ಶಿಷ್ಟಸಂಪ್ರದಾಯವಾಗಿ ರೂಪುಗೊಳ್ಳುತ್ತಲಿತ್ತು. ಕವಿರಾಜ ಮಾರ್ಗಕ್ಕಿಂತ ಮುಂಚೆ ಹಲವು ಶಾಸನಗಳಲ್ಲಿ ಕನ್ನಡದ ಸಾಹಿತ್ಯಿಕ ಅಂಶಗಳನ್ನು ಗುರುತಿಸಲಾಗಿದೆ. ಇದಲ್ಲದೆ ಅನೇಕ ದೇಸಿ(ಜಾನಪದ ರೂಪಗಳು) ಮಾದರಿಗಳು ಇರುವ ಎಲ್ಲ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಒಂಬತ್ತನೆಯ ಶತಮಾನಕ್ಕಿಂತ ಹಿಂದಿದ್ದ ಕನ್ನಡ ಸಾಹಿತ್ಯವು ಲಭ್ಯವಾಗಿದ್ದರೆ ಕನ್ನಡದ ಅಸ್ಮಿತೆಯನ್ನು ಇನ್ನಷ್ಟು ಗಟ್ಟಿಯಾಗಿ ಅರಿಯಬಹುದಿತ್ತು. ಕನ್ನಡ ಸಾಹಿತ್ಯವು ಒಂಬತ್ತನೆಯ ಶತಮಾನಕ್ಕೆ ಬರುವಷ್ಟರಲ್ಲಿ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳ ಗಟ್ಟಿ ಪ್ರಭಾವಕ್ಕೆ ಒಳಗಾಗಿತ್ತು. ಈ ಕಾಲದಲ್ಲೇ ಕನ್ನಡವು ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳ ಹೆಚ್ಚು ಹೆಚ್ಚು ಪದಗಳನ್ನು ಸ್ವೀಕರಿಸಿಕೊಳ್ಳಲಾಯಿತು. ಈ ಮೂಲಕ ಈ ಕಾಲದ ಸಂಸ್ಕೃತಜನ್ಯ ಇತರ ಭಾಷೆಗಳು ಕನ್ನಡಕ್ಕೆ ಸೇರಿಕೊಂಡವು. ಕನ್ನಡವು ಸಂಸ್ಕೃತ ಸಾಹಿತ್ಯದಿಂದ ಪಡೆದುಕೊಂಡ ಸಾಹಿತ್ಯಿಕ ಮಾದರಿ ಮತ್ತು ವಿಷಯಗಳು ಕನ್ನಡವು ಆ ಭಾಷೆಯ ಪ್ರಭಾವಕ್ಕೆ ಒಳಗಾಗುವಂತೆ ಮಾಡಿತು(ಬರಹ ರೂಪಕ್ಕೆ). ಸಂಸ್ಕೃತ ಪ್ರಾಕೃತದ ಪದಕೋಶದ ಕನ್ನಡ ಪ್ರವೇಶದಿಂದ ಕನ್ನಡ ಪದಕೋಶ ಬೆಳವಣಿಗೆ ಹೊಂದಿತು ಎಂಬುದು ಎಷ್ಟು ಸತ್ಯವೋ ಬರಹದಿಂದ ಕನ್ನಡ ಪದಗಳು ಹಿನ್ನೆಲೆಗೆ ಸರಿಯುವಂತೆ ಮಾಡಿದ್ದು ಅಷ್ಟೇ ಸತ್ಯವಾದದ್ದು. ಸಂಸ್ಕೃತ ಅಥವಾ ಪ್ರಾಕೃತದ ಅತಿಯಾದ ಅವಲಂಬನೆಯಿಂದ ಕನ್ನಡವು ಸ್ವಂತಿಕೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸಾಹಿತ್ಯಿಕ ಮತ್ತು ಪದಕೋಶದ ಬೆಳವಣಿಗೆ ಕಂಡು ಬಂದರೂ ಮೂಲ ಪದಕೋಶವನ್ನು ಬಳಕೆಯಿಂದ ಹಿನ್ನೆಲೆಗೆ ಸರಿಯುವಂತೆ ಮಾಡಿತು.

ನಡುಗನ್ನಡ ಕಾಲದಲ್ಲಿ ಈ ಪ್ರಕ್ರಿಯೆ ಸ್ವಲ್ಪ ಭಿನ್ನವಾಗಿದೆ. ಈ ಕಾಲಾವಧಿಯಲ್ಲಿ ಬಂದ ಉರ್ದು ಅಥವಾ ಪಾರಸಿ, ಅರಬ್ಬಿ ಸಾಹಿತ್ಯ ಮಾದರಿಗಳು, ಭಾರತೀಯ ಅಲ್ಲದಿರುವುದು ವಿಷಯದ(subject) ದೃಷ್ಟಿಯಿಂದ ಆ ಸಾಹಿತ್ಯವು ಕನ್ನಡಕ್ಕೆ ಸ್ವೀಕರಣವಾಗಲಿಲ್ಲವೇನೋ ಆದರೆ ಭಾಷಿಕ ಪ್ರಭಾವ ಮಾತ್ರ ಆಯಿತು. ಆನಂತರದ ಕಾಲದಲ್ಲಿ ಬಂದ ಇಂಗ್ಲಿಶ್ ಸಾಹಿತ್ಯವು; ಕನ್ನಡದ ಮೇಲೆ ಸಾಹಿತ್ಯಿಕ ಪ್ರಕಾರಗಳನ್ನು ಸ್ವೀಕರಿಸುವಲ್ಲಿ ಮಾಡಿದ ಪ್ರಭಾವದಷ್ಟು, ಸಾಹಿತ್ಯ ವಲಯದ ಪದಕೋಶ ಸ್ವೀಕರಿಸುವಲ್ಲಿ ಆಗಲಿಲ್ಲ. ಈ ಕಾಲದಲ್ಲಿ ರಚನೆಯಾದ ಸಾಹಿತ್ಯವು ಭಾರತದ ಪಾರಂಪರಿಕ ಮಾದರಿಯಿಂದ ಸಂಪೂರ್ಣ ಹೊಸ ಮಾದರಿಗೆ ಒಳಗೊಂಡಂತೆ ಕಂಡುಬರುತ್ತದೆ. ಈ ಕಾಲಕ್ಕಾಗಲೇ ಸಂಸ್ಕೃತವು ಕನ್ನಡದಲ್ಲಿ ಬೆರೆತು ಹೋಗಿದ್ದರಿಂದ ಇಂಗ್ಲಿಶ್ ಪದಕೋಶ ತುಂಬಾ ಅನಿವಾರ್ಯ ಎಂಬಂತೆ ಬಳಕೆಯಾಗಿರುವುದು ಕಂಡು ಬಂದಿದೆ.

ಸಾಹಿತ್ಯ ವಲಯಕ್ಕೆ ಸಂಬಂಧಿಸಿದಂತೆ ಕನ್ನಡವು ಅನೇಕ ಭಾಷೆಗಳ ಸಾಹಿತ್ಯಿಕ ರೂಪಗಳ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಪದಗಳನ್ನು ಸ್ವೀಕರಿಸಿಕೊಂಡು ತನ್ನ ಪದಕೋಶವನ್ನು ಬೆಳೆಸಿಕೊಂಡಿದೆ.

**೪.೩.೧ ಸಾಹಿತ್ಯ ಪ್ರಕಾರಗಳು**

ಭಾರತೀಯ ಸಾಹಿತ್ಯವು ಮಹತ್ವ ಪಡೆದಿರುವುದೇ ಅದರ ವಿಫುಲ ಸಾಹಿತ್ಯಿಕ ಪ್ರಕಾರಗಳ ಕಾರಣದಿಂದ. ಈ ಪ್ರತಿಯೊಂದು ಪ್ರಕಾರವೂ ತನ್ನದೇ ಆದ ಮಹತ್ವವನ್ನು ಹೊಂದಿವೆ. ಮತ್ತು ಕನ್ನಡದಲ್ಲಿ ಪ್ರತಿಯೊಂದು ಪ್ರಕಾರ ವಿಶೇಷ ಸಾಹಿತ್ಯಿಕ ರಚನೆಗೆ ಕಾರಣವಾಗಿದೆ. ಕನ್ನಡ ಸಾಹಿತ್ಯವು ವಿಷಯಗಳ ಆಯ್ಕೆಯಲ್ಲಿ ಸಂಸ್ಕೃತ ಸಾಹಿತ್ಯವನ್ನು ಹೆಚ್ಚು ಅವಲಂಬಿಸಿರುವಂತೆ ಸಾಹಿತ್ಯ ಪ್ರಕಾರಗಳನ್ನು ಆ ಭಾಷೆಯಿಂದಲೇ ಪಡೆದುಕೊಂಡಿದೆ. ಇದರ ಹೊರತಾಗಿ ಜಾನಪದ ಮಾದರಿಯ ಸಾಹಿತ್ಯ ಪ್ರಕಾರವೊಂದು ಪ್ರತಿಯೊಂದು ಕಾಲಕ್ಕೂ ಇದ್ದೇ ಇದೆ. ಸಂಸ್ಕೃತ ಸಾಹಿತ್ಯದಲ್ಲಿಯ ವಿಷಯಗಳನ್ನು ಕನ್ನಡದಲ್ಲಿ ರಚಿಸುವಾಗ ಕನ್ನಡ ಕವಿಗಳು ಹೆಚ್ಚಾಗಿ ಸಂಸ್ಕೃತ ಕಾವ್ಯ ಪ್ರಕಾರಗಳನ್ನೇ ಅವಲಂಬಿಸಿರುವುದು ಕಂಡುಬರುತ್ತದೆ. ಬ್ರಾಹ್ಮಣ ಮತ್ತು ಜೈನ ಕವಿಗಳು ಸಂಸ್ಕೃತ ಕಾವ್ಯಪ್ರಕಾರಗಳಿಗೆ ಹೆಚ್ಚು ಒತ್ತು ಕೊಟ್ಟರೆ ಉಳಿದ ಕವಿಗಳು ಕನ್ನಡ ಕಾವ್ಯ ಪ್ರಕಾರಗಳಲ್ಲಿ ಕಾವ್ಯ ರಚಿಸಿದ್ದಾರೆ.

ಭಾರತದ ಇತರ ಭಾಷೆಗಳಂತೆ ಕನ್ನಡದಲ್ಲಿಯೂ ಇಂಗ್ಲಿಶ್ ವಿದ್ಯಾಭ್ಯಾಸ– ವಿಚಾರ ಸರಣಿಗಳ ತೀವ್ರ ಪ್ರಭಾವದಿಂದ ಕಾಣಿಸಿಕೊಂಡಿತು. ಕಳೆದ ೧೦೦–೨೦೦ ವರ್ಷಗಳಲ್ಲಿ ಸಾಹಿತ್ಯದ ವಿಷಯ, ಆಶಯ, ರೂಪ, ಶೈಲಿಗಳಲ್ಲಿ ಅನೇಕ ಬದಲಾವಣೆಗಳಾಗಿವೆ. ವಸ್ತುವಿನ ಆಯ್ಕೆಯಲ್ಲಿಯೂ ಗಣನೀಯ ಬದಲಾವಣೆಗಳು ಕಂಡು ಬಂದಿವೆ. ಸಾಹಿತ್ಯ ರಚನಕಾರರು ರಾಜಾಶ್ರಯದಿಂದ ಹೊರಬಂದಿದ್ದು ರಾಜರುಗಳನ್ನು ಹೊಗಳಿ ಬರೆಯುತಿದ್ದ ಬರವಣಿಗೆ ಸಾಮಾಜಿಕ ವಿಷಯಗಳಿಗೆ ತಿರುಗಿಕೊಂಡಿತು. ಮಿಶನರಿಗಳು ಬೈಬಲನ್ನು ಕನ್ನಡಕ್ಕೆ ಅನುವಾದಿಸಿದ್ದು ಕನ್ನಡದಲ್ಲಿ ವಿಷಯಗಳನ್ನು ಹೇಳುವ ಕ್ರಮದಲ್ಲಿ ಬದಲಾವಣೆಗೆ ಕಾರಣಗಳಾದವು. ಇದು ಪಾಶ್ಚಿಮಾತ್ಯರ ಸಾಹಿತ್ಯ ಪ್ರಕಾರಗಳನ್ನು ಸ್ವೀಕರಿಸುವಂತೆ ಮಾಡಿತು. ಇದು ಕನ್ನಡ ಸಾಹಿತ್ಯ ಲೋಕದಲ್ಲಿ ಮಹತ್ವದ ಬದಲಾವಣೆ ತಂದಿತು. ಈ ಬದಲಾವಣೆ ಸಾಹಿತ್ಯ ಪ್ರಕಾರಗಳಲ್ಲಿ ಹೊಸ ಪ್ರಕ್ರಿಯೆ ಕಾಣಿಸಿಕೊಂಡು ಹೊಸ ಸಾಹಿತ್ಯ ಪ್ರಕಾರಗಳು ಕಂಡು ಬಂದವು ಇವುಗಳನ್ನು ಹೆಸರಿಸುವ ಪದಗಳು ಕನ್ನಡ ಪದಕೋಶಕ್ಕೆ ಸೇರಿಕೊಂಡವು.

ಕನ್ನಡದಲ್ಲಿ ಇದ್ದ ಸಾಹಿತ್ಯ ಪ್ರಕಾರಗಳನ್ನು ಹೀಗೆ ಗುರುತಿಸಬಹುದು

**೪.೩.೧.೧ ಹಳಗನ್ನಡ**

ಒನಕೆವಾಡು

ಓವನಿಗೆ (ಕವಿರಾಜಮಾರ್ಗದಲ್ಲಿ ಉಲ್ಲೇಖಗೊಂಡಿದ್ದು)

ಗದ್ಯಕಥೆ

ಬೆದಂಡೆ

ಪಗರಣ

ಚೆತ್ತಾಣ

ಚಂಪೂ

ವಚನ

ರಗಳೆ

ಷಟ್ಪದಿ

ತ್ರಿಪದಿ

ಸಾಂಗತ್ಯ

ಕೀರ್ತನೆ

ಶತಕ

ಈ ಸಾಹಿತ್ಯ ಪ್ರಕಾರಗಳಲ್ಲಿ ಹೆಚ್ಚಿನವು ಕನ್ನಡವು ಸಂಸ್ಕೃತ ಅಥವಾ ಪ್ರಾಕೃತದಿಂದ ಸ್ವೀಕರಿಸಿಕೊಂಡು ಬೆಳೆದವುಗಳೇ ಆಗಿದ್ದರೂ ಕನ್ನಡದ ಆರಂಭ ಕಾಲದ ಸಾಹಿತ್ಯಿಕ ಅಭಿವ್ಯಕ್ತಿಗಳನ್ನು ಅಭಿವ್ಯಕ್ತಿಸಿದ ಪ್ರಕಾರಗಳಾಗಿವೆ. ಈ ಪ್ರಕಾರಗಳನ್ನು ಕೂಡ ಕಾಲದಿಂದ ಕಾಲಕ್ಕೆ ಮಾಡಿಕೊಂಡ ಪ್ರಯೋಗಗಳಿಂದ ಕನ್ನಡವು ತನ್ನದಾಗಿಸಿಕೊಂಡಿದೆ.

**೪.೩.೧.೨ ಹೊಸಗನ್ನಡ**

ಮಹಾಕಾವ್ಯ < ಎಪಿಕ್

ನಾಟಕ

ಕಾದಂಬರಿ < ನಾವೆಲ್

ಸಣ್ಣಕಥೆ < ಶಾರ್ಟ್ ಸ್ಟೋರಿಸ್

ಲಲಿತಪ್ರಬಂಧ < ಎಸ್ಸೆ

ಕವಿಚರಿತ್ರೆ < ಬಯೋಗ್ರಫಿಕ್

ವಿಮರ್ಶೆ < ಕ್ರಿಟಿಸಿಸಮ್

ಸಂಶೋಧನೆ < ರಿಸರ್ಚ್

ಆತ್ಮಕಥೆ/ಚರಿತೆ < ಆಟೋಬಯೋಗ್ರಫಿ

ಜೀವನ ಚರಿತ್ರೆ < ಬಯೋಗ್ರಫಿ

ಪ್ರವಾಸ ಕಥನ

ಸಂಪಾದನೆ < ಎಡಿಟೆಡ್‌ಶ

ಗ್ರಂಥಸಂಪಾದನೆ < ಟೆಕ್ಸ್ಟುಅಲ ಕ್ರಿಟೀಸಿಸಮ್

ಈ ಸಾಹಿತ್ಯ ಪ್ರಕಾರಗಳು ಆಧುನಿಕ ಕನ್ನಡದಲ್ಲಿ ಬೆಳೆದು ಬಂದವು. ಗಮಕ ರೂಪದಲ್ಲಿ ಹಾಡಲ್ಪಡುತಿದ್ದ ಕಾವ್ಯಗಳ ಬದಲಾಗಿ ಬಂದ ಓದಬಲ್ಲ ಅಥವಾ ಹಾಡಬಲ್ಲ ಪ್ರಕಾರಗಳನ್ನು ಹೆಸರಿಸಲು ನಡುಗನ್ನಡ ಮತ್ತು ಹೊಸಗನ್ನಡ ಕಾಲದಲ್ಲಿ

ಗಝಲ್

ಶಾಯರಿ

ಕವನ

ಕವಿತೆ

ಭಾವಗೀತೆ

ಹನಿಗವನ

ಮಿನಿಗವನಗಳಂತ ಹೊಸ ಪದಗಳು ರಚನೆಯಾದವು. ರಾಜ ಮಹಾರಾಜರ ಕತೆಯ ಬದಲಾಗಿ ಸಾಮಾನ್ಯ ಜನರ ಜೀವನದ ಅನುಭವಗಳನ್ನು ಅಭಿವ್ಯಕ್ತಿ ಪಡಿಸುವ

ಕಾದಂಬರಿ

ಸಣ್ಣಕತೆ

ನಾಟಕಗಳಂತಹ ಸಾಹಿತ್ಯ ಪ್ರಕಾರಗಳನ್ನು ಗುರುತಿಸಲು ಹೊಸ ಪದಗಳು ಕಂಡುಬಂದವು. ಕಾದಂಬರಿಯಲ್ಲಿ

ಪ್ರಾದೇಶಿಕ,

ಚಾರಿತ್ರಿಕ/ಐತಿಹಾಸಿಕ,

ಸಾಮಾಜಿಕ,

ಪತ್ತೇದಾರಿ ಎಂಬ ಹೊಸ ಪದಗಳು ರೂಪುಗೊಂಡರೆ, ನಾಟಕಗಳಲ್ಲಿ

ದುರಂತ,

ವಿಡಂಬನಾತ್ಮಕ,

ಹಾಸ್ಯ,

ಏಕಾಂಕ,

ಮೂಕಾಭಿನಯ ಎಂಬ ಪದಗಳು ಹೊಸ ಅರ್ಥದಲ್ಲಿ ಕನ್ನಡ ಪದಕೋಶ ಸೇರಿಕೊಂಡವು. ಹೊಸಗನ್ನಡದಲ್ಲಿ ಗದ್ಯ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟಿದ್ದು ಅನೇಕ ಸಾಹಿತ್ಯ ಪ್ರಕಾರಗಳು ಹುಟ್ಟಿ ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾಗಿದೆ.

### ೪.೩.೨ ಮೀಮಾಂಸೆ

ಭಾರತದಲ್ಲಿ ಕಾವ್ಯಮೀಮಾಂಸೆ ತಕ್ಕಷ್ಟು ಬೆಳೆದಿತ್ತು. ಆದರೆ ಟೀಕೆಯ ರೂಪದಲ್ಲಿ, ವ್ಯಾಖ್ಯಾನದ ರೂಪದಲ್ಲಿ ಬಂದ ಕೆಲವು ವಿಮರ್ಶೆಯ ಮಾತುಗಳಿಗೆ ಬಿಟ್ಟರೆ ಅನ್ವಯ ವಿಮರ್ಶೆ ಹುಟ್ಟಲೇ ಇಲ್ಲ

ಅನ್ನಬಹುದು. ಕನ್ನಡವು ಕೂಡ ಈ ಮಾದರಿಯನ್ನೇ ಅನುಸರಿಸುತಿತ್ತು. ಅವುಗಳನ್ನು ಗುರುತಿಸುವ ಪದಕೋಶವನ್ನು ಹೀಗೆ ಕಾಣಬಹುದು. ಉದಾ.

ಅಲಂಕಾರ ಶಾಸ್ತ್ರ

ಕಾವ್ಯ ಮೀಮಾಂಸೆ

ಅಲಂಕಾರ

ರೀತಿ

ಗುಣ

ರಸ

ಧ್ವನಿ

ವಕ್ರೋಕ್ತಿ

ಔಚಿತ್ಯ

ಇತ್ಯಾದಿ, ಹೊಸಗನ್ನಡ ಕಾಲಕ್ಕೆ ಪಾಶ್ಚಿಮಾತ್ಯರ ಪ್ರಭಾವ ಮೀಮಾಂಸೆಯಲ್ಲೂ ಕಂಡುಬಂದು, ಅವರ ಪರಿಕಲ್ಪನೆಗಳು ಕನ್ನಡಕ್ಕೆ ಎರವಲಾಗಿ ಬಂದವು. ಈ ಪರಿಕಲ್ಪನೆಯನ್ನು ಕನ್ನಡಕ್ಕೆ ಒಗ್ಗಿಸಿಕೊಳ್ಳುವಾಗ ಅವುಗಳಿಗೆ ಹೊಸ ಪದಗಳನ್ನು ಹುಟ್ಟಿಹಾಕಲಾಯಿತು. ಉದಾ.

ಅನುಕರಣ < ಇಮಿಟೇಶನ್

ಶೋಧನೆ < ಕೆಥಾರ್ಸಿಸ್

ಭವ್ಯತೆ < ಸಬ್‌ಲೈಮ್

ಕಲ್ಪನೆ < ಇಮ್ಯಾಜಿನೇಷನ್

ಲಘು ಕಲ್ಪನೆ < ಫ್ಯಾನ್ಸಿ

ಅಂತದೃಷ್ಟಿ < ಇಂಟಿವೇಶನ್

ಕಾವ್ಯ ಪ್ರತಿಮೆ < ಪೊಯಟಿಕ್ ಇಮೇಜ್

ವಸ್ತು ಪ್ರತಿರೂಪ < ಆಬ್ಜೆಕ್ಟಿವ್ ಕೊರಲೇಟಿವ್

ಅಭಿವ್ಯಕ್ತಿ < ಎಕ್ಸಪ್ರೇಶನ್

ವ್ಯಕ್ತಿತ್ವ ನಿರಸನ < ಡಿಪರ್ಸನಲೈಜೆಸನ್

ಮಾನಸಿಕ ದೂರ ಸೈಕಾಲಾಜಿಕಲ್ ಡಿಸ್ಟನ್ಸ್

ಪರಂಪರೆ ಮತ್ತು ವೈಯಕ್ತಿಕ ಪ್ರತಿಭೆ < ಟ್ರೇಡಿಶನ್ ಲ್ಯಾಂಡ್ ಇಂಡಿವಿಜಲ್ ಟ್ಯಾಲೆಂಟ್

### ೪.೩.೩ ಛಂದೋ ರೂಪಗಳು

ಕನ್ನಡ ಸಾಹಿತ್ಯ ರಚನೆಯಲ್ಲಾದ ಬದಲಾವಣೆಗಳು ಕಾಲದಿಂದ ಕಾಲಕ್ಕೆ ಛಂದೋ ರೂಪಗಳ ಬದಲಾವಣೆಗೆ ಕಾರಣವಾಗಿವೆ. ಇದು ಎಲ್ಲಾ ಕಾಲಕ್ಕೂ ನಡೆದು ಕೊಂಡು ಬಂದಿದೆ. ಉದಾ.

ಏಳೆ

ತ್ರಿಪದಿ

ಮದನವತಿ

ಅಕ್ಕರ

ಚೌಪದಿ

ಛಂದೋವಸಂತ

ಪಿರಿಯಕ್ಕರ

ಅಕ್ಕರಿಕೆ

ಷಟ್ಪದಿ

ವೃತ್ತ

ರಗಳೆ

ಕಂದ

ಇವುಗಳಲ್ಲಿ ಕನ್ನಡದ ದೇಶಿ ಮಟ್ಟುಗಳು ಕೆಲವಾದರೆ, ಹೆಚ್ಚಿನವು ಸಂಸ್ಕೃತ ಅಥವಾ ಪ್ರಾಕೃತ ಮೂಲಕ ಕನ್ನಡಕ್ಕೆ ಸ್ವೀಕರಿಸಿಕೊಂಡವುಗಳಾಗಿವೆ. ಇವುಗಳು ಹಳಗನ್ನಡ ಮತ್ತು ನಡುಗನ್ನಡ ಸಾಹಿತ್ಯ ರಚನೆಗೆ ಇದ್ದ ಛಂದೋ ರೂಪಗಳನ್ನು ಗುರುತಿಸುವ ಪದಗಳಾಗಿವೆ. ನಡುಗನ್ನಡ ಕಾಲದ ಉರ್ದು ಸಾಹಿತ್ಯ ಛಂಧೋ ರೂಪಗಳಲ್ಲಿ ಯಾವುದೇ ಬದಲಾವಣೆ ಕಂಡು ಬಂದಿಲ್ಲ. ಶಾಯರಿ, ಅಥವಾ ಗಜ಼ಲಗಳಂತಹ ಸಾಹಿತ್ಯ ಪ್ರಕಾರಗಳು ಕನ್ನಡದಲ್ಲಿ ಕಂಡು ಬಂದರೂ ಮೂಲದ ಚೌಕಟ್ಟನ್ನು ಕನ್ನಡದಲ್ಲಿ ಉಳಿಸಿಕೊಂಡಿಲ್ಲ ಮತ್ತು ಅದು ಕನ್ನಡ ಸಾಹಿತ್ಯ ರಚನೆಯಲ್ಲಿ ಅಂತಹ ಪ್ರಭಾವ ಬೀರಿಲ್ಲ ಎನ್ನಬಹುದೇನೋ.

ಕನ್ನಡ ಛಂಧೋ ಪ್ರಕಾರವು ಹೊಸಗನ್ನಡ ಕಾಲಕ್ಕೆ ದೇಶಿಯ ಪ್ರಕಾರದಿಂದ ವಿದೇಶಿ ಛಂದಸ್ಸಿನೆಡೆಗೆ ತಿರುಗಿರುವುದನ್ನು ಕಾಣಬಹುದು. ಸಾಹಿತ್ಯ ರಚನೆ ಎಲ್ಲರಿಗೂ ಓದುವಂತಿರಬೇಕು ಎನ್ನುವ ಆಶಯದಿಂದ ನಮ್ಮ ದೇಶಿಯ(ಸಂಸ್ಕೃತ ಪ್ರಭಾವಿತ) ಛಂದಸ್ಸಿನ ನಿಯಮಗಳ ಕಾಠಿಣ್ಯವನ್ನು ಮುರಿದು ಪಾಶ್ಚಿಮಾತ್ಯರ ಪರಿಕಲ್ಪನೆಯನ್ನು ತಮ್ಮದಾಗಿಸಿಕೊಂಡರು. ಹೀಗಾಗಿ ಕನ್ನಡದಲ್ಲಿ ಹೊಸ ಮಾದರಿಯ ಛಂದಸ್ಸು ರೂಪುಗೊಂಡಿತು. ಈ ರೂಪಗಳನ್ನು ಗುರುತಿಸಲು ಹೊಸಪದಗಳು ಸೃಷ್ಟಿಯಾದವು. ಉದಾ.

ಸರಳರಗಳೆ < ಬ್ಲ್ಯಾಂಕ್ ವರ್ಸ್

ಸುನೀತ < ಸೊನೆಟ್

ಪ್ರಗಾತ < ಓಡ್

ಸ್ವಚ್ಛಂದ ಛಂದಸ್ಸು < ಫ್ರೀ ವರ್ಸ್

ಮುಕ್ತ ಛಂದಸ್ಸು,

ಇತ್ಯಾದಿ, ಈ ಹೊಸ ಮಾದರಿಯ ಛಂದಸ್ಸು ಲಯ, ತಾಳ, ಮಾತ್ರೆ, ಅಕ್ಷರಗಳ ನಿರ್ಬಂಧವನ್ನು ಹೋಗಲಾಡಿಸಿ ಅಷ್ಟು ಕಾಠಿಣ್ಯವಲ್ಲದ ನಿಯಮಗಳಿರುವುದರಿಂದ ಹೆಚ್ಚು ಬೇಗ ಮುನ್ನೆಲೆಗೆ ಬಂದಿತು. ಇದು ಹೆಚ್ಚಿನ ಜನರು ಸಾಹಿತ್ಯ ರಚನೆಗೆ ತೊಡಗಲು ಕಾರಣವಾಯಿತು.

### ೪.೩.೪ ವಿಮರ್ಶೆ

ಈ ಪರಿಕಲ್ಪನೆಯು ಭಾರತೀಯರಿಗೆ ತೀರಾ ಹೊಸದು. ಟೀಕು ಎಂಬ ಒಂದು ಪ್ರಕಾರ ಕನ್ನಡದಲ್ಲಿ ಸಂಸ್ಕೃತದ ಪ್ರಭಾವದಿಂದ ಬಂದಿತ್ತು. ಆದರೆ ಅದು ಬೇರೆ ಮಾದರಿಯ ಪರಿಕಲ್ಪನೆಯಾಗಿತ್ತು. ವಿಮರ್ಶೆ ಒಂದು ಗ್ರಂಥವನ್ನು ವಿಶ್ಲೇಷಿಸುವುದರೊಂದಿಗೆ, ಲೇಖಕ, ಆ ಕಾಲದ ಸಾಮಾಜಿಕ ಸ್ಥಿತಿಗತಿ, ಸಾಮಾಜಿಕರನ್ನು ವಿಶ್ಲೇಷಣೆಗೊಳಪಡಿಸುತ್ತದೆ. ಈ ಪರಿಕಲ್ಪನೆಯನ್ನು ಕನ್ನಡ ಸಾರಸ್ವತಲೋಕಕ್ಕೆ ಹೊಸದಾಗಿ ಸ್ವೀಕರಿಸಿರುವುದರಿಂದ ಮೂಲದ ಪದಕೋಶ ಕನ್ನಡಕ್ಕೆ ಬಂದಿದೆ. ಈ ಪರಿಕಲ್ಪನೆಯು ಅನೇಕ ಸೈದ್ಧಾಂತಿಕ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತದೆ. ಈ ಪರಿಕಲ್ಪನೆಯಲ್ಲಿದ್ದ ಸಿದ್ಧಾಂತ(ವಾದ)ಗಳು ಕನ್ನಡಕ್ಕೆ ಎರವಲಾಗಿ ಬಂದು ಕನ್ನಡೀಕರಕ್ಕೆ ಒಳಗಾಗಿವೆ. ಉದಾ.

ಅಭಿಜಾತ ವಾದ < ಕ್ಲಾಸಿಸಿಸಂ

ನವ ಅಭಿಜಾತ ವಾದ < ನಿವೊ ಕ್ಲಾಸಿಸಿಸಂ

ರಮ್ಯವಾದ < ರೊಮ್ಯಾಂಟಿಸಿಸಂ

ಅಭಿವ್ಯಕ್ತಿವಾದ < ಎಕ್ಸಪ್ರೇಸನಿಸಂ

ಅಸ್ತಿತ್ವವಾದ < ಕ್ಸಿಸ್ಟೆನ್ಸಿಲಿಸಂ

ವಾಸ್ತವತಾವಾದ < ರಿಯಲಿಸಂ,

ಇತ್ಯಾದಿ ಇವು ಸಿದ್ಧಾಂತ(ವಾದ)ಗಳಿಗೆ ಸಂಬಂಧಿಸಿದ ಪದಗಳಾದರೆ, ವಿಮರ್ಶೆಯ ಮಾದರಿಗೆ ಸಂಬಂಧಿಸಿದಂತೆ ಅನೇಕ ಹೊಸ ಪದಗಳು ಈ ಮೇಲಿನ ಮಾದರಿಯಲ್ಲಿಯೇ ರಚನೆಗೊಂಡಿವೆ.

ಉದಾ. ವಿಮರ್ಶೆಯ ವಿಧಾನಗಳು

ರೂಪನಿಷ್ಠ ವಿಮರ್ಶೆ < ಫೊರ್ಮಲ್ ಕ್ರಿಟಿಸಿಸಂ

ಚಾರಿತ್ರಿಕ/ಐತಿಹಾಸಿಕ ವಿಮರ್ಶೆ < ಹಿಸ್ಟೋರಿಕಲ್ ಕ್ರಿಟಿಸಿಸಂ

ಮನೋವೈಜ್ಞಾನಿಕ ವಿಮರ್ಶೆ < ಸೈಕಲೊಜಿಕಲ್ ಕ್ರಿಟಿಸಿಸಂ

ಪ್ರಾಯೋಗಿಕ ವಿಮರ್ಶೆ < ಪ್ರ್ಯಾಕ್ಟಿಕಲ್ ಕ್ರಿಟಿಸಿಸಂ

ಆನ್ವಯಿಕ ವಿಮರ್ಶೆ < ಅಪ್ಲೈಡ್ ಕ್ರಿಟಿಸಿಸಂ

ವಿವರಣಾತ್ಮಕ ವಿಮರ್ಶೆ < ಡಿಸ್ಕ್ರಿಪ್ಟಿವ್ ಕ್ರಿಟಿಸಿಸಂ

ವಿಶ್ಲೇಷಣಾತ್ಮಕ ವಿಮರ್ಶೆ (Lyric)

ವಸ್ತುನಿಷ್ಠ ವಿಮರ್ಶೆ < ಇಂಡಕ್ಟಿವ್ ಕ್ರಿಟಿಸಿಸಂ

ಮಾರ್ಕ್ಸ್‌ವಾದಿ ವಿಮರ್ಶೆ < ಮಾರ್ಕ್ಸಿಸ್ಟ್ ಕ್ರಿಟಿಸಿಸಂ

ಸ್ತ್ರೀನಿಷ್ಠ ವಿಮರ್ಶೆ < ಫೇಮಿನಿಸ್ಟ್ ಕ್ರಿಟಿಸಿಸಂ

ಇತ್ಯಾದಿ ಪದಗಳು ಸಾಹಿತ್ಯ ವಲಯದಲ್ಲಿ ಕನ್ನಡಕ್ಕೆ ಸ್ವೀಕರಣವಾಗಿ ಸೇರಿಕೊಂಡವು. ಮೂಲದ ಆಶಯಗಳನ್ನು ಇಟ್ಟುಕೊಂಡು ಕನ್ನಡದಲ್ಲಿ ಹೊಸ ಮಾದರಿಯ ದೃಷ್ಟಿಕೋನಗಳನ್ನು ಬೆಳಸಿಕೊಳ್ಳುವಲ್ಲಿ ಸಹಾಯಕವಾಗಿವೆ.

**೪.೩.೫ ಅನುವಾದ**

ಈ ಪರೀಲ್ಪನೆಯು ಕನ್ನಡಕ್ಕೆ ಹೊಸ ಪರಿಕಲ್ಪನೆ ಎನ್ನಬಹುದು. ಈ ಹಿಂದೆ ಸಂಸ್ಕೃತ ಅಥವಾ ಪ್ರಾಕೃತ ಭಾಷೆಗಳಲ್ಲಿ ರಚನೆಗೊಂಡಿದ್ದ ಕಾವ್ಯಗಳು ಕನ್ನಡದಲ್ಲಿ ಕಂಡು ಬಂದಿದ್ದರೂ ಅವುಗಳನ್ನ ಆ ಕಾವ್ಯಗಳ ಪ್ರಭಾವದಿಂದ ಬಂದವುಗಳೆಂದು ಗುರುತಿಸಲಾಗುತ್ತಿತ್ತು ಮತ್ತು ಬೇರೆ ಭಾಷೆಗಳ ಕಾವ್ಯಗಳನ್ನು ಕನ್ನಡದಲ್ಲಿ ಬರೆಯುವಾಗ ಸುಕರ್ಣಾಟದೊಳ್ ಪೇಳ್ವೆ ಎಂದು ಕವಿಗಳು ಹೇಳಿಕೊಂಡಿರುವುದನ್ನು ಕಾಣುತ್ತೇವೆ. ಅನುವಾದ ಎಂಬ ಪದವನ್ನು ಕನ್ನಡದಲ್ಲಿ ಇಂಗ್ಲಿಶನ Translation ಎಂಬ ಪದದ ಸಂವಾದಿಯಾಗಿ ಬಳಸಲಾಗುತ್ತಿದೆ. ಇವುಗಳಲ್ಲದೆ ಸಂಸ್ಕೃತದ ಭಾಷಾಂತರ, ಉರ್ದುವಿನ ತರ್ಜುಮೆ ಎಂಬ ಪದಗಳು ಕನ್ನಡದಲ್ಲಿ Translation ಎಂಬ ಪದದ ಸಂವಾದಿಯಾಗಿ ಬಳಕೆಯಾಗುತ್ತಿವೆ. ಕನ್ನಡದಲ್ಲಿ ಕನ್ನಡಿಸು ಎಂಬ ಪದವನ್ನು ಟಂಕಿಸಲಾಗಿದೆ. ಇಂದು ಅನುವಾದವು ಕನ್ನಡದಲ್ಲಿ ವ್ಯಾಪಕತೆ ಪಡೆದುಕೊಂಡಿದೆ. ಅನುವಾದದಲ್ಲೂ ಅನೇಕ ಪ್ರಕಾರಗಳಿದ್ದು ಅವುಗಳನ್ನು ಗುರುತಿಸುವ ಪದಗಳು ಕನ್ನಡದಲ್ಲಿ ಬಳಕೆಗೆ ಬಂದಿವೆ. ಉದಾ.

ಶಬ್ದಾನುವಾದ

ವಿಸ್ತಾರಾನುವಾದ

ನಿಕಟಾನುವಾದ

ಭಾವಾನುವಾದ

ಸಂಗ್ರಹಾನುವಾದ

ರೂಪಾಂತರ

ಸರಳಾನುವಾದ

ಅರ್ಥಾನುವಾದ,

ಇತ್ಯಾದಿ ಇದೇ ಮಾದರಿಯನ್ನು ಅನುಸರಿಸಿ ಇಂಗ್ಲಿಶ್ ಪದಗಳನ್ನು ಕನ್ನಡ ಲಿಪಿಯಲ್ಲಿ ಬರೆಯುವುದನ್ನು ಲಿಪ್ಯಂತರ ಎಂಬ ಪದದ ಮೂಲಕ ಗುರುತಿಸಲಾಗುತ್ತದೆ.

**೪.೩.೬ ಹೊಸಗನ್ನಡ ಸಾಹಿತ್ಯ ಘಟ್ಟಗಳು**

ಪ್ರತಿಯೊಂದು ಕಾಲಘಟ್ಟವು ತನ್ನದೇ ಆದ ವಿಶೇಷ ಅಭಿವ್ಯಕ್ತಿ ಹೊಂದಿರುತ್ತದೆ. ಅದು ಆ ಕಾಲದ ಪ್ರಭಾವ ಪ್ರೇರಣೆಗೆ ಒಳಗಾಗಿರುತ್ತದೆ ಮತ್ತು ಆ ಕಾಲದ ಆವಶ್ಯಕತೆಗಳು ಸಾಹಿತ್ಯಿಕ ಅಭಿವ್ಯಕ್ತಿಯನ್ನು ನಿರ್ಧರಿಸುತ್ತದೆ. ಹತ್ತೊಂಬತ್ತನೆಯ ಶತಮಾನದ ಪಾಶ್ಚಿಮಾತ್ಯ ಪ್ರಭಾವಗಳು ಇತರ ವಲಯದಲ್ಲಾದಂತೆ ಸಾಹಿತ್ಯಿಕ ವಲಯದಲ್ಲೂ ಕಂಡು ಬಂದಿದ್ದರ ಪರಿಣಾಮವಾಗಿ ಪ್ರಭಾವದ ಹಿನ್ನೆಲೆಯಲ್ಲಿ ಸಾಹಿತ್ಯ ರಚನೆಯ ಧೋರಣೆಯಲ್ಲಿ ಬದಲಾವಣೆಗಳು ಕಂಡುಬಂದವು. ಈ ಬದಲಾದ ಧೋರಣೆಗಳು ಕನ್ನಡ ಸಾಹಿತ್ಯದಲ್ಲಿ ಹೊಸ ವಿಭಾಗ ಕ್ರಮಕ್ಕೆ ಕಾರಣವಾಯಿತು. ಒಂದೊಂದು ಧೋರಣೆಯನ್ನು ಅನುಸರಿಸಿದ ಕಾಲವನ್ನು ಒಂದೊಂದು ಕಾಲಘಟ್ಟವಾಗಿ ಪರಿಗಣಿಸಲಾಯಿತು ಮತ್ತು ಈ ಕಾಲಘಟ್ಟಗಳನ್ನು ಹೆಸರಿಸಲು ಹೊಸ ಪದಗಳನ್ನು ಟಂಕಿಸಲಾಯಿತು. ಉದಾ.

ನವೋದಯ ಪೂರ್ವ < ಪ್ರೀ ರೊಮ್ಯಾಂಟಿಕ್

ನವೋದಯ < ರೊಮ್ಯಾಂಟಿಕ್

ಪ್ರಗತಿಶೀಲ < ಮಾರ್ಕಯಿಸಂ

ನವ್ಯ < ಮಾಡ್ರನಿಸಂ

ದಲಿತ/ಬಂಡಾಯ < ಬ್ಲಾಕ್ ಪ್ಯಾಂಥರ್

ಸ್ತ್ರೀವಾದಿ < ಫೆಮಿನಿಸಂ

ಇತ್ಯಾದಿ, ಈ ಮೇಲಿನ ಸಾಹಿತ್ಯಕ್ಕೆ ಸಂಬಧಿಸಿದಂತಹ ವಿಷಯಗಳ ರಚನೆಗೆ ತೊಡಗುವವರನ್ನು ಗುರುತಿಸಲು ಹಳಗನ್ನಡ ಕಾಲದಲ್ಲಿ ಕವಿ–ಕವಯತ್ರಿ ಎಂಬ ಪದಗಳು ಬಳಕೆಯಲ್ಲಿದ್ದವು ಸಾಹಿತ್ಯ ಪ್ರಕಾರಗಳಲ್ಲಿ ಆದ ಬೆಳವಣಿಗೆಯಿಂದ ಈ ಪ್ರಕಾರಗಳಲ್ಲಿ ಬರವಣಿಗೆಗೆ ತೊಡಗಿದವರನ್ನು ಗುರುತಿಸುವ ಅನೇಕ ಪದಗಳು ಬಳಕೆಗೆ ಬಂದವು. ಉದಾ.

ಸಾಹಿತಿ – ಮಹಿಳಾ ಸಾಹಿತಿ

ಕಾದಂಬರಿಕಾರ – ಕಾದಂಬರಿಕಾರ್ತಿ

ನಾಟಕಕಾರ – ನಾಟಕಕಾರ್ತಿ

ಲೇಖಕ – ಲೇಖಕಿ

ವಿಮರ್ಶಕ – ವಿಮರ್ಶಕಿ

ಸಂಶೋಧಕ – ಸಂಶೋಧಕಿ

ಸಾಂಸ್ಕೃತಿಕ ಚಿಂತಕ/ಕಿ

ಇತ್ಯಾದಿ ಪದಗಳು ಬೆಳವಣಿಗೆ ಹೊಂದಿವೆ ಮತ್ತು ಗಂಡು ಹೆಣ್ಣು ಪ್ರತ್ಯೇಕಿಸಿ ಸಂಬೋಧಿಸಲು ಬೇರೆ ಬೇರೆ ಪದಗಳು ರಚನೆಗೊಂಡಿವೆ.

**೪.೩.೭ ಬರವಣಿಗೆ ಚಿಹ್ನೆಗಳು**

ಇಂಗ್ಲಿಶ್ ಬರವಣಿಗೆ ಮಾದರಿಯು ಭಾರತ ಪ್ರವೇಶಿಸಿದ ಮೇಲೆ ಬರವಣಿಗೆ ಕ್ರಮದಲ್ಲಿ ಗಣನೀಯ ಬದಲಾವಣೆಗಳು ಕಂಡು ಬಂದವು. ಕನ್ನಡದಲ್ಲಿ ಈ ಹಿಂದೆ ಸಂಸ್ಕೃತದಿಂದ ಬಂದಿದ್ದ ಪದಗಳನ್ನು ಕೂಡಿಸಿ ಬರೆಯುವ ಮಾದರಿಯು ಬಿಡಿ ಬಿಡಿಯಾಗಿ ಬರೆಯುವ ಮಾದರಿಗಳು ಇದ್ದವು. ಇಂಗ್ಲಿನಲ್ಲಿ, ಬರೆದ ಬರವಣಿಗೆಯನ್ನು ಸುಲಲಿತವಾಗಿ ಓದುವ ಮತ್ತು ಓದುವಾಗ ಅನುಸರಿಸಬೇಕಾದ ಮಾದರಿಗಳನ್ನು ಸೂಚಿಸಲು ಕೆಲವೊಂದು ಲೇಖನ ಚಿಹ್ನೆಗಳನ್ನು ರೂಪಿಸಿಕೊಳ್ಳಲಾಗಿದೆ. ಈ ಚಿಹ್ನೆಗಳು ಓದುಗರಿಗೆ ಬರಹವನ್ನು ಓದಲು ಅನುಕೂಲ ಮಾಡಿಕೊಡುತ್ತವೆ. ಇಂಗ್ಲಿಶ್ ಬರವಣಿಗೆಯ ಪ್ರಭಾವದಿಂದ ಈ ಚಿಹ್ನೆಗಳನ್ನು ಕನ್ನಡದಲ್ಲೂ ಬಳಸಲಾಗುತ್ತದೆ. ಇದಕ್ಕೆ ಅಗತ್ಯವಾದ ಪದಗಳನ್ನು ರೂಪಿಸಿಕೊಂಡಿರುವುದನ್ನು ಕಾಣಬಹುದು. ಉದಾ.

ಅಲ್ಪವಿರಾಮ(,)

ಅರ್ಧವಿರಾಮ(;)

ವಿವರಣ ವಿರಾಮ(:)

ಪೂರ್ಣವಿರಾಮ(.)

ಆಶ್ಚರ್ಯ ಸೂಚಕ(!)

ಪ್ರಶ್ನಾರ್ಥಕ/ಅನುಮಾನ ಸೂಚಕ(?)

ಕೂಡುಗೆರೆ/ ಹೈಫನ್(–)

ಅಲ್ಪಾವರಣ()

ಪುಷ್ಪಾವರಣ{}

ದೀರ್ಘಾವರಣ[]

ಉದ್ಧರಣ "..."

ಕಂಡಿಕೆ < ಪ್ಯಾರಾ

ಇತ್ಯಾದಿ, ಈ ಮೇಲೆ ಸಾಹಿತ್ಯ ಕ್ಷೇತ್ರದಲ್ಲಿಯ ಕನ್ನಡ ಪದಕೋಶದ ಬೆಳವಣಿಗೆಯನ್ನು ಗಮನಿಸಲಾಗಿದೆ. ಈ ಕ್ಷೇತ್ರದಲ್ಲಿ ಸಂಸ್ಕೃತ ಪದಕೋಶದ ಪ್ರಭಾವ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ. ಕನ್ನಡ ಅಥವಾ ಸಂಸ್ಕೃತದಲ್ಲಿ ಈ ವಸ್ತು ವಿಷಯಕ್ಕೆ ಪದಗಳಿರದ ಸಂದರ್ಭದಲ್ಲಿ ಉರ್ದು, ಪಾರಸಿ, ಅರಬ್ಬಿ, ಇಂಗ್ಲಿಶ್ ಭಾಷೆಗಳ ಪ್ರಭಾವವು ಕಂಡು ಬಂದಿದೆ. ಸಂಸ್ಕೃತ ಪದಗಳ ಹೊರತಾದ ಭಾಷೆಯ ಪದಗಳನ್ನು ಹೆಚ್ಚಾಗಿ ಸ್ವೀಕರಿಸಿಕೊಂಡಿರುವ ಪರಿಕಲ್ಪನೆಗಳನ್ನು ಗುರುತಿಸುವಲ್ಲಿ ಕಂಡುಬಂದಿದೆ.

ಉಳಿದಂತೆ ಕನ್ನಡ ಅಥವಾ ಸಂಸ್ಕೃತ ಸಾಮಾನ್ಯವಾಗಿದೆ. ಕನ್ನಡಕ್ಕೆ ಹೆಚ್ಚು ಸಂಸ್ಕೃತ ಪದಗಳು ಸ್ವೀಕರಣವಾಗಲು ಸಾಹಿತ್ಯಿಕ ವಲಯ ಆ ಭಾಷೆಯನ್ನು ಅವಲಂಬಿಸಿದ್ದೇ ಕಾರಣವಾಗಿದೆ.

### ೪.೫ ಧರ್ಮ ಮತ್ತು ಆಚರಣೆ

ಕರ್ನಾಟಕ ಅಥವಾ ಭಾರತೀಯ ಇತಿಹಾಸದಲ್ಲಿ ಧರ್ಮ ಮತ್ತು ಧಾರ್ಮಿಕತೆಗೆ ತುಂಬಾ ಸುದೀರ್ಘ ಇತಿಹಾಸವಿದೆ. ಭಾರತವು ಜಗತ್ತಿನಲ್ಲಿಯೇ ಹೆಚ್ಚು ವೈವಿಧ್ಯಮಯ ಧಾರ್ಮಿಕತೆ ಹೊಂದಿರುವ ದೇಶವಾಗಿರಬೇಕು. ಇಲ್ಲಿ ಅನೇಕ ಆಚರಣೆಗಳು ಶತ ಶತಮಾನಗಳಿಂದ ಬೆಳೆದು ಬಂದಿವೆ. ಸಣ್ಣಮಟ್ಟ ಆಚರಣೆಯ ಧರ್ಮಗಳಿಂದ ದೊಡ್ಡಮಟ್ಟದ ಜನಸಂಖ್ಯೆಯ ಧರ್ಮಗಳು ಭಾರತದಲ್ಲಿವೆ. ಇವುಗಳಲ್ಲದೆ ಅನೇಕ ಪರಂಪರೆಗಳು ಭಾರತದಲ್ಲಿ ಆಚರಣೆಯಲ್ಲಿವೆ. ಹೀಗಾಗಿಯೇ ಭಾರತೀಯ ಧಾರ್ಮಿಕ ಪರಂಪರೆ ತುಂಬಾ ಮಹತ್ವದ ಸ್ಥಾನದಲ್ಲಿದೆ.

ಭಾರತದಲ್ಲಿ ಯಾರು ಮೂಲ ನಿವಾಸಿಗಳು ಅವರ ಧರ್ಮ ಯಾವುದು ಎಂದು ಹೇಳುವುದು ತುಂಬಾ ಸಮಸ್ಯಾತ್ಮಕವಾದದ್ದಾಗಿದೆ. ಕರ್ನಾಟಕವನ್ನೇ ಪರಿಗಣಿಸಿ ಹೇಳುವುದಾದರೂ ಕಷ್ಟವೇ. ಮೂಲತಃ ಕರ್ನಾಟಕವು ದ್ರಾವಿಡ ಪರಂಪರೆಗೆ ಸೇರಿದ್ದಾಗಿದೆ. ದ್ರಾವಿಡ ಪರಂಪರೆಯು ಶೈವ ಪರಂಪರೆಗೆ ಸೇರಿದ್ದಾಗಿದೆ.

ಕರ್ನಾಟಕಕ್ಕೆ ಇತರೆ ಧರ್ಮ ಅಥವಾ ಪರಂಪರೆಗಳ ಪ್ರವೇಶವು ಕರ್ನಾಟಕ ಧಾರ್ಮಿಕ ಕ್ಷೇತ್ರದಲ್ಲಿ ಮಹತ್ವದ ಬದಲಾವಣೆಗಳಿಗೆ ಕಾರಣವಾಗಿದೆ. ಕರ್ನಾಟಕಕ್ಕೆ ಯಾವ ಧರ್ಮ ಮೊದಲು ವಲಸೆ ಬಂದಿದೆ ಎನ್ನುವುದು ಸ್ಪಷ್ಟವಾಗಿ ಹೇಳಲಾಗದು. ಹಿಂದೂ(ವೈಷ್ಣವ ಪರಂಪರೆ) ಅಥವಾ ಬೌದ್ಧ ಧರ್ಮಗಳಲ್ಲಿ ಯಾವುದಾದರೊಂದು ಮೊದಲು ಬಂದಿರಬೇಕು. ಅಥವಾ ಸಮಕಾಲದಲ್ಲಿ ಕರ್ನಾಟಕಕ್ಕೆ ಪ್ರವೇಶ ಪಡೆದಿರಬೇಕು. ಈ ಧರ್ಮಗಳು ಕನ್ನಡವನ್ನು ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳ ಪ್ರಭಾವಕ್ಕೆ ಒಳಪಡಿಸಿದರೆ ಆನಂತರ ಬಂದ ಜೈನ ಧರ್ಮವು ಇತರೇ ಪ್ರಾಕೃತ ಭಾಷೆಗಳ, ಇಸ್ಲಾಂ ಧರ್ಮ ಉರ್ದು, ಕ್ರೈಸ್ತ ಧರ್ಮ ಇಂಗ್ಲಿಶ್ ಭಾಷೆಗಳ ಪ್ರಭಾವಕ್ಕೆ ಕಾರಣವಾಗಿವೆ.

ಈ ಧರ್ಮಗಳ ಪ್ರವೇಶದಿಂದ ಆಚರಣೆ, ಆಚಾರ, ವಿಚಾರ, ನಡವಳಿಕೆ ಮತ್ತು ನಂಬಿಕೆಗಳಲ್ಲಿ ಅನೇಕ ಬದಲಾವಣೆಗಳು ಉಂಟಾದವು. ಭಾರತದಲ್ಲಿ ಧರ್ಮ ಮತ್ತು ಭಾಷೆಗಳ ನಡುವೆ ಬಿಡಿಸದ ಸಂಬಂಧವಿದೆ. ಒಂದು ಭಾಷೆಯೆಂದರೆ ಒಂದು ಧರ್ಮ ಎನ್ನುವ ಮಟ್ಟಿಗೆ ಈ ಸಂಬಂಧ ಗಟ್ಟಿಯಾಗಿದೆ. ಒಂದು ಧರ್ಮದ ಪ್ರಭಾವಕ್ಕೆ ಒಳಗಾಗುವುದು ಎಂದರೆ ಆ ಧರ್ಮ ಪ್ರತಿನಿಧಿಸುತ್ತಿರುವ ಭಾಷೆಯ ಪ್ರಭಾವಕ್ಕೆ ಒಳಗಾಗುವುದು ಎಂದರ್ಥ. ಹೀಗಾಗಿ ಕರ್ನಾಟಕಕ್ಕೆ ಪ್ರವೇಶ ಪಡೆದ ಧರ್ಮಗಳು ಕನ್ನಡದ ಮೇಲೆ ದಟ್ಟ ಪ್ರಭಾವ ಬೀರಿವೆ. ಈ ಧರ್ಮಗಳಿಂದ ಕನ್ನಡ ಜನ ಜೀವನದಲ್ಲಿ ಆದ ಬದಲಾವಣೆಗಳು ಅವರ ಭಾಷೆಯ ಮೇಲೂ ಪರಿಣಾಮ ಬೀರಿವೆ. ಈ ಪ್ರಭಾವದ ಕಾರಣದಿಂದ ಕನ್ನಡ ಭಾಷೆಯಲ್ಲಿ ಅನೇಕ ಬದಲಾವಣೆಗಳು ತಲೆದೂರಿದವು. ಈ ಬದಲಾವಣೆಗಳು ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾಗಿವೆ.

ಪ್ರಸ್ತುತ ಕರ್ನಾಟಕದಲ್ಲಿ ಬೌದ್ಧ, ಜೈನ, ಹಿಂದೂ, ಇಸ್ಲಾಂ, ಕ್ರೈಸ್ತ ಧರ್ಮಗಳು ಮತ್ತು ವೈಷ್ಣವ, ಶೈವ, ವೀರಶೈವ, ಲಿಂಗಾಯತ, ಸೂಫಿ, ಸಿದ್ಧ, ಕಾಪಾಲಿಕದಂಥ ಅನೇಕ ಪರಂಪರೆಗಳು ಚಾಲ್ತಿಯಲ್ಲಿವೆ. ಆಯಾ ಧರ್ಮ ಮತ್ತು ಪರಂಪರೆಗಳು ತಮ್ಮ ತಮ್ಮ ಧಾರ್ಮಿಕ ಪರಿಭಾಷೆಗಳನ್ನು ಬೆಳಸಿಕೊಂಡಿವೆ. ಕರ್ನಾಟಕಕ್ಕೆ ವಲಸೆ ಬಂದ ಧರ್ಮಗಳು ಕನ್ನಡ ಪದಕೋಶಕ್ಕೆ ತಮ್ಮ ಪರಿಭಾಷೆಗಳು ಸೇರಲು ಕಾರಣವಾಗಿ ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣವಾಗಿವೆ. ಈ ಕೆಳಗೆ ಧಾರ್ಮಿಕ ಕ್ಷೇತ್ರದ ಕನ್ನಡ ಪದಕೋಶದಲ್ಲಿ ಆದ ಬೆಳವಣಿಗೆಯನ್ನು ಗಮನಿಸಲಾಗಿದೆ.

ಕರ್ನಾಟಕದಲ್ಲಿ ಧರ್ಮ ಅಥವಾ ಧಾರ್ಮಿಕ ಆಚರಣೆಗಳಿದ್ದವು ಎನ್ನುವುದಾದರೆ ಅದು ಶೈವಕ್ಕೆ ಸಂಬಂಧಿಸಿದ ಬಿಡಿಬಿಡಿಯಾದ ಆಚರಣೆಯ ಪಂಥಗಳು ಇದ್ದಿರಬೇಕು. ಆ ಕಾಲಕ್ಕೆ ಧರ್ಮ ಎನ್ನುವ ಆಲೋಚನೆಗಳು ಕನ್ನಡದಲ್ಲಿ ಹೇಗಿದ್ದವು ಎನ್ನುವುದು ಹೇಳುವುದಕ್ಕೆ ಯಾವುದೇ ಆಧಾರಗಳು ಈ ವರೆಗೂ ಪತ್ತೆಯಾಗಿಲ್ಲ. ಆದರೆ ಧಾರ್ಮಿಕ ಆಚರಣೆಗಳು ಇದ್ದಿರಬಹುದಾದ ಸಾಧ್ಯತೆಗಳಿದ್ದರೂ ಅದನ್ನು ಗುರುತಿಸುವ ಪರಿಭಾಷೆಗಳು ಲಭ್ಯವಿರದುದು ವಿಪರ್ಯಾಸವೆ ಸರಿ. ಕ್ರಿ.ಶ.ದ ಆಸು–ಪಾಸಿನಲ್ಲಿ ಕರ್ನಾಟಕಕ್ಕೆ ಈ ಧರ್ಮ ಎನ್ನುವ ಪರಿಭಾಷೆಗಳು ಪ್ರವೇಶ ಪಡೆದಿರಬೇಕು ಆ ಕಾಲಕ್ಕೆ ಕನ್ನಡದಲ್ಲಿ ಬೌದ್ಧ, ಜೈನ, ಹಿಂದೂ ಎಂಬ ಪರಿಭಾಷೆಗಳು ಕಂಡುಬಂದವು. ಮಧ್ಯಕಾಲೀನ ಕರ್ನಾಟಕದಲ್ಲಿ ಮುಖ್ಯವಾಗಿ ಇಸ್ಲಾಂ ಧರ್ಮ ಮತ್ತು ವೀರಶೈವ ಲಿಂಗಾಯತ, ಕಾಳಮುಖ, ಸೂಫಿಯಂತ ಧರ್ಮಗಳು ಚಾಲ್ತಿಗೆ ಬಂದವು. ಬ್ರಿಟಿಶರ ಆಳ್ವಿಕೆಯ ನಂತರ ಕ್ರಿಶ್ಚಿಯನ್ ಧರ್ಮ ಆಚರಣೆಗೆ ಬಂದಿತು. ಇದರೊಂದಿಗೆ ಸಿಖ್, ಇಸಾಯಿಯಂತ ಅನೇಕ ಪದಗಳು ಬಳಕೆಗೆ ಬಂದಿವೆ. ಈ ಧರ್ಮದ ಹೆಸರಿಗೆ ಸಂಬಂಧಿಸಿದ ಪದಗಳೊಂದಿಗೆ ಧಾರ್ಮಿಕ ಆಚರಣೆಗಳು ನಡೆಯುವ ಅಥವಾ ತಮ್ಮ ನಂಬಿಕೆಯನ್ನು ಆರಾಧಿಸುವ ಕಾರಣಕ್ಕೆ ಪೂಜಿಸಿಕೊಂಡ ಬರಲು ಆಲಯಗಳನ್ನು ರೂಪಿಸಿಕೊಳ್ಳಲಾಯಿತು. ಆ ಆಲಯಗಳನ್ನು ಸೂಚಿಸುವ ಪದಗಳು ಕಾಲಕಾಲಕ್ಕೆ ಆದ ಬದಲಾವಣೆಗಳ ಹಿನ್ನೆಲೆಯ ಭಾಷೆಗಳಿಂದ ಕನ್ನಡಕ್ಕೆ ಬಂದು ಸೇರಿದವು. ಉದಾ.

ದೇವಾಲಯ

ಮಠ

ಸ್ತೂಪ

ಬಸದಿ

ಚೈತ್ಯಾಲಯ

ದರ್ಗಾ

ಮಸೀದಿ

ಚರ್ಚ್

ಗುರುದ್ವಾರಾ, ಇತ್ಯಾದಿ.

ಧಾರ್ಮಿಕ ಆಲಯಗಳಲ್ಲಿ ನಡೆಯುವ ಆಚರಣೆಯನ್ನು ನಡೆಸಿ ಕೊಡುವ ವ್ಯಕ್ತಿಗಳ(ಧಾರ್ಮಿಕ ಶ್ರೇಷ್ಠರೆಂದು ನಂಬಿರುವ ವ್ಯಕ್ತಿ) ಹೆಸರು ಸೂಚಿಸುವ ಪರಿಭಾಷೆಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದವು. ಉದಾ.

ಬಿಕ್ಕು

ಬಟ್ಟಾರಕ

ಕಂತಿ

ಖಾಜಿ

ಖಲಿಫ್

ಫಕೀರ್

ಮುಲ್ಲಾ

ದರಬೇಶಿ

ಪೀರ್

ಹಾಜಿ

ಪೋಪ್

ಫಾದರ್

ಬಿಷಪ್

ಪಾದ್ರಿ

ಮಿಶನರಿ,

ಇತ್ಯಾದಿ, ಪರಿಭಾಷೆಗಳು ಚಾರಿತ್ರಿಕವಾಗಿ ಕನ್ನಡಕ್ಕೆ ಸೇರಿಕೊಂಡು ಬಳಕೆಗೆ ಬಂದವು. ಈ ಧರ್ಮಗಳು ಆಗಮನದಿಂದ ಕರ್ನಾಟಕದಲ್ಲಿ ಆಯಾ ಧರ್ಮವನ್ನು ನಂಬುವ ಜನರು ಆಗಮನವಾಗಿ ಅಥವಾ ಕೆಲವರು ಧರ್ಮವನ್ನು ಸ್ವೀಕರಿಸುವ ಮೂಲಕ ಆ ಧರ್ಮದ ಆಚರಣೆಗಳನ್ನು ಸ್ವೀಕರಿಸಿದ್ದರಿಂದ ಆಚರಣೆಗೆ ಸಂಬಂಧಿಸಿದ ಹಬ್ಬಗಳು ಮತ್ತು ಇತರ ಆಚರಣೆಗಳು ಕನ್ನಡದಲ್ಲಿ ಕಂಡು ಬಂದು ಪದಕೋಶದ ಭಾಗವಾಗಿವೆ. ಉದಾ.

ಅಲಾಬಿ

ಈದ ಮಿಲಾದ

ಮೊಹರಂ

ರಮಜಾನ್

ಬಕ್ರಿದ್

ಈಸ್ಟರ್

ಗುಡ್ ಫ್ರೈಡೆ

ಕ್ರಿಸ್‌ಮಸ್

ಇತ್ಯಾದಿ ಈ ಹಬ್ಬಗಳು ಆಯಾ ಧರ್ಮೀಯರು ಮಾತ್ರ ಆಚರಿಸಿದರೂ ಈ ಪದಬಳಕೆ ಸಾಮಾನ್ಯವಾಗಿ ಎಲ್ಲರಲ್ಲೂ ಕಂಡುಬರುತ್ತದೆ. ಈ ಪದಗಳಲ್ಲದೆ ಇಸ್ಲಾಂ ಮತ್ತು ಕ್ರಿಶ್ಚಿಯನ್ ಧರ್ಮಗಳು ಕರ್ನಾಟಕದಲ್ಲಿ ಪ್ರವೇಶವಾದ ಮೇಲೆ ಆ ಧರ್ಮಕ್ಕೆ ಸಂಬಂಧಿಸಿದ ಅನೇಕ ಪದಗಳು ಕನ್ನಡ ಸೇರಿಕೊಂಡಿವೆ. ಉದಾ.

ಉರುಸ

ಕಫನ್

ಕವ್ವಾಲಿ

ತಾಯಿತ

ದೀನ

ನಗಾರಿ

ಮುಜುರಾ

ಸಲಾಮ್

ಕಬರಸ್ಥಾನ

ಗುಲಾಲ

ಜಿಹಾದ

ನಮಾಜ್

ರೋಜಾ

ಗೋರಿ

ಕ್ರಾಸ್

ಬೈಬಲ್

ಇತ್ಯಾದಿ ಪದಗಳನ್ನು ಗುರುತಿಸಬಹುದು. ಧರ್ಮ ಮತ್ತು ಧಾರ್ಮಿಕ ಆಚರಣೆಗೆ ಸಂಬಂಧಿಸಿದ ಪದಗಳಲ್ಲಿ ಹೆಚ್ಚಿನವು ಸ್ವೀಕರಣವಾಗಿ ಬಂದವುಗಳೇ ಆಗಿವೆ. ಬೌದ್ಧ, ಜೈನ ಮತ್ತು ಹಿಂದೂ ಧಾರ್ಮಿಕ ಆಚರಣೆಗೆ ಸಂಬಂಧಿತ ಪದಗಳು ಸಂಸ್ಕೃತ ಮತ್ತು ಪ್ರಾಕೃತದಿಂದ ಸ್ವೀಕರಣವಾಗಿ ಬಂದರೆ, ಇಸ್ಲಾಂಗೆ ಸೇರಿದ ಪದಗಳು ಅರಬ್ಬಿ ಮತ್ತು ಪಾರಸಿ ಭಾಷೆಯಿಂದ, ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದ ಪದಗಳು ಇಂಗ್ಲಿಶ್ ಮತ್ತು ಪೋರ್ಚಗೀಸ್‌ನಿಂದ ಸ್ವೀಕರಣವಾಗಿ ಬಂದಿವೆ. ಈ ಪದಗಳು

ನೇರವಾಗಿ ಸ್ವೀರಕಣಕ್ಕೆ ಒಳಗಾಗಿದ್ದರೂ ಕೆಲವು ಧ್ವನಿ ಬದಲಾವಣೆಗಳು ಸಂಭವಿಸಿವೆ. ಒಟ್ಟಿನಲ್ಲಿ ಧರ್ಮ ಮತ್ತು ಆಚರಣೆಗೆ ಸೇರಿದ ಕನ್ನಡ ಪದಕೋಶವು ಚಾರಿತ್ರಿಕವಾಗಿ ಬೆಳವಣಿಗೆಯನ್ನು ಕಂಡುಕೊಂಡಿದೆ.

**೪.೬ ಸಾಮಾಜಿಕ ಮತ್ತು ಸಾಂಸ್ಕೃತಿಕ**

ಮಾನವ ಬದುಕಿನ ಸಂದರ್ಭಗಳಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳಿಗೆ ಹೆಚ್ಚಿನ ಮಹತ್ವವಿದೆ. ಮಾನವ ಜನ ಜೀವನದಲ್ಲಿ ಆಗುವ ಬದಲಾವಣೆಗಳಲ್ಲಿ ಹೆಚ್ಚಿನ ಬದಲಾವಣೆಗಳು ಅವರ ಸಾಮಾಜಿಕ ಜೀವನದಲ್ಲೇ(ಸಾಮಾಜಿಕ ಜೀವನ ಎನ್ನುವುದನ್ನು ದೈನಂದಿನ ಜೀವನ ಎನ್ನುವ ಅರ್ಥದಲ್ಲಿ ಗ್ರಹಿಸಲಾಗಿದೆ.) ಸಂಭವಿಸುತ್ತವೆ. ಸಾಂಸ್ಕೃತಿಕ ಜೀವನ ತುಂಬಾ ನಿಯಮ ಬದ್ಧ ಮತ್ತು ಕಟ್ಟು ನಿಟ್ಟಿನದ್ದಾಗಿದ್ದರೂ ಕರ್ನಾಟಕ(ಭಾರತ)ದ ಸಂದರ್ಭದಲ್ಲಿ ಅದು ಅಷ್ಟು ಕಟ್ಟುನಿಟ್ಟಾಗಿ ಇರಲಾರದು. ಪ್ರಾಚೀನ ಕಾಲದಿಂದಲೂ ಜನಜೀವನದಲ್ಲಿ ಸಾಂಸ್ಕೃತಿಕವಾಗಿ ಬದಲಾವಣೆಗಳು ಕಂಡುಬಂದಿವೆ. ಅನೇಕ ಹೊಸ ಹೊಸ ಸಂಪ್ರದಾಯಗಳು ಹುಟ್ಟಿಕೊಂಡು ಆ ಸಂಪ್ರದಾಯಗಳಿಗೆ ಒಳಗಾಗುವುದು ಒಂದು ಮಾದರಿಯಾದರೆ ಬೇರೆ ದೇಶಗಳಿಂದ ಬಂದ ಜನಾಂಗದ ಸಾಂಸ್ಕೃತಿಕ ಆಚರಣೆಗಳಿಗೆ ಒಳಗಾಗುವುದು ಇನ್ನೊಂದು ಮಾದರಿಯಾಗಿದೆ. ಇವುಗಳಲ್ಲಿ ಯಾವುದು ಸಂಭವಿಸಿದರೂ ಬದಲಾವಣೆಗಳು ಖಚಿತವಾದವುಗಳಾಗಿವೆ. ಈ ಬದಲಾವಣೆಗಳು ಹೊಸ ಪರಿಭಾಷೆಗಳನ್ನು ಹುಟ್ಟು ಹಾಕಿವೆ, ಅದನ್ನು ಸ್ವೀಕರಿಸಿಕೊಂಡು ತನ್ನ ಪದಕೋಶದ ಭಾಗವಾಗಿಸಿಕೊಂಡ ಸಂದರ್ಭಗಳು ಕಂಡುಬಂದಿವೆ.

೪.೬.೧ ದೇಶ, ಭಾಷೆ, ಜನ

ಬೇರೆ ಬೇರೆ ಧರ್ಮಗಳು ಅಥವಾ ಸಂಪ್ರದಾಯಗಳು ಕರ್ನಾಟಕ(ಭಾರತ)ದಲ್ಲಿ ಕಂಡು ಬಂದಂತೆ ಅವರನ್ನು ಗುರುತಿಸುವ ಪದಗಳು ಕನ್ನಡದಲ್ಲಿ ಕಂಡು ಬಂದಿವೆ. ಉದಾ.

ಬೌದ್ಧ
ಜೈನ
ಹಿಂದೂ
ಪಾರ್ಸಿ, ಇತ್ಯಾದಿ

**ಇಂಗ್ಲಿಶ್**

ಆಂಗ್ಲ
ಆಗ್ಲೇಯ
ಇಬ್ರಿಯಾ
ಗ್ರೀಕ್

ಜ್ಯೂ

ನಾಜಿ

ಇಂಡಿಯನ್

ಯುರೋಪಿಯನ್

ಬ್ರಿಟಿಶ್

ಅಮೇರಿಕನ್

**ಪಾರಸಿ**

ಖುರಸಾಣಿ

ತುರ್ಕಿ

ದಖ್ಖನಿ

ಪರಂಗಿ

ಪಾರಸಿ

ನಿಗ್ರೋ

ಅರಬ

ಇಸವಿಸನ್

ಮುಸ್ಲಿಂ

ಪೋರ್ಚುಗೀಸ್

ಅಂಗ್ರೇಜ್/ಇಂಗ್ರೇಜ್

ಗ್ರೀಕ್

ಯಮನ್

ಲ್ಯಾಟಿನ್

ಅಲೇಮಾನ,

ಇತ್ಯಾದಿ, ಪದಗಳು ಒಂದು ಧರ್ಮಕ್ಕೆ ಸೇರಿದ ಅಥವಾ ದೇಶಕ್ಕೆ ಸೇರಿದವರನ್ನು ಗುರುತಿಸುವ ಕಾರಣದಿಂದ ಕನ್ನಡ ಪದಕೋಶದ ಭಾಗವಾದವು. ಹಾಗೆಯೇ ಲಿಂಗಾಯತ, ವೀರಶೈವ, ಸೂಫಿ, ಕಾಲಾಮುಖ, ಸಿದ್ಧ ಇಂತ ಅನೇಕ ಪರಂಪರೆಯ ಹೆಸರುಗಳಿಗೆ ಸಂಬಂಧಿಸಿದ ಪದಗಳು ಪ್ರಾಚೀನ ಕಾಲದಿಂದಲೂ ಕನ್ನಡ ಪದಕೋಶದ ಭಾಗವಾಗಿ ಬಂದಿವೆ. ಕಾಲ ಕಾಲಕ್ಕಾದ ಬೆಳವಣಿಗೆಯ ಫಲವಾಗಿ ಹೀಗೆ ಧರ್ಮಕ್ಕೆ ಸೇರಿದ ಅಥವಾ ಪ್ರದೇಶಕ್ಕೆ ಸೇರಿದವರು ಎನ್ನುವ ಅರ್ಥದ ಪದಗಳು ಬೆಳವಣಿಗೆ ಹೊಂದುತ್ತಾ ಬಂದಿವೆ.

### ೪.೬.೨ ಆಹಾರ ಪದಾರ್ಥ

ಮಾನವನ ಜೀವನವೇ ಆಹಾರ ಸಂಗ್ರಹದ ಸಂಘರ್ಷವಾಗಿದೆ. ಆದಿ ಮಾನವರು ಪ್ರಾಕೃತಿಕವಾಗಿ ಸಿಗುತಿದ್ದ ಗೆಡ್ಡೆ-ಗೆಣಸುಗಳನ್ನು ತಿಂದು ಬದುಕು ಸಾಗಿಸುತ್ತಿದ್ದರು. ಮಾನವ ವಿಕಾಸವಾದಂತೆಲ್ಲ ಅವರ ಜೀವನ ಕ್ರಮದಲ್ಲಿ ಬಂದ ಬದಲಾವಣೆಗಳು ಆಹಾರ ಪದ್ಧತಿಯಲ್ಲೂ ಕಂಡು ಬಂದಿದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕವು(ಭಾರತ) ಆಹಾರ ಪದ್ದತಿಗೆ ಸಂಬಂಧಿಸಿದಂತೆ ತನ್ನದೇ ಆದ ಮಹತ್ವವನ್ನು ಹೊಂದಿದೆ. ಆಹಾರದ ಪದ್ಧತಿಯಲ್ಲಿ ತುಂಬಾ ಶ್ರೀಮಂತ ಪರಂಪರೆಯನ್ನು ಹೊಂದಿದೆ. ಪ್ರಾಚೀನ ಕಾಲದ ದಾಖಲೆಗಳಲ್ಲಿ ಅನೇಕ ಭಕ್ಷ್ಯಭೋಜ್ಯಗಳ ಹೆಸರುಗಳ ಉಲ್ಲೇಖ ಕಂಡುಬರುತ್ತದೆ. ಇದನ್ನು ಯಾಗ ಅಥವಾ ಯಾವುದಾದರೂ ವಿಶೇಷ ಆಚರಣೆಗಳಗೆ ಸಂಬಂಧಿತ ವಿವರಗಳಲ್ಲಿ ಕಾಣಬಹುದು. ಕರ್ನಾಟಕಕ್ಕೆ ಬೇರೆ ಬೇರೆ ಪ್ರದೇಶಗಳಿಂದ ಜನರ ಆಗಮನದಿಂದ ಆಹಾರ ಕ್ರಮಗಳಲ್ಲಿ ಬದಲಾವಣೆಗಳು ಕಂಡುಬಂದು, ಅನೇಕ ಅನ್ಯ ತಿಂಡಿ ತಿನಿಸುಗಳು ಕನ್ನಡಿಗರ ಆಹಾರದ ಭಾಗಗಳಾಗಿವೆ.

ಜಾಗತೀಕರಣದ ನಂತರ ಆಹಾರ ಕ್ರಮದಲ್ಲಿ ಗುರುತರ ಬದಲಾವಣೆಗಳು ಸಂಭವಿಸಿವೆ. ಕರ್ನಾಟಕ(ಭಾರತ) ಜನಜೀವನದ ಆಹಾರ ಕ್ರಮದಲ್ಲಿ ಒಟ್ಟು ಮೂರು ಊಟಗಳನ್ನು ಸ್ವೀಕರಿಸುವ ಕ್ರಮಗಳು ಇವೆ. ಈ ಆಹಾರ ಸೇವನೆಯ ಕ್ರಮವನ್ನು ಗುರುತಿಸುವ ಯಾವುದೇ ವಿಶೇಷ ಕ್ರಮವೇನೂ ಇರಲಿಲ್ಲ. ಆನಂತರದಲ್ಲಿ ಮರಾಠಿಯ ಪ್ರಭಾವದಿಂದ ಮುಂಜಾನೆ ಊಟವನ್ನು ನ್ಯಾರಿ ಮತ್ತು ನಾಷ್ಟಾ ಎಂದು ಕರೆಯುವ ಪದ್ಧತಿ ಬಳಕೆಗೆ ಬಂತು. ಅದರಲ್ಲೂ ನಾಷ್ಟಾವನ್ನು ಊಟದ ಒಂದು ಪ್ರಕಾರ(ಉಪ ಆಹಾರ) ಎಂದು ಗುರುತಿಸಲು ಬಳಕೆಗೊಳ್ಳುತ್ತದೆ. ಇಂಗ್ಲಿಶರ ಆಗಮನದ ನಂತರ ಅವರ ಆಹಾರ ಕ್ರಮವನ್ನು ಅನುಸರಿಸಲು ಪ್ರಾರಂಭವಾದ ಮೇಲೆ ದಿನದ ಮೂರು ಊಟಗಳನ್ನು ಬೇರೆ ಬೇರೆ ಪದಗಳಿಂದ ಗುರುತಿಸುವ ಕ್ರಮ ಬಳಕೆಗೆ ಬಂತು(ಸಂಪೂರ್ಣವಾಗಿ ಈ ಮಾದರಿಯೇ ಬಳಕೆಯಲ್ಲಿರದಿದ್ದರೂ ಕನ್ನಡದಲ್ಲಿ ಈ ವಿಭಾಗ ಕ್ರಮ ಬಳಕೆಯಲ್ಲಿದೆ.). ಮುಂಜಾನೆಯ ಊಟವನ್ನು ಟಿಫನ್, ಮಧ್ಯಾಹ್ನದ ಊಟವನ್ನು ಲಂಚ್, ರಾತ್ರಿಯ ಊಟವನ್ನು ಡಿನ್ನರ್ ಮತ್ತು ಸಂಜೆಯ ತಿನಿಸನ್ನು ಸ್ನ್ಯಾಕ್ಸ್ ಎಂದು ಗುರುತಿಸುವ ಪದಗಳು ಬಳಕೆಗೆ ಬಂದವು.

ಪ್ರಾಚೀನ ಭಾರತದಲ್ಲಿ ಆಹಾರದ ವ್ಯವಸ್ಥೆಯನ್ನು ಮುಖ್ಯವಾಗಿ ಮನೆಗಳಲ್ಲೇ ಮಾಡಲಾಗುತ್ತಿತ್ತು. ಹೊರಗಡೆಯಿಂದ ಬಂದ ಅಥವಾ ಬೇರೆ ಸ್ಥಳಗಳಿಗೆ ಹೋಗುವವರ ಆಹಾರದ ಅವಶ್ಯಕತೆಗಳನ್ನು ತೀರಿಸಲು ಗಂಜಿಕೇಂದ್ರ ಅಥವಾ ಅರವಟ್ಟಿಗೆ ಕೇಂದ್ರಗಳ ವ್ಯವಸ್ಥೆಯ ಉಲ್ಲೇಖಗಳು ಸಿಗುತ್ತವೆ. ಆ ಕಾಲದಲ್ಲಿ ಆಹಾರ ಮತ್ತು ನೀರು ಮಾರುವುದು ಪಾಪದ ಕೆಲಸವೆಂದು ನಂಬಲಾಗಿತ್ತು. ಆದರೇ ಆಧುನಿಕ ಕಾಲದ ಅವಶ್ಯಕತೆಗಳು ಆಹಾರದ ವ್ಯವಸ್ಥೆಗಳಿಗಾಗಿ ದಾಬಾ, ಖಾನಾವಳಿ, ಹೋಟೆಲ್,

ರೆಸ್ಟೋರೆಂಟ್, ಬೇಕರಿಯಂತಹ ಹಣ ಪಡೆದು ಆಹಾರದ ವ್ಯವಸ್ಥೆ ಮಾಡುವ ಕೇಂದ್ರಗಳು ಬಳಕೆಗೆ ಬಂದವು. ಇದು ಅನ್ಯ ಸ್ಥಳಗಳಿಗೆ ಹೋದಾಗ ಮಾತ್ರ ಮಾಡಿಕೊಳ್ಳಬಹುದಾದ ಆಹಾರದ ವ್ಯವಸ್ಥೆಯಾಗಿ ಉಳಿಯದೆ ಎಲ್ಲರೂ ಈ ಮಾದರಿಯ ಆಹಾರದ ವ್ಯವಸ್ಥೆಗೆ ಒಳಗಾಗಿದ್ದು ಕಾಣಬಹುದು. ಈ ವ್ಯವಸ್ಥೆಯು ಅನ್ಯದೇಶಗಳಿಂದ ಸ್ವೀಕರಿಸಿದ ಪರಿಕಲ್ಪನೆಯಾಗಿದೆ. ಈ ಪರಿಕಲ್ಪನೆಯ ಜೊತೆಗೆ ಈ ಪರಿಕಲ್ಪನೆಗೆ ಸಂಬಂಧಿಸಿದ ಆಹಾರ ಕ್ರಮಗಳನ್ನು ಸ್ವೀಕರಿಸಲಾಯಿತು. ಈ ವ್ಯವಸ್ಥೆಯು ಭಾರತದಾದ್ಯಂತ ಇರುವ ಅಥವಾ ಅನೇಕ ವಿದೇಶಿ ಆಹಾರ ಕ್ರಮವನ್ನು ಕನ್ನಡದಲ್ಲಿ ಮತ್ತು ಕನ್ನಡಿಗರ ಆಹಾರವನ್ನು ಎಲ್ಲ ಕಡೆ ಪರಸ್ಪರ ವಿನಿಮಯವಾಗುವಂತೆ ಮಾಡಿತು.

ಜಾಗತೀಕರಣವು ಪರಸ್ಪರ ಜನರನ್ನು ಸಮೀಪ ತಂದ ಮೇಲೆ ಆಹಾರಗಳು ಕೂಡ ಪ್ರಾದೇಶಿಕ ಗಡಿಗಳನ್ನು ದಾಟಿ ಕನ್ನಡ ಜನಸಮುದಾಯಕ್ಕೂ ಬಂದಿವೆ. ಈ ಆಹಾರಗಳನ್ನು ಗುರುತಿಸುವ ಪದಗಳು ಕನ್ನಡ ಪದಕೋಶದ ಭಾಗವಾಗಿವೆ. ಉದಾ.

**೪.೬.೨.೧ ಸಿಹಿತಿಂಡಿಗಳು**

**ಪಾರಸಿ**

ಗುಲಕಂಡ/ಗುಲ್ಕನ

ಗುಲಾಬ ಜಾಮುನ

ಜಹಾಂಗಿರ್/ಜಾಂಗಿರ್

ಜಿಲೇಬಿ

ಬರ್ಫಿ

ಬಾದುಷಾ

**ಅರಬ್ಬಿ**

ಮೊರಬ್ಬ

ಹಲ್ವ

**ಇಂಗ್ಲಿಶ್**

ಕೇಕ

ಕ್ಯಾಂಡಿ

ಕ್ರೀಮ್

ಗ್ಲೂಕೋಸ್

ಚಾಕಲೇಟ್

ಜಾಮ್

ಲಾಲಿಪಾಪ್

ಐಸ್ಕ್ಯಾಂಡಿ

ಐಸ್ ಕ್ರೀಮ್

**೪.೬.೨.೨ ವ್ಯಂಜನ ಪದಾರ್ಥಗಳು**

**ಅರಬ್ಬಿ– ಪಾರಸಿ**

ಪಲಾವ

ಚೌಚೌ (ಭಾತ್)

ವಾಂಗಿ ಭಾತ್

ಬಿರಿಯಾನಿ

ಕೈಮಾ

ಕಬಾಬ್

ಸಮೋಸಾ

ಚಪಾತಿ

**ಇಂಗ್ಲಿಶ್**

ಫ್ರೈಡ್ ರೈಸ್

ಆಮ್ಲೇಟು

ಎಗ್ ಬುರ್ಜಿ

ಚಿಕನ್

ಮಟನ್

ಚಟ್ನಿ

ಬರ್ಫಿ, ಇತ್ಯಾದಿ.

**೪.೬.೨.೩ ಬೇಕರಿ ತಿನಿಸುಗಳು**

ಎಣ್ಣೆಯಲ್ಲಿ ಕರಿದ ಅಥವಾ ಬೆಂಕಿಯಲ್ಲಿ ಬೇಯಿಸಿದ ಕುರುಕಲು ತಿನಿಸನ್ನು ತಯಾರಿಸಿ ಮಾರಾಟ ಮಾಡುವ ವ್ಯವಸ್ಥೆಯೇ ಬೇಕರಿಯಾಗಿದೆ. ಇಲ್ಲಿ ಸಿಗುವ ಹೆಚ್ಚಿನ ತಿನಿಸುಗಳ ಹೆಸರನ್ನು ಇಂಗ್ಲಿಶನಿಂದ ಸ್ವೀಕರಿಸಲಾಗಿದೆ. ಉದಾ.

ಪಫ್ಸ್

ಬನ್

ಬಿಸ್ಕೆಟ್/ ಬಿಸ್ಕತ್ತು

ಬ್ರೆಡ್ಡು

ರಸ್ಕು

ಕೆಚಪ್

ಚಿಪ್ಸ್

ಪ್ಯಾನ್‌ಕೇಕ್

ಜಾಂ

ಕೇಕ್

ಇತ್ಯಾದಿ, ತಿಂಡಿ ತಿನಿಸುಗಳಿಗೆ ಸಂಬಂಧಿಸಿದ ಪದಗಳು ಕನ್ನಡ ಪದಕೋಶದೊಳಗೆ ಸೇರಿಕೊಂಡಿವೆ. ಈ ಪದಗಳಲ್ಲಿ ಪಾರಸಿ, ಅರಬ್ಬಿ, ಮರಾಠಿ, ಇಂಗ್ಲಿಶ್ ಪದಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

**೪.೬.೨.೪ ಪಾನೀಯಗಳು:**

ಪ್ರಾಚೀನ ಕನ್ನಡ ದಾಖಲೆಗಳಲ್ಲಿ ಪಾನೀಯಗಳ ಬಗ್ಗೆ ಸಿಗುವ ಪದವೆಂದರೆ ಪಾನಕ. ಪಾನಕವನ್ನು ಬೆಲ್ಲದ ನೀರಿನಿಂದ ಮಾಡಲಾಗುತ್ತಿತ್ತು. ಭಾರತೀಯರಲ್ಲಿ ಪಾನಕವಾಗಿ ಗಂಜಿ ಮತ್ತು ಮಜ್ಜಿಗೆಯು ತುಂಬಾ ಮಹತ್ವದ ಸ್ಥಾನವನ್ನು ಪಡೆದಿವೆ. ದಾರಿ ಹೋಕರ ಆಯಾಸವನ್ನು ತೀರಿಸಲು ದಾರಿಗಳಲ್ಲಿ ಗಂಜಿಕೇಂದ್ರಗಳನ್ನು ಸ್ಥಾಪಿಸಲಾಗುತ್ತಿತ್ತು. ಇಲ್ಲಿ ಗಂಜಿ ಮತ್ತು ಮಜ್ಜಿಗೆಯಂತಹ ಪಾನೀಯಗಳನ್ನು ನೀಡಲಾಗುತ್ತಿತ್ತು. ಪಾನೀಯಗಳಲ್ಲಿ ತಂಪು ಮತ್ತು ಬಿಸಿ ಎಂಬ ಎರಡು ಬಗೆ ಕಾಣಬಹುದು. ತಂಪುಪಾನೀಯಕ್ಕೆ ಸಂಬಂಧಿಸಿದಂತೆ ಅರಬ್ಬಿಯ ಷರಬತ್ತು ಪದ ಬಳಕೆಯಾಗಿದ್ದು ಕಾಣುತ್ತದೆ. ಆದರೆ ಇದು ಬೆಲ್ಲದ ನೀರಿನಿಂದ ಮಾಡಿದ್ದಾಗಿರದೆ, ಹಣ್ಣಿನ ರಸಕ್ಕೆ ಸಕ್ಕರೆ ಸೇರಿಸಿ ಮಾಡಿದ್ದಾಗಿರುತ್ತದೆ. ಆನಂತರ ಇದೇ ಮಾದರಿಯನ್ನು ಗುರುತಿಸಲು ಇಂಗ್ಲಿಶನ ಜ್ಯೂಸ್ ಪದ ಬಳಕೆಗೆ ಬಂತು. ಇದೇ ಮಾದರಿಯಲ್ಲಿ ಸೋಡಾ, ಕೋಕ್, ಕ್ರಷ್‌ನಂತಹ ತಂಪು ಪಾನೀಯಗಳ ಹೆಸರು ಕನ್ನಡದಲ್ಲಿ ಬಳಕೆಗೆ ಬಂದವು. ಬಿಸಿಪಾನೀಯಗಳಲ್ಲಿ ಮುಖ್ಯವಾಗಿ

ಚಾ/ಚಾಯ/ಚಾಹ

ಕಾಫಿ

ಟೀ

ಬೂಷ್ಟ್

ಬೋರ್ನ್‌ವ್ಹಿಟಾ

ಸೂಪ್,

ಇತ್ಯಾದಿ ಪದಗಳು ಕಂಡುಬಂದಿವೆ. ಚಾ/ಟಿ ಮತ್ತು ಕಾಫಿಯಂತ ಬಿಸಿಪಾನೀಯಗಳಿಗೆ ಸಂಬಂಧಿಸಿದಂತೆ ಗರಂ ಚಾಯಿ, ಕೇಟೀ, ಕಡಕ ಟೀ, ಸ್ಟ್ರಾಂಗ್ ಟೀ, ಲೈಟ್ ಟೀ ಈ ಪದಗಳು ಬಳಕೆಯಲ್ಲಿವೆ.

ಪಾನೀಯಕ್ಕೆ ಸಂಬಂಧಿಸಿದಂತೆ ಬಳಕೆಯಾಗುವ ಇನ್ನೊಂದು ಪದವೆಂದರೆ ಮಧುಪಾನ/ಮದ್ಯಪಾನಕ್ಕೆ ಸಂಬಂಧಿಸಿದ್ದು. ಇವು ಕರ್ನಾಟಕ(ಭಾರತ)ದ ಪ್ರಾಚೀನ ಕಾಲದಿಂದಲೂ ಇತ್ತು

ಎನ್ನುವುದಕ್ಕೆ ಪ್ರಾಚೀನ ಕನ್ನಡ ಕಾವ್ಯಗಳಲ್ಲೇ ಉಲ್ಲೇಖಗಳು ಕಂಡುಬರುತ್ತವೆ. ಪ್ರಾಚೀನ ವೇದ ಪುರಾಣಗಳಲ್ಲೂ ದೇವಾನುದೇವತೆಗಳು ಮಧುಪಾನ ಮಾಡುತ್ತಿದ್ದ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಮದ್ಯಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ

ಕಳ್ಳು

ನೀರಾ

ಸುರೇ

ಸಿಂದಿ(ಶೇಂದಿ)

ಹೆಂಡ

ಗಂಗಾಸಾರ

ಸಾರಾಯಿ

ದಾರು(ಪಾ)

**ಇಂಗ್ಲಿಶ್**

ಬ್ರಾಂದಿ

ಬೀರು

ರಮ್

ವಿಸ್ಕಿ

ವೈನ್

ಜಿನ್,

ಇತ್ಯಾದಿ ಪದಗಳು ಕಂಡು ಬಂದಿವೆ. ಮಾದಕಕ್ಕೆ ಸಂಬಂಧಿಸಿದಂತೆ ಅಫೀಮ್, ಡ್ರಗ್ಸ್ ಎಂಬ ಪದಗಳು ಕನ್ನಡದಲ್ಲಿ ಕಂಡು ಬಂದಿವೆ. ಮದ್ಯಪಾನದಂತೆ ಮಾದಕ ವಸ್ತುಗಳನ್ನು ಬಳಸಿಕೊಂಡು ಸೇದುವ ಪದ್ಧತಿಯೊಂದು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ***"ಧೂಮಪಾನವು ಜಾತಕ ಕಥೆಗಳು, ಕಾದಂಬರಿ, ವೈದ್ಯ ಗ್ರಂಥಗಳಲ್ಲಿ ಉಕ್ತವಾಗಿರುವುದರಿಂದ ಪ್ರಾಚೀನ ಪದ್ಧತಿ"*** *(ಉದ್ಧೃತ, ಕನಕೇಶಮೂರ್ತಿ ಬಿ.ಜಿ.,೧೯೭೦).* ಇದಕ್ಕೆ ಸಂಬಂಧಿಸಿದಂತೆ

ತಂಬಾಕು

ಕಡ್ಡಿಪುಡಿ

ಹೊಗೆಸೊಪ್ಪು

ಬೀಡಿ

ಚುಟ್ಟಾ

ಹೊಗೆಬತ್ತಿ

ಹುಕ್ಕಾ

ಗುಡುಗುಡಿ

ಚಿಲುಮೆ,

ಇತ್ಯಾದಿ ಪದಗಳು ಕಂಡುಬಂದಿವೆ. ಈ ಪದಗಳಲ್ಲಿ ಅರಬ್ಬಿ ಮತ್ತು ಪಾರಸಿಗೆ ಸಂಬಂಧಿಸಿದ ಪದಗಳು ಹೆಚ್ಚಾಗಿ ಕಂಡು ಬಂದರೇ, ಸಿಗಾರ್ ಅಥವಾ ಸಿಗರೇಟ್ ಈ ಪದಗಳು ಇಂಗ್ಲಿಶನಿಂದ ಸ್ವೀಕರಿಸಿದ್ದಾಗಿವೆ.

**೪.೬.೩ ಉಡುಗೆ – ತೊಡುಗೆ**

ಮಾನವರು ವಿಕಾಸದ ಅಥವಾ ನಾಗರಿಕನಾದ ಕತೆ ಮೊದಲು ಬಿಂಬಿತವಾದದ್ದು ಅವರಿಗೆ ದೇಹ ರಕ್ಷಣೆಗೆ ಉಡುಪುಗಳನ್ನು ರೂಪಿಸಿಕೊಂಡಾಗಿನಿಂದಲೇ ಇರಬೇಕು. ಆರಂಭಿಕವಾಗಿ ಮರದ ತೊಗಟೆ ಅಥವಾ ಮರಗಳ ಎಲೆಗಳಿಂದ ದೇಹವನ್ನು ರಕ್ಷಣೆ ಮಾಡಿಕೊಳ್ಳಲಾರಂಭಿಸಿ ಕ್ರಮೇಣ ಬೇರೆ ಬೇರೆ ಹಗುರಾದ ಅಥವಾ ದೇಹಕ್ಕೆ ಹಿತವಾದ ಧರಿಸುಗಳ ವ್ಯವಸ್ಥೆ ಮಾಡಿಕೊಳ್ಳುತ್ತಾ ಬಂದರು.

ಉಡುಪು ಮೂಲತಃ ಮಾನವ ದೇಹರಕ್ಷಣೆಗೆ ರೂಪಿಸಿಕೊಂಡಿದ್ದಾದರೂ ಕ್ರಮೇಣ ನಾಗರಿಕತೆ ಬೆಳೆದಂತೆ ಅದು ಸೌಂದರ್ಯಪ್ರಜ್ಞೆಗೆ, ಅಭಿರುಚಿಗೆ ತಕ್ಕಂತೆ ಬದಲಾಗುತ್ತಾ ಬಂದು, ಮನುಷ್ಯರ ಬದುಕಿನ ಅನಿವಾರ್ಯ ಅಗತ್ಯ ವಸ್ತುಗಳಲ್ಲಿ ಒಂದಾಗಿಬಿಟ್ಟಿದೆ. ವ್ಯಕ್ತಿ ತೊಡುವ ಉಡುಪುಗಳು ಸಂಸ್ಕೃತಿಯ ಮಟ್ಟದ ಸಂಕೇತವಾಗಿ, ಆತನ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳನ್ನು ಬಿಂಬಿಸತೊಡಗಿದವು*(ಮಂಜುನಾಥ ಸಿ.ಯು.೨೦೧೨:೪೮೬).*

ಪ್ರಾಚೀನ ಕನ್ನಡ ಕಾವ್ಯಗಳಾದ ವಡ್ಡಾರಾಧನೆ, ಪಂಪ ಭಾರತ ಮುಂತಾದ ಕೃತಿಗಳಲ್ಲಿ ಚೀನ, ಚೀನಾಂಬರ(ಇದು ಚೀನಾ ದೇಶದಲ್ಲಿ ತಯಾರಿಸಲಾಗುತ್ತಿದ್ದ ಬಟ್ಟೆಯ ಪ್ರಕಾರವಾಗಿದೆ.) ಎಂಬ ಉಲ್ಲೇಖಗಳು ಸಿಗುತ್ತವೆ. ಇದು ನಯವಾದ ಬಟ್ಟೆಗೆ ಸಂಬಂಧಿಸಿದ್ದಾಗಿದೆ. ಭಾತರದಲ್ಲಿಯೂ ನಯವಾದ ಬಟ್ಟೆ ತಯಾರಿಸಲಾಗುತ್ತಿತ್ತು ಅದನ್ನ ಪಳಿ, ಪಟ್ಟಾಪಳಿ ಎಂದು ಕರೆವ ಉಲ್ಲೇಖಗಳು ಸಿಗುತ್ತವೆ. ಪ್ರಾಚೀನ ಕಾಲದ ಕರ್ನಾಟಕದಲ್ಲಿ ಗಂಡು ಮತ್ತು ಹೆಣ್ಣು ಇಬ್ಬರು ಒಂದೇ ಮಾದರಿಯ ಬಟ್ಟೆ ಧರಿಸುತ್ತಿದ್ದರು. ಆದರೆ ಧರಿಸುವ ಮಾದರಿಗಳು ಬದಲಾಗಿರುತ್ತಿದ್ದವು. ಪ್ರಾಚೀನ ಕಾಲದಲ್ಲಿ ನಮಗೆ ಶಾಸನ ಮತ್ತು ಸಾಹಿತ್ಯ ಕೃತಿಗಳಿಂದ ಸಿಗುವ ಉಲ್ಲೇಖಗಳೆಂದರೇ,

ಸೀರೆ

ಕಪ್ಪಡ

ಕುಪ್ಪಸ

ಮಂಜೀಯ(ಮಂಜಿಯ ಹುಲ್ಲಿನ ಮೂರು ಪಟ್ಟಿಯನ್ನು ಸೊಂಟದಲ್ಲಿ ಧರಿಸಲಾಗುವ ಒಂದು ಬಗೆಯ ವಸ್ತ್ರ

ಕೌಪೀನ (ಸಾದು, ಸಂತರು ಧರಿಸುತ್ತಿದ್ದರು)

ಉಡೆ,

ಇತ್ಯಾದಿ ಪದಗಳು ಉಡುಗೆಗೆ ಸಂಬಂಧಿಸಿದ ಉಲ್ಲೇಖಳಾಗಿವೆ. ಪ್ರಾಚೀನ ಕಾಲದಲ್ಲಿ ಗಂಡಸರು ದೇಹದ ಕೆಳಭಾಗದಲ್ಲಿ ಸೀರೆಯಿಂದ ವಿಶೇಷ ವಿನ್ಯಾಸದ ಕಚ್ಚೆಗಳನ್ನು ಹಾಕಿಕೊಳ್ಳುತ್ತಿದ್ದರು, ಮೇಲ್ಗಡೆ ಕುಪ್ಪಸ ಧರಿಸುತ್ತಿದ್ದರು, ಹೆಣ್ಣುಮಕ್ಕಳು ಸೀರೆ ಮತ್ತು ಕುಪ್ಪಸವನ್ನು ದೇಹಕ್ಕೆ ಸುತ್ತಿಕೊಳ್ಳುವ ಮಾದರಿಯಲ್ಲಿ(ಪ್ರಸ್ತುತ ಈ ಮಾದರಿ ಚಾಲ್ತಿಯಲ್ಲಿದೆ) ಧರಿಸುವಂತೆ ಅನೇಕ ಶಾಸನ ಮತ್ತು ವೀರಗಲ್ಲುಗಳಲ್ಲಿ ಕೆತ್ತಲಾಗಿದೆ. ಅನೇಕ ದೇವಾಲಯ ಮತ್ತು ಶಿಲ್ಪಗಳಲ್ಲಿ ಸ್ತ್ರೀಯರು ಮೇಲ್ಭಾಗದಲ್ಲಿ ಬಟ್ಟೆ ಇರದಿರುವುದು, ಭಾರತೀಯರು ಮೇಲ್ಭಾಗಕ್ಕೆ ಯಾವುದೇ ಬಟ್ಟೆ ಧರಿಸುತ್ತಿರಲಿಲ್ಲ ಎನ್ನುವ ನಂಬಿಕೆಯೊಂದಿದೆ. ಮುಸ್ಲಿಂ ಆಳ್ವಿಕೆ ಬಂದಾಗ ಅವರ ಧರಿಸಿನ ಮಾದರಿಯನ್ನು ಅನುಸರಿಸಿ ಭಾರತೀಯರು ಮೇಲ್ಭಾಗದಲ್ಲಿ ಬಟ್ಟೆ ಉಡುವ ಕಲ್ಪನೆ ಬಂದಿದೆ ಎನ್ನುವುದು ಕೆಲವರ ವಾದವಾದರೇ, ಕಾವ್ಯಗಳು ಮತ್ತು ವಚನಗಳಲ್ಲಿ ಸಿಗುವ ಕುಪ್ಪಸದ ಉಲ್ಲೇಖ ಮುಸ್ಲಿಂರ ಆಗಮನಕ್ಕಿಂತ ಮುಂಚೆಯೇ ಮೇಲ್ಭಾಗದ ಉಡುಪಿನ ಕಲ್ಪನೆ ಇದ್ದಿತ್ತು ಎನ್ನುವ ವಾದವನ್ನು ಮುನ್ನೆಲೆಗೆ ತರುತ್ತದೆ. ಮಧ್ಯ ಮತ್ತು ಆಧುನಿಕ ಕಾಲದಲ್ಲಿ ಮುಸ್ಲಿಂ ಮತ್ತು ಬ್ರಿಟಿಶ್‌ರ ಆಗಮನದಿಂದ ಕರ್ನಾಟಕ(ಭಾರತ) ಜನಸಾಮಾನ್ಯರ ಉಡುಗೆ ತೊಡುಗೆಗಳಲ್ಲಿ ಬದಲಾವಣೆ ಕಂಡುಬಂದಿತು. ಉದಾ.

### ೪.೬.೩.೧ ಪುರುಷರ ಉಡುಪು

**ಅರಬ್ಬಿ**

ಜುಬ್ಬಾ

**ಪಾರಸಿ**

ಕುರ್ತಾ

ಕಬಾಯಿ

ಪೈಜಾಮ

ಇಜಾರ

ಚಡ್ಡಿ

ಲುಂಗಿ

**ಇಂಗ್ಲಿಶ್**

ಬನಿಯನ್

ಶ್‌ರ್ಟ್

ಟೀಶ್‌ರ್ಟ್

ಜಾಕೇಟ್

ಕೋಟ್ > ಲಾಂಗ್ ಕೋಟ್, ರೈನ್ ಕೋಟ್, ಓವರ್ ಕೋಟ್

ಸೂಟ್

ಜರ್ಸಿ

ಜರ್ಕಿನ್

ಗೌನ್

ಪ್ಯಾಂಟ್

ನಿಕ್ಕರ್

ಜೀನ್ಸ್

ಇತ್ಯಾದಿ ಪದಗಳು ಕನ್ನಡ ಪದಕೋಶ ಸೇರಿಕೊಂಡವು. ಈ ಧರಿಸುಗಳು ಬಂದ ಮೇಲೆ ಒಳ ಉಡುಪು, ಮೇಲುಡುಪು ಎನ್ನುವ ಪರಿಕಲ್ಪನೆ ಕನ್ನಡದಲ್ಲೂ ಬಳಕೆಗೆ ಬಂದಿತು. ಹೆಣ್ಣು ಮಕ್ಕಳ ಉಡುಪಿನಲ್ಲಿ ಈ ಮಾದರಿಯ ವಿಭಾಗಗಳಿವೆ. ಹೆಣ್ಣು ಮಕ್ಕಳಿಗೆ ಸಂಬಂಧಿಸಿದ ಉಡುಗೆಗಳ ಹೆಸರು ಹೀಗಿವೆ.

**೪.೬.೩.೨ ಮಹಿಳೆಯರ ಉಡುಪುಗಳು**

**ಅರಬ್ಬಿ–ಪಾರಸಿ**

ಜಂಪರ್

ದಾವಣಿ

ಬುರಕಾ

ಲಂಗ

**ಇಂಗ್ಲಿಶ್**

ಜಾಕೇಟ್

ಬ್ರಾ(ಬ್ರಾಸಿಯರ್ಸ್‌ನ ಸಂಕ್ಷಿಪ್ತ ರೂಪ)

ಬಿಕಿನಿ

ಸ್ಕರ್ಟ್

ಪೆಟ್ಟಿಕೋಟ್

ನ್ಯಾಪ್‌ಕಿನ್

ಪ್ಯಾಂಟೀಸ್

ಬ್ಲೌಸ್

ಮಸ್ಲೀನು

ನೈಟಿ

ಇತ್ಯಾದಿ ಪದಗಳನ್ನು ಗುರುತಿಸಬಹುದು. ಇವುಗಳಲ್ಲದೆ ಮೇಲು ಹೊದಿಕೆಗಳು ಕೂಡ ಕಂಡು ಬಂದಿದ್ದು, ತಲೆಗೆ ಹಾಕುವ ಮತ್ತು ಭುಜ ಭಾಗಕ್ಕೆ ಹೊದೆಯುವ ಪ್ರಕಾರಕ್ಕೆ ಸೇರಿದ ಉಡುಗೆಗಳು ಕಂಡು ಬಂದವು. ಉದಾ.

ರುಮಾಲು

ಕುಲಾಯಿ

ಪಗಡಿ

ಟೋಪಿ

ಪೇಟ್

ಶಲ್ಯಾ

ಕ್ಯಾಪು

ಹ್ಯಾಟ್

ಟಾವೆಲ್

ಕರ್ಚಿಪ್ ಇತ್ಯಾದಿ.

ಪ್ರಾಚೀನ ಕರ್ನಾಟಕದಲ್ಲಿ ಬಟ್ಟೆಗಳ ಮಾದರಿಯಲ್ಲಿ ಮುಖ್ಯವಾಗಿ ರೇಷ್ಮೆ ಮತ್ತು ಹತ್ತಿ ಈ ಎರಡು ಮಾದರಿಗಳ ಉಲ್ಲೇಖ ಸಿಗುತ್ತವೆ. ಆನಂತರ ಅನೇಕ ಬಗೆಯ ಹೊಸ ಮಾದರಿಯ ಬಟ್ಟೆಯ ಮಾದರಿಗಳು ಕಂಡುಬಂದವು. ಈ ಮಾದರಿಗಳು ಕೂಡ ವಿದೇಶಗಳಿಂದಲೇ ಸ್ವೀಕರಿಸಿದ್ದಾಗಿರುವುದರಿಂದ ಅದಕ್ಕೆ ಸಂಬಂಧಿಸಿದ ಪದಗಳು ಅರಬ್ಬಿ, ಪಾರಸಿ ಮತ್ತು ಇಂಗ್ಲಿಶ್ ಭಾಷೆಗಳಿಂದಲೇ ಸ್ವೀಕರಿಸಿಕೊಂಡವುಗಳಾಗಿವೆ. ಉದಾ.

**ಪಾರಸಿ**

ಕುತನಿ

ಕೊಂಕಾಪು

ಕಾರವಿ

ಪದಕಾಲಾ

ಖಾರ

ಖಾಕಿ

ತಾಪತಿ

ಮಖಮಲ್

ಜರಿ

ಇಂಗ್ಲಿಶ್

ಚೇಕ್

ಕಾದರಾಯಿ

ಸಾಟೀನು

ಮಸ್ಲೀನ್

ಜಾರ್ಜೆಟ್

ದಮಾಸ್

ನೈಲಾನ್

ಸಿಲ್ಕ್

ಕೇಸ್‌ಮೇಂಟ್

ಕ್ಯಾನ್ವಾಸ್(ಚಿತ್ರ ಬಿಡಿಸಲು ಬಳಸುತ್ತಾರೆ)

ಕ್ಯಾಲಿಕೋ,

ಇತ್ಯಾದಿ, ಮೇಲಿನ ಎಲ್ಲ ಉಡುಗೆಗೆ ಸಂಬಂಧಿಸಿದ ಪದಗಳು ದೇಹಭಾಗಕ್ಕೆ ಧರಿಸುವಂತವುಗಳಾದರೇ ಕಾಲಿಗೆ ಧರಿಸಲು ವಿಶೇಷವಾದ ತೊಡುಗೆಗಳು ಇವೆ. ಇವನ್ನು ಪಾದರಕ್ಷೆಯೆಂದು ಕರೆಯಲಾಗಿದೆ. ಪ್ರಾಚೀನ ಕಾಲದಲ್ಲಿ ಪಾದರಕ್ಷೆ ಧರಿಸುತ್ತಿದ್ದರು ಅಥವಾ ಇಲ್ಲ ಎನ್ನುವುದು ತಿಳಿಯದು. ಯಾವುದೇ ಶಿಲ್ಪಗಳಲ್ಲಿ ಪಾದರಕ್ಷೆಯ ಚಿತ್ರಗಳು ಕಂಡುಬರುವುದಿಲ್ಲ. ಆದರೆ ಮಹಾಬಲ ಕವಿಯ ನೇಮಿನಾಥ ಪುರಾಣದಲ್ಲಿ ತುಳಿಲಾಳ್ಗಳು ಪಾದರಕ್ಷೆ ಧರಿಸುತಿದ್ದ ಬಗ್ಗೆ ವಿವರವಿದೆ*(ಮಂಜುನಾಥ ಸಿಯು:೨೦೧೨:೫೯೦).* ನಡುಗನ್ನಡ ಕಾಲಕ್ಕೆ ಬರುವಲ್ಲಿ ಪಾದರಕ್ಷೆ ಬಳಸುತಿದ್ದ ಬಗ್ಗೆ ವಚನಕಾರರಲ್ಲಿ ಅನೇಕ ಮಾಹಿತಿಗಳು ಸಿಗುತ್ತವೆ. ಬಸವಣ್ಣನಿಗೆ ತನ್ನ ತೊಡೆಯ ಚರ್ಮದಿಂದ ಪಾದರಕ್ಷೆ ಮಾಡಿಕೊಟ್ಟ ಪ್ರಸಂಗದ ಮಾಹಿತಿಗಳು ವಚನ ಸಾಹಿತ್ಯದಲ್ಲಿ ಕಂಡುಬರುತ್ತದೆ. ಪಾದಕ್ಕೆ ಧರಿಸದಬಲ್ಲವುಗಳಿಗೆ ಸಂಬಂಧಿಸಿದಂತೆ ಪದಗಳನ್ನು ಸ್ವೀಕರಿಸಲಾಗಿದೆ. ಉದಾ.

ಚಪ್ಪಲ್

ಜೂತಿ

ಚಡಾವ

ಸ್ಲಿಪ್ಪರ್

ಬೂಟ್

ಶೂ

ಸಾಕ್ಸ್(ಕಾಲುಚೀಲ) ಇತ್ಯಾದಿ.

**೪.೬.೩.೩ ಆಭರಣಗಳು**

ಉಡುಪುಗಳು ಮಾನವರ ದೇಹರಕ್ಷಣೆಗೆ ಸಂಬಂಧಿಸಿದವುಗಳಾದರೆ, ಆಭರಣಗಳು ಅವರ ಸೌಂದರ್ಯ ಮತ್ತು ಶ್ರೀಮಂತಿಕೆಯ ಸಂಕೇತವಾಗಿವೆ. ಲೋಹದ ಆವಿಷ್ಕಾರವು ಮಾನವರ ಜೀವನದಲ್ಲಿ ಅನೇಕ ಬದಲಾವಣೆಗಳನ್ನು ತಂದವು. ಮಾನವ ಜೀವನವನ್ನು ಸುಲಭ ಮತ್ತು ಹೆಚ್ಚು ಸುಧಾರಿತವಾಗಿಸಿತು. ಲೋಹಗಳ ಆವಿಷ್ಕಾರ ನಾಗರಿಕತೆಯ ಹೊಸ ಮಜಲು ಮುಟ್ಟಿತು. ಭಾರತದಲ್ಲಿ ಆಭರಣಗಳ ಬಳಕೆಯ ಚರಿತ್ರೆ ಕ್ರಿ.ಪೂ. ಮೂರು ಸಾವಿರ ವರ್ಷಗಳ ಹಿಂದಿನಿಂದಲೇ ಪ್ರಾರಂಭವಾಗುತ್ತದೆ. ಹರಪ್ಪಾ ಉತ್ಖನನದಲ್ಲಿ ಸುಡಾವೆ ಮಣ್ಣಿನ ಮಾತೃ ದೇವತೆಯ ಗೊಂಬೆಯೊಂದರ ಕೊರಳಲ್ಲಿ ಪದಕವಿರುವ ಹಾರದ ಚಿತ್ರಣವಿದೆ. ಮೆಹಂಜೋದಾರೋವಿನಲ್ಲಿ ದೊರಕಿರುವ ಕಂಚಿನ ನರ್ತಕಿಯ ಗೊಂಬೆಯ ಎಡಗೈ ತುಂಬ ಬಳೆಗಳನ್ನು ಧರಿಸಿದ್ದು, ಕೊರಳಲ್ಲಿ ಹಾರವನ್ನು ಧರಿಸಿದೆ. ಈ ಗೊಂಬೆಗಳನ್ನು ನೋಡಿದರೆ ಭಾರತದಲ್ಲಿ ಆಭರಣಗಳನ್ನು ಧರಿಸುವ ಪದ್ಧತಿ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ ಎಂಬುದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಆಭರಣಗಳ ಬಳಕೆ ಯಾವಾಗಿನಿಂದ ಬಂತು ಎನ್ನುವುದರ ಖಚಿತ ಮಾಹಿತಿ ಇರದಿದ್ದರೂ, ಪ್ರಾಚೀನ ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ ಉಲ್ಲೇಖಗಳು ಸಿಗುತ್ತವೆ. ಇದಲ್ಲದೇ ವೀರಗಲ್ಲು, ಮಾಸ್ತಿಗಲ್ಲುಗಳಲ್ಲಿ ಮತ್ತು ಶಿಲ್ಪಗಳಲ್ಲಿ ಅನೇಕ ಆಭರಣಗಳ ಚಿತ್ರಣ ಕಂಡು ಬರುತ್ತದೆ. ಈ ಆಭರಣಗಳನ್ನು ತಲೆ, ಕೊರಳು, ಕಿವಿ, ಮೂಗು, ಕೈ, ಕಾಲುಗಳಲ್ಲಿ ಹಾಕಿಕೊಳ್ಳಬಹುದಾಗಿದೆ. ಆಯಾ ಭಾಗದ ಆಭರಣಗಳು ಬೇರೆ ಬೇರೆಯಾಗಿವೆ. ಪ್ರಾಚೀನ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಆಭರಣಗಳ ಹೆಸರನ್ನು ಹೀಗೆ ಪಟ್ಟಿ ಮಾಡಬಹುದು. ಉದಾ.

ಅಂದುಗೆ

ಕಡಗ

ತೊಡರ್

ಪಟ್ಟಬಂಧ

ಮುಕುಟ

ಕಠಹಾರ

ಕರ್ಣಕುಂಡಲ

ಹತ್ತ ಕುಡುಕು

ಓಲೆ

ಲೋಲಾಕು

ಕುಂಡಲಿ

ನಕ್ಷತ್ರಕುಂಡ

ಕರ್ಣಪತ್ರ

ನೂಪುರ

ತಾರಾಹಾರ

ಮೂಗುತಿ

ಬಳೆ

ಕೇಯಾರ

ಉಂಗುರ

ಕಿರೀಟ

ಕಟಿಸೂತ್ರ

ಬೈತಲಮಣಿ

ಛನ್ನವೀರ

ಕಾಲ್ಗಡಗ

ಗೆಜ್ಜೆ

ಹಣೆಸರ

ಇತ್ಯಾದಿ, ಈ ಆಭರಣಗಳಿಗೆ ಸಂಬಂಧಿಸಿದಂತೆ ಪ್ರಾಚೀನ ಕರ್ನಾಟಕದ ಸಾಹಿತ್ಯಿಕ ಮತ್ತು ಶಾಸನಗಳಲ್ಲಿ ಉಲ್ಲೇಖ ಸಿಗುತ್ತವೆ. ಕರ್ನಾಟಕಕ್ಕೆ ಮುಸ್ಲಿಂ ಮತ್ತು ಬ್ರಿಟಿಶ್‌ರ ಆಗಮನದೊಂದಿಗೆ ಅವರಲ್ಲಿಯ ಅನೇಕ ಆಭರಣಗಳು ಮತ್ತು ಈ ಆಭರಣಗಳ ಹೆಸರುಗಳು ಕನ್ನಡ ಪದಕೋಶದ ಭಾಗವಾದವು. ಉದಾ.

**ಅರಬ್ಬಿ–ಪಾರಸಿ**

ನತ್ತು

ಬುಲಾಕ

ತುರಾಯಿ

ತಾಲೂಕ

ಬಾಜುಬಂದ

ಕಮರಬಂದ

ನಕಾಸಿ

**ಇಂಗ್ಲಿಶ್**

ಚೈನ್> ಕಾಲ ಚೈನ್, ಕತ್ತಿನ ಚೈನ್

ನೆಕ್ಲೇಸ್

ಪೆಡೆಂಟ್

ಬ್ರಾಸ್‌ಲೆಟ್

ರಿಂಗ > ಇಯರ್‌ರಿಂಗ್

ಬ್ಯಾಂಗಲ್

ಹೇರ್‌ಪಿನ್

ಲಾಕೆಟ್ ಇತ್ಯಾದಿ.

ಪ್ರಾಚೀನ ಕರ್ನಾಟಕದಲ್ಲಿ ಬಂಗಾರ, ಬೆಳ್ಳಿ, ವಜ್ರ, ಮಾಣಿಕ್ಯ, ಹಿತ್ತಾಳೆ, ಕಂಚುಗಳಂತ ಲೋಹಗಳಿಂದ ಆಭರಣ ಮಾಡಲಾಗುತ್ತಿತ್ತು. ಹಿತ್ತಾಳೆ ಮತ್ತು ಕಂಚಿಗೆ ಬಂಗಾರ ಅಥವಾ ಬೆಳ್ಳಿಯ ಲೇಪನ ಮಾಡಲಾಗುತ್ತಿತ್ತು. ಇದಕ್ಕೆ ಸಂಬಂಧಿಸಿದಂತೆ ಸೋನಾ, ಚಾಂದಿ, ಗೋಲ್ಡ್, ಸಿಲ್ವರ್, ಪ್ಲಾಟಿನಂ ಇತ್ಯಾದಿ ಪದಗಳು ಬಳಕೆಗೆ ಬಂದವು.

ಭಾರತೀಯರು ಬಂಗಾರ ಮತ್ತು ಬೆಳ್ಳಿಗಳಂತ ಆಭರಣಗಳನ್ನು ಗುಂಜಿಗಳ ಆಧಾರದ ಮೇಲೆ ಅಳೆಯುವ ಕ್ರಮವಿತ್ತು. ಪ್ರಸ್ತುತ ಔನ್ಸ್‌ಗಳಲ್ಲಿ ಅಳೆಯಲಾಗುತ್ತದೆ. ಬಂಗಾರದ ಶುದ್ಧತೆಯನ್ನು ಕ್ಯಾರೆಟ್‌ಗಳಲ್ಲಿ ಅಳೆಯಲಾಗುತ್ತದೆ.

**೪.೬.೪ ವಸತಿ**

ಮಾನವ ಜೀವನದ ಮಹತ್ವದ ಘಟ್ಟಗಳಲ್ಲಿ ಆತ ಒಂದೆಡೆ ನೆಲೆ ನಿಂತಿದ್ದು ಕೂಡಾ ಒಂದು. ಮರದ ಗುಹೆಗಳಲ್ಲಿ ಮತ್ತು ಮರದ ಪೊಟರೆಗಳಲ್ಲಿ ಬದುಕುತ್ತಿದ್ದ ಮಾನವರು ಕ್ರಮೇಣ ವ್ಯವಸ್ಥಿತ ವಸತಿ ವ್ಯವಸ್ಥೆಗಳನ್ನು ತಯಾರಿಸಿಕೊಂಡು ಬದುಕು ಸಾಗಿಸುವ ಕಲೆಯನ್ನು ಸಾಧಿಸಿದರು. ಈ ವಸತಿ ನಿರ್ಮಾಣಗಳಲ್ಲು ನಿರಂತರ ಸುಧಾರಣೆಗಳು ಕಂಡುಬಂದು ಪ್ರಗತಿ ಸಾಧಿಸಲಾಗಿದೆ. ಭಾರತದಲ್ಲಿ ಹರಪ್ಪಾ, ಮೆಹಂಜೋದಾರೋ ಕಾಲದಲ್ಲೇ ವಸತಿಗಳ ನಿವೇಶನಗಳು ಸಿಕ್ಕಿವೆ. ಆ ಕಾಲಕ್ಕಾಗಲೇ ವ್ಯವಸ್ಥಿತ ವಸತಿಗಳ ರೂಪರೇಶೆಗಳನ್ನು ಭಾರತೀಯರು ಬಲ್ಲವರಾಗಿದ್ದರು ಎನ್ನಬಹುದು. ಕನಾಟಕದಲ್ಲಿ ಅತೀ ಪ್ರಾಚೀನ ನಿವೇಶನಗಳು ಯಾವಾಗ ಕಂಡು ಬಂದವು ಎಂದು ಹೇಳುವುದು ಕಷ್ಟವೆ. ಪ್ರಾಚೀನ ಕರ್ನಾಟಕದಲ್ಲಿ ಹುಲ್ಲಿನಿಂದ ಮಾಡಿದ ಸಣ್ಣ ಸಣ್ಣ ಮನೆಗಳಿಂದ, ದೇವಾಲಯ, ಅಗ್ರಹಾರ, ಅರಮನೆ, ಕೋಟೆಯಂತ ವಸತಿ ವ್ಯವಸ್ಥೆಗೆ ಸಂಬಂಧಿಸಿದ ಪದಗಳು ಕಂಡುಬಂದಿವೆ. ವಸತಿಗೆ ಸಂಬಂಧಿಸಿದಂತೆ ನಡುಗಾಲದಲ್ಲಿ ಅನೇಕ ಬದಲಾವಣೆಗಳು ಕಂಡುಬಂದಿವೆ. ಇಸ್ಲಾಮಿಕ್ ಶೈಲಿಯ ಕಟ್ಟಡಗಳು ಮತ್ತು ಪಾರಸಿ, ಅರೇಬಿಕ್‌ನ ಅನೇಕ ಪದಗಳು ಕನ್ನಡಕ್ಕೆ ಸ್ವೀಕರಿಸಲಾಗಿದೆ. ಉದಾ.

ಮಹಲ್

ಇಮಾರತ್

ಗುಂಬಜ್

ಮೀನಾರ್

ಖಿಲ್ಲಾ

ಶಾಮಿಯಾನ್

ಇತ್ಯಾದಿ. ಇದಲ್ಲದೇ ಖಾನೆ ಎಂಬ ಪದವು ವಸತಿಗೆ ಸಂಬಂಧಿಸಿದ್ದಾಗಿದೆ. ಇದರಿಂದ ರಚಿತವಾದ ಅನೇಕ ಪದಗಳು ಕನ್ನಡಕ್ಕೆ ಸ್ವೀಕರಣವಾಗಿವೆ. ಉದಾ. ದಿವಾನಖಾನೆ, ದವಾಖಾನೆ. ಬ್ರಿಟಿಶರ ಆಗಮನದ ನಂತರ ವಸತಿಗೆ ಸಂಬಂಧಿಸಿದಂತೆ ಇನ್ನಷ್ಟು ಪದಗಳು ಇಂಗ್ಲಿಶನಿಂದ ಕನ್ನಡಕ್ಕೆ ಸೇರಿವೆ. ಉದಾ.

ಹೋಮ್

ಹೌಸ್

ಬಿಲ್ಡಿಂಗ್

ಬಂಗ್ಲೋ

ಇತ್ಯಾದಿ ಪದಗಳು ಕಂಡು ಬಂದಿವೆ. ಬ್ರಿಟಿಶರು ಬಂದ ಮೇಲೆ ಜನರು ವಾಸಿಸುವ ವ್ಯವಸ್ಥೆಗಳನ್ನು ಗುರುತಿಸುವಲ್ಲಿ ಬದಲಾವಣೆಗಳು ಕಂಡುಬಂದವು. ಹೋಮ್ ಮತ್ತು ಹೌಸ್ ಈ ಎರಡು ಪದಗಳು ಮನೆಯನ್ನು ಪ್ರತಿನಿಧಿಸುತ್ತಿದ್ದರೂ ಅವುಗಳ ರಚನೆಯಲ್ಲಿ ವ್ಯತ್ಯಾಸಗಳಿವೆ. ಹಾಗೇಯೆ ಒಂದೇ ಸ್ಥಳದಲ್ಲಿ ಹೆಚ್ಚು ಜನರು ವಾಸಿಸುವ ಸಲುವಾಗಿ ಹೆಚ್ಚು ಮಹಡಿಯ ಅಪಾರ್ಟ್‌ಮೆಂಟ್‌ನಂತ ವಸತಿ ವ್ಯವಸ್ಥೆಗಳು ಕಂಡುಬಂದವು. ಇವುಗಳಲ್ಲದೇ ಔಟ್ ಹೌಸ್, ಗೆಸ್ಟ್ ಹೌಸ್, ಫಾರ್ಮ್ ಹೌಸ್‌ನಂತ ಬೇರೆ ಬೇರ ವಸತಿ ವ್ಯವಸ್ಥೆಗಳು ಕಂಡುಬಂದಿವೆ.

ಪ್ರಾಚೀನ ಕಾಲದಲ್ಲಿ ಒಂದು ಊರಿನಿಂದ ಇನ್ನೊಂದು ಊರಿಗೆ ಹೋದಾಗ ಉಳಿದುಕೊಳ್ಳಲು ದೇವಾಲಯ ಅಥವಾ ಧರ್ಮಶಾಲೆಗಳಲ್ಲಿ ವ್ಯವಸ್ಥೆ ಮಾಡಲಾಗುತ್ತಿತ್ತು. ಪ್ರಸ್ತುತ ಲಾಡ್ಜ್‌ನಂತ ದುಡ್ಡು ಪಾವತಿಸಿ ಇರಬಲ್ಲ ವ್ಯವಸ್ಥೆ ಕಂಡುಬಂದಿದೆ.

ಕನ್ನಡದಲ್ಲಿ ಮನೆಯ ಭಾಗಗಳನ್ನು ಗುರುತಿಸಲು ಅಡುಗೆ ಮನೆ, ಪಡಸಾಲೆ, ಅಂಕಣ, ಹಿತ್ತಲು ಇತ್ಯಾದಿ ಪದಗಳಿಗೆ ಸಂವಾದಿಯಾಗಿ ಬೆಡ್‌ರೂಮ್, ಬಾತ್‌ರೂಮ್, ಡೈನಿಂಗ್ ಹಾಲ್, ಕಿಚನ್ ಇತ್ಯಾದಿ ಪದಗಳು ಬಳಕೆಗೆ ಬಂದವು. ಮನೆಯ ಇತರೇ ಭಾಗಗಳನ್ನು ಗುರುತಿಸುವ ಅನೇಕ ಪದಗಳು ಇಂಗ್ಲಿಶನಿಂದ ಸ್ವೀಕರಿಸಲಾಗಿದೆ. ಉದಾ.

ವರಾಂಡ್

ಕಂಪೌಂಡ್

ಪಾರ್ಕಿಂಗ್

ಗಾರ್ಡನ್

ಇತ್ಯಾದಿ. ಮನೆ ಅಥವಾ ಕಟ್ಟಡವನ್ನು ನಿರ್ಮಿಸಲು ಮಣ್ಣು, ಕಲ್ಲು, ಗಾರೆ ಇತ್ಯಾದಿಗಳ ಬಳಕೆಯಾಗುತ್ತಿತ್ತು. ಈಗ ಪ್ರಸ್ತುತ ಕಾಂಕ್ರೀಟ್, ಸಿಮೆಂಟ್‌ಗಳಂತ ಪದಗಳು ಬಳಕೆಯಲ್ಲಿವೆ.

ವಸತಿಗೆ ಸಂಬಂಧಪಟ್ಟ ವಿಷಯಗಲ್ಲಿ ಪಿಠೋಪಕರಣಗಳು ಕೂಡ ತುಂಬಾ ಮಹತ್ವದ ಸ್ಥಾನ ಪಡೆದಿವೆ. ಪ್ರಾಚೀನ ಕಾಲದಲ್ಲಿ ಇದ್ದ ಪೀಠೋಪಕರಣದ ಬಗ್ಗೆ ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ಆದರೇ ಅರಬ್ಬಿ, ಪಾರಸಿ ಮತ್ತು ಇಂಗ್ಲಿಶನಿಂದ ಸ್ವೀಕರಿಸಿದ ಅನೇಕ ಪದಗಳು ಕನ್ನಡ ಪದಕೋಶದ ಭಾಗವಾಗಿವೆ. ಉದಾ.

ಆಲುಮಾರು

ಕಪಾಟ್

ಕುರ್ಚಿ

ಸಂದೂಕ್

ಮೇಜು

**ಇಂಗ್ಲಿಶ್**

ಚೇರ್

ಟ್ರಂಕ್

ಟೇಬಲ್

ಟೀಪಾಯ್

ಡೆಸ್ಕ್

ಸೋಫಾ

ಇತ್ಯಾದಿ ಪದಗಳು ಬಳಕೆಯಲ್ಲಿವೆ. ಚೇರ್‌ನಲ್ಲಿ ಡೈನಿಂಗ್ ಚೇರ್, ಸ್ಟಡಿ ಚೇರ್, ಫೋಲ್ಡಿಂಗ್ ಚೇರ್ ಮತ್ತು ಟೇಬಲ್‌ನಲ್ಲಿ ಡೈನಿಂಗ್ ಟೇಬಲ್ ಇಂತ ಪದಗಳು ಬಳಕೆಯಲ್ಲಿವೆ.

ಆಧುನಿಕ ವಸತಿ ವ್ಯವಸ್ಥೆಯಲ್ಲಿ ಪ್ರತ್ಯೇಕ ಕೋಣೆಯ ಪರಿಕಲ್ಪನೆ ಹೆಚ್ಚು ಪ್ರಚಲಿತವಿದೆ. ಹೀಗಾಗಿ ಪ್ರತಿ ವ್ಯವಸ್ಥೆಗೆ ಸಂಬಂಧಿಸಿದ ಅನೇಕ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ.

ಭಾರತೀಯರಲ್ಲಿದ್ದ ವಿವಿಧ ಹಾಸುವ ಮತ್ತು ಹೊದೆಯುವ ವಸ್ತುಗಳಿಗೆ ಸಂಬಂಧಿಸಿದ ಪರಿಕಲ್ಪನೆಯ ಜೊತೆಗೆ ಸ್ವೀಕರಣ ಪದಗಳು ಕನ್ನಡ ಪದಕೋಶದ ಭಾಗವಾಗಿವೆ. ಉದಾ.

ಚಾರಪಾಯ್

ಚಾದರ್

ಜಮಖಾನ

ತಕ್ಕೆ

**ಇಂಗ್ಲಿಶ್**

ಬೆಡ್

ಬೆಡ್‌ಶೀಟ್

ಬ್ಲಾಂಕೆಟ್

ಕಾರ್ಪೆಟ್

ರಗ್

ಕುಶನ್, ಇತ್ಯಾದಿ ಪದಗಳು ಬಳಕೆಗೆ ಬಂದಿವೆ.

ಆಧುನಿಕ ಕಾಲದಲ್ಲಿ ವಸತಿಗೆ ಸಂಬಂಧಿಸಿದ ಪದಗಳಲ್ಲಿ ಹೆಚ್ಚಿನವು ಸ್ವೀಕರಣದಿಂದ ಬಂದ ಪದಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಈ ವಲಯದಲ್ಲಿ ಇಂಗ್ಲಿಶ್ ಭಾಷೆಯ ಪದಗಳು ಹೆಚ್ಚು ಸ್ವೀಕರಣವಾಗಿ ಬಂದಿರುವುದು ಕಾಣಬಹುದಾಗಿದೆ.

### ೪.೭ ಮನೋರಂಜನೆ

ಮನೋರಂಜನೆ ಮಾನವರ ಜೀವನದ ಬಹುಮುಖ್ಯವಾದ ಅಂಗವಾಗಿದೆ. ಮಾನವರು ಆಸರಿಕೆ ಬೇಸರಿಕೆ ಕಳೆಯಲು ಹಲವು ಮಾದರಿಯ ಮನೋರಂಜನಾ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದ್ದಾರೆ. ಮಾನವರ ಜೀವನ ನಿವರ್ಹಣೆಗಾಗಿ ಇದ್ದ ಅನೇಕ ವಿಷಯಗಳು ಕೆಲವು ಸಂದರ್ಭಗಳಲ್ಲಿ ಮನೋರಂಜನೆಗಾಗಿ ನಿರ್ವಹಿಸುವ ಸ್ಥಿತಿಗಳು ಕಂಡು ಬರುತ್ತವೆ. ಇಂತಹ ಸ್ಥಿತಿಗಳೇ ಅನೇಕ ಮನೋರಂಜನಾ ಮಾದರಿಗಳ ಹುಟ್ಟಿಗೆ ಕಾರಣವೂ ಆಗಿವೆ. ಎಷ್ಟೋ ಸಂದರ್ಭಗಳಲ್ಲಿ ಇಬ್ಬರ ನಡುವಿನ ಬಲಾಬಲ ಅಥವಾ ಚಾಣಾಕ್ಷತನವನ್ನು ಪರೀಕ್ಷಿಸಲು ನಡೆಯುವ ಕೆಲಸಗಳು ಕಾಲಾಂತರದಲ್ಲಿ ಮನೋರಂಜನೆಯ ವಿಷಯವಾಗಿ ಪರಿಣಮಿಸಬಹುದು. ಮನೋರಂಜನೆಯನ್ನು ಮುಖ್ಯವಾಗಿ ಬೇಸರಿಕೆ ಕಳೆಯುವ ಮತ್ತು ಶಕ್ತಿ ಅಥವಾ ಚಾಣಾಕ್ಷತೆಗಳನ್ನು ತೋರಿಸಿಕೊಳ್ಳುವ ಸಲುವಾಗಿ ನಿರ್ವಹಿಸುವಂತವು ಎಂದು ಎರಡು ಬಗೆಯಲ್ಲಿ ವಿಂಗಡಿಸಬಹುದು.

ಪ್ರಾಚೀನ ಭಾರತೀಯರಲ್ಲಿ ಮನೋರಂಜನೆಗೆ ಸಂಬಂಧಿಸಿ ಗಮನಿಸುವುದಾದರೆ ಮುಖ್ಯವಾಗಿ ಬೇಟೆಯಾಡುವುದು, ಶಕ್ತಿ ಪ್ರದರ್ಶನಕ್ಕಾಗಿ **ಮಲ್ಲಯುದ್ಧ, ಜಲಯುದ್ಧ** ಮತ್ತು **ದೃಷ್ಟಿಯುದ್ಧ**ದಂತ ಆಟಗಳ ಉಲ್ಲೇಖಗಳು ಸಾಹಿತ್ಯ ಗ್ರಂಥಗಳು, ಶಾಸನಗಳಿಂದ ತಿಳಿದು ಬರುತ್ತದೆ. ಪ್ರಾಚೀನ ದಾಖಲೆಗಳಲ್ಲಿ ಹೆಚ್ಚು ಉಲ್ಲೇಖ ಸಿಗುವ ಇನ್ನೊಂದು ಆಟವೆಂದರೆ ಪಗಡೆಯಾಟ. ಈ ಆಟಗಳು ಬಿಟ್ಟರೇ ಉಳಿದಂತೆ ಜಾನಪದ ಆಟಗಳು ಪ್ರಾಚೀನ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಸಾಧ್ಯತೆಗಳು ಇದ್ದರೂ ಅವುಗಳ ಉಲ್ಲೇಖಗಳು ಕಡಿಮೆಯೇ. ಪ್ರದರ್ಶನ ಕಲೆಯಾದ ನಾಟಕವು ಭಾರತೀಯರಲ್ಲಿ ಬಹು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿರುವುದಕ್ಕೆ ನಮಗೆ ಅನೇಕ ನಾಟಕ ಕೃತಿಗಳು ಲಭ್ಯವಾಗಿರುವುದೇ ಸಾಕ್ಷಿಯಾಗಿದೆ. ಇವುಗಳಲ್ಲದೇ ಅನೇಕ ಕೃತಿಗಳಲ್ಲಿ ವಿವಿಧ ಸಮುದಾಯಗಳಲ್ಲಿ

ಆಚರಣೆಯಲ್ಲಿದ್ದ ಕಲೆಗಳ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಆನಂತರ ಕಾಲದಲ್ಲಿ ಮನೋರಂಜನೆಯನ್ನು ಸೂಚಿಸುವ ಪದಗಳನ್ನು ವಿವಿಧ ಭಾಷೆಗಳಿಂದ ಸ್ವೀಕರಿಸಿಕೊಳ್ಳಲಾಗಿದೆ.

**ಅರಬ್ಬಿ**

ಜಲಸಾ

ತಮಾಸೆ

ಮೋಜು

**ಪಾರಸಿ**

ಜಾದು

ನಕಲಿ

**ಇಂಗ್ಲಿಶ್**

ಕ್ಯಾಬರೆ

ಡ್ಯಾನ್ಸ್

ಡ್ರಾಮಾ

ಮ್ಯಾಜಿಕ್

ಸಿನಿಮಾ

ಸರ್ಕಸ್ಸು

ಕಾಮಿಡಿ

ಇತ್ಯಾದಿ, ಪದಗಳು ನಡುಗನ್ನಡ ಮತ್ತು ಹೊಸಗನ್ನಡ ಕಾಲದಲ್ಲಿ ಸ್ವೀಕರಣದಿಂದ ಬಂದ ಮನೋರಂಜನೆಯನ್ನು ಸೂಚಿಸುವ ಪದಗಳಾಗಿವೆ. ಆಧುನಿಕ ಕಾಲದಲ್ಲಿ ಮನೋರಂಜನೆಗಾಗಿ ಮಾಡಿಕೊಂಡ ವ್ಯವಸ್ಥೆಗಳಲ್ಲಿ ಸಿನಿಮಾ ತುಂಬಾ ಮುಖ್ಯವಾದದ್ದು. ಸಿನಿಮಾವನ್ನು ಮೂವಿ ಎನ್ನುವ ಪದದಿಂದಲೂ ಗುರುತಿಸಲಾಗುತ್ತದೆ. ಕನ್ನಡದಲ್ಲಿ ಇದನ್ನ ಚಲನಚಿತ್ರ ಎಂದು ಅನುವಾದಿಸಿಕೊಳ್ಳಲಾಗಿದೆ. ಈ ಹಿಂದೆ ನಾಟಕಗಳ ಪ್ರದರ್ಶನಕ್ಕೆ ಇರುವ ಸ್ಥಳವನ್ನು ಥೇಟರ್ ಎಂದು ಕರೆಯಲಾಗುತ್ತಿತ್ತು. ಅದು ಸಿನೇಮಾ ಪ್ರದರ್ಶನಕ್ಕೆ ಬಂದಾಗ **ಸಿನಿಮಾ ಥೇಟರ್, ಮೂವಿ ಹಾಲ್, ಟಾಕಿಸ್** ಪದಗಳು ಬಳಕೆಗೆ ಬಂದವು ಈ ಮಾದರಿಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದವು ಮತ್ತು ಇದನ್ನ ಕನ್ನಡದಲ್ಲಿ ಚಲನಚಿತ್ರ ಮಂದಿರ ಎಂದು ಅನುವಾದಿಸಲಾಗಿದೆ. ನಾಟಕಗಳ ಹಾಗೆಯೆ ಇಲ್ಲಿಯೂ ಕೂಡ ನಾಯಕ, ನಾಯಕಿ, ಖಳನಟ/ನಾಯಕ, ಮತ್ತು ಪೋಷಕ ಪಾತ್ರಗಳು ಇರುತ್ತವೆ. ಇವುಗಳಿಗೆ ಪರ್ಯಾಯವಾಗಿ **ಹೀರೋ, ಹೀರೋಯಿನ್, ವಿಲ್ಲನ್ ಸ್ಟಾರ್,** ಇಂತಹ ಪದಗಳು ಸ್ವೀಕರಣವಾಗಿ ಬಂದಿವೆ.

ಮನೋರಂಜನೆಯಲ್ಲಿ ಸಿನೇಮಾದಷ್ಟೇ ಮಹತ್ವ ಪಡೆದಿರುವುದು **ಸಂಗೀತ**. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಸಂಗೀತಕ್ಕೆ ತುಂಬಾ ಮಹತ್ವದ ಸ್ಥಾನವಿದೆ. ಅನೇಕ ರಾಜರುಗಳು ಸಂಗೀತ ಪ್ರಿಯರಾಗಿದ್ದಕ್ಕೆ ದಾಖಲೆಗಳು ಸಿಗುತ್ತವೆ. ಸಂಗಿತವೆಂದರೆ **ಗಾಂಧರ್ವ, ನೃತ್ಯ, ನಾಟ್ಯ, ನರ್ತನ** ಮೊದಲಾದವುಗಳನ್ನು ಒಳಗೊಂಡದ್ದಾಗಿದೆ. ಭಾರತದಲ್ಲಿ ಸಂಗೀತದ ಎರಡು ಕವಲುಗಳು ಕಂಡು ಬಂದಿವೆ. ಒಂದು ಹಿಂದೂಸ್ಥಾನಿ ಸಂಗೀತ, ಎರಡು ಪುರಂದರದಾಸರಿಂದ ಪ್ರಾರಭವಾದ ಕರ್ನಾಟಕ ಸಂಗೀತ. ಸುಮಾರು ಹದಿನಾರು – ಹದಿನೇಳನೆಯ ಶತಮಾನದವರೆಗೂ ಸಂಸ್ಕೃತಮಯವಾಗಿದ್ದ ಈ ಎರಡು ಸಂಗೀತ ಪ್ರಕಾರಗಳು ಮುಸ್ಲಿಂ ಆಸ್ಥಾನಗಳಲ್ಲಿ ರಾಜಾಶ್ರಯ ಪಡೆದಾಗಿನಿಂದ ಇದರಲ್ಲಿ ಅನೇಕ ಪಾರಸಿ, ಅರಬ್ಬಿ, ಉರ್ದು ಮತ್ತು ಆನಂತರ ಇಂಗ್ಲಿಶ್ ಪದಗಳು ಸ್ವೀಕರಣವಾಗಿ ಸೇರಿಕೊಂಡವು.

**ಅರಬ್ಬಿ**

ತಂಬೂರಿ

ತಬಲಾ

ತಾಸೆ/ತಾಶಾ

ನಗಾರಿ

**ಪಾರಸಿ**

ಕಮಾನಿ

ಕರಣಿ

ಬೀಜು

ಡಪ್ಪ

ಡಪಾಲಿ

ನೌಬತ್

ಸಿತಾರ

ಮೋರ್ಜಿಂಗ

ಶಹನಾಯಿ

ಸರೋದ್

ಸಾರಂಗಿ

ಪಖ್ವಾಜ್

**ಇಂಗ್ಲಿಶ್**

ಗಿಟಾರ್

ಪಿಟೀಲು

ಪಿಡ್ಲ
ಹಾರ್ಮೋನಿಯಮ್
ಕೀಬೋರ್ಡ್
ಪಿಯಾನೋ
ಡ್ರಮ್ ಸೆಟ್
ವೈಲಿನ್
ಪ್ರೇಕ್ಯೂಸಿಯನ್
ಸ್ಯಾಕ್ಸೋ ಪೋನ್
ಸೆಲ್ಲೋ
ಕ್ಲಾರಿನೆಟ್
ಟ್ರಮ್‌ಪೆಟ್
ಹಾರ್ಪ್
ಇತ್ಯಾದಿ.

ಸಂಗೀತ ಅಭ್ಯಾಸ ಮಾಡುವ ವಿದ್ಯಾರ್ಥಿಗೆ **ಮುರೀದ್** ಮತ್ತು ಕಲಿಸುವ ಗುರುವಿಗೆ **ಉಸ್ತಾದ್** ಎನ್ನುವ ಪದಗಳು ಸ್ವೀಕರಣವಾಗಿವೆ. ಪಾಶ್ಚಿಮಾತ್ಯ ಸಂಗೀತ ಭಾರತಕ್ಕೆ ಪರಿಚಯವಾದ ಮೇಲೆ ಅಲ್ಲಿಯ ಅನೇಕ ಪದಗಳು ಕನ್ನಡಕ್ಕೆ ಸ್ವೀಕರಣವಾಗಿವೆ.

ಆಟಗಳು ಮಾನವ ಜೀವನದ ಅವಿಭಾಜ್ಯ ಅಂಗವಾಗಿವೆ. ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಅನೇಕ ಆಟಗಳ ಉಲ್ಲೇಖ ಸಿಗುತ್ತದೆ. ಅವುಗಳಲ್ಲಿ **ಪಗಡೆ, ಅಷ್ಟಪಾದ, ಪರಮಪಾದ, ಚದುರಂಗ, ಕಬ್ಬಡಿ** ಇತ್ಯಾದಿ ಪ್ರಮುಖವಾದವುಗಳು. ಇವುಗಳಲ್ಲದೇ ಅನೇಕ ಶಕ್ತಿ ಪ್ರದರ್ಶಕ ಆಟಗಳು ಪ್ರಾಚೀನ ಜನಪದರಲ್ಲಿ ಇದ್ದವು. ಆಧುನಿಕ ಕಾಲದಲ್ಲಿ ಪಾಶ್ಚಿಮಾತ್ಯರ ಪ್ರಭಾವದಿಂದ ಅನೇಕ ಆಟಕ್ಕೆ ಸಂಬಂಧಿಸಿದ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಸೇರಿವೆ. ಉದಾ.

**ಅರಬ್ಬಿ**

ಕುಸ್ತಿ

**ಇಂಗ್ಲಿಶ್**

ಈಕ್ವೆಸ್ಟ್ರಿಯನ್
ಕೇರಮ್
ಕ್ರಿಕೆಟ್
ಗಾಲ್ಫ್

ಚೆಸ್
ಜಾವಲಿನ್ ಥ್ರೋ
ಜೂಡೋ
ಟೆನ್ನಿಸ್
ಟೇಬಲ್ ಟೆನ್ನಿಸ್
ಟ್ರಿಪಲ್ ಜಂಪ್
ಡಿಸ್ಕಸ್ ಥ್ರೋ
ಥ್ರೋ ಬಾಲ್
ಪೋಲೋ
ಬಾಕ್ಸಿಂಗ್
ಬಿಲಿಯರ್ಡ್ಸ್
ಬ್ಯಾಡ್ಮಿಂಟನ್
ಮ್ಯಾರಥಾನ್
ರಗ್ಬಿ
ರನ್ನಿಂಗ್
ರೋಯಿಂಗ್
ಲಾಂಗ್ ಜಂಪ್
ವಾಟರ್ ಪೋಲೋ
ವಾಲಿಬಾಲ್
ವೇಯ್ಟ್ ಲಿಫ್ಟಿಂಗ್
ಶಾಟ್ ಬಾಲ್
ಶೂಟಿಂಗ್
ಶೆಟಲ್ ಕಾಕ್
ಸಾಕರ್
ಸೈಕ್ಲಿಂಗ್
ಸ್ನೂಕರ್
ಹಾಕಿ
ಹೈಜಂಪ್
ಹ್ಯಾಂಡ್‌ಬಾಲ್

ಇತ್ಯಾದಿ ಹೊಸ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ. ಈ ಆಟಗಳಲ್ಲಿ ಭಾಗವಹಿಸುವ ಆಟಗಾರರನ್ನು ಗುರುತಿಸುವ ಪದಗಳು ಸ್ವೀಕರಿಸಲಾಗಿದೆ, ಉದಾ.

**ಪಾರಸಿ**

ಪೈಲ್ವಾನ

**ಇಂಗ್ಲಿಶ್**

ಅಂಪೈಯರ್

ಅಥ್ಲೆಟಿಕ್

ಕೋಚ್

ಫಾಸ್ಟ್ ಬೌಲರ್

ಪ್ಲೇಯರ್

ಬೌಲರ್

ಬ್ಯಾಟ್ಸಮನ್

ಕ್ಯಾಪ್ಟನ್

ವೈಸ್ ಕ್ಯಾಪ್ಟನ್

ರೆಫರಿ

ಸ್ಟ್ರೈಕರ್

ಸ್ಪಿನ್ನರ್

ಓಪನರ್ ಇತ್ಯಾದಿ, ಈ ಪದಗಳೊಂದಿಗೆ ಆಟದ ಅಂಕಣವನ್ನು ಸೂಚಿಸುವ ಪದಗಳು ಕೂಡ ಕನ್ನಡದಲ್ಲಿ ಸ್ವೀಕರಿಸಿಕೊಳ್ಳಲಾಗಿದೆ. ಉದಾ.

**ಪಾರಸಿ**

ಮೈದಾನ

**ಇಂಗ್ಲಿಶ್**

ಸ್ಟೇಡಿಯಂ

ರಿಂಗ್

ಪೆವಿಲಿಯನ್

ಟೆನ್ನಿಸ್ ಕೋರ್ಟ್

ಡರ್ಟ್‌ಟ್ರ್ಯಾಕ್

ಕ್ಲಬ್

ಗ್ರೌಂಡ್, ಇತ್ಯಾದಿ. ಪಂದ್ಯದ ವಿವಿಧ ಹಂತಗಳನ್ನು ಗುರುತಿಸಲು

ಲೀಗ್ ಮ್ಯಾಚ್

ಸೂಪರ್ ಎಯ್ಟ್

ಕ್ವಾಟರ್ ಫೈನಲ್

ಸೆಮಿಫೈನಲ್

ಫೈನಲ್ ಇಂತಹ ಪದಗಳು ಕಂಡುಬಂದಿವೆ. ಈ ಪದಗಳನ್ನು ಲೀಗ್ ಹಂತ, ಎಂಟರ ಘಟ್ಟ, ಉಪಾಂತ್ಯ, ಅಂತಿಮ ಪಂದ್ಯ ಹೀಗೆ ಅನುವಾದಿಸಿ ಬಳಸಲಾಗುತ್ತದೆ. ಈ ಅನುವಾದ ಪದಗಳು ಪತ್ರಿಕೆಗಳಲ್ಲಿ ಮಾತ್ರ ಬಳಸಲಾಗುತ್ತದೆ. ವಿವಿಧ ಮಾದರಿಯ ಪಂದ್ಯ ಸಂಯೋಜನೆಗಳನ್ನು ಗುರುತಿಸುವ ಪದಗಳನ್ನು ಸ್ವೀಕರಿಸಿಕೊಳ್ಳಲಾಗಿದೆ. ಉದಾ.

ಟೂರ್ನಿ

ಟೂರ್ನಮೆಂಟ್

ಏಷಿಯನ್ ಗೇಮ್ಸ್

ಕಾಮನ್‌ವೆಲ್ತ್

ಒಲಂಪಿಕ್ಸ್

ಗ್ರಾಂಡ್ ಪ್ರೀ

ಗ್ರಾಂಡ್ ಸ್ಲಾಮ್

ವಿಂಬಲ್ಡನ್

ವರ್ಲ್ಡ್‌ಕಪ್

ಇತ್ಯಾದಿ. ಆಟಗಳಲ್ಲಿ ಗೆದ್ದವರಿಗೆ ಕೊಡುವ ಬಹುಮಾನಗಳನ್ನು ಗುರುತಿಸುವ ಕಪ್, ಗೋಲ್ಡ್‌ಮೆಡಲ್, ಚಾಂಪಿಯನ್, ಚಾಲೆಂಜರ್, ಟ್ರೋಫಿ ಪದಗಳು ಬಳಸಲಾಗುತ್ತದೆ. ಇವುಗಳಲ್ಲದೇ ಆಟಗಳಿಗೆ ಸಂಬಂಧಿಸಿದ ಅನೇಕ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ. ಉದಾ.

ಓವರ್

ಔಟ್

ಕೀಪಿಂಗ್

ಕ್ಯಾಚ್

ಕ್ರಾಸ್ ಬಾಲ್

ಗೂಗ್ಲಿ

ಗೋಲ್

ಗ್ಲೌಸ್

ಟಾಸ್
ಟೀಮ್
ಟೆಸ್ಟ್ ಮ್ಯಾಚ್
ಟೈ
ಟೈಬ್ರೇಕರ್
ಡಬಲ್ ಸೆಂಚೂರಿ
ಡಬಲ್ಸ್
ಡೆಡ್‌ಬಾಲ್
ಡ್ರಾ
ನೆಟ್
ನೋಬಾಲ್
ಪಂಚ್
ಪಿಚ್
ಪೆನಾಲ್ಟಿ
ಫಾರ್ಮ್
ಫಿಟ್‌ನೆಸ್
ಫೀಲ್ಡಿಂಗ್
ಫೋರ್
ಬಾಲ್
ಬೀಟ್
ಬೈಸ್
ಬೋನಸ್
ಬೋಲ್ಡ್
ಬೌಂಡರಿ
ಬ್ಯಾಟ್
ಮ್ಯಾಚ್
ರನ್ (ಓಟ)
ರನ್ನೌಟ್

ರನ್ ರೇಟ್

ರೌಂಡ್

ರ್‍ಯಾಂಕಿಂಗ್

ಲೆಗ್‌ಬೈ

ವಿಕೆಟ್

ವಿನ್ನರ್

ಸರ್ವ್

ಸರ್ವಿಸ್

ಸಿಂಗಲ್

ಸಿಕ್ಸರ್

ಸೀರಿಸ್

ಸೆಂಚೂರಿ

ಸೆಟ್

ಸ್ಕೋರ್

ಸ್ಕೋರ್ ಬೋರ್ಡ್

ಸ್ಟಂಪ್

ಸ್ಟಿಕ್

ಸ್ಟ್ರೋಕ್

ಸ್ಪೋರ್ಟ್ಸ್

ಸ್ಲೀಪ್

ಸ್ವಿಂಗ್

**ಅರಬ್ಬಿ**

ಕಸರತ್ತು

ತಾಲೀಮು

ಇತ್ಯಾದಿ ಸ್ವೀಕರಣದಿಂದ ಬಂದ ಪದಗಳನ್ನು ಪಟ್ಟಿ ಮಾಡಬಹುದು. ಈ ಪದಗಳಲ್ಲಿ ಕೆಲವು ಪದಗಳನ್ನು ಕನ್ನಡಕ್ಕೆ ಅನುವಾದ ಮಾಡಿಕೊಳ್ಳಲಾಗಿದೆ. ಉದಾ.

ಕ್ರೀಡಾಪಟು/ಕ್ರೀಡಾಳು

ಮನವಿ

ನಿರ್ಣಾಯಕ

ಪಾಳಿ/ಸರದಿ

ಬದಲಿ ಆಟಗಾರ

ಏಕದಿನ ಪಂದ್ಯ

ವೀಕ್ಷಕ ವಿವರಣೆ

ಅಂಗಳ

ತರಬೇತುದಾರ

ನಾಯಕ

ಸ್ವರ್ಣಪದಕ/ಬಂಗಾರಪದಕ/ಚಿನ್ನದಪದಕ

ಬರ್ಚಿ ಎಸೆತ

ತಂಡ

ದ್ವಿಶತಕ

ಚಕ್ರ ಎಸೆತ

ಔಟಾಗದೆ

ಜೊತೆಯಾಟ

ಅಭ್ಯಾಸ

ಅಂಕಣ

ಆಟಗಾರ

ವೇಗಿ

ಕ್ಷೇತ್ರರಕ್ಷಕರು

ಅಂತಿಮ ಪಂದ್ಯ

ಚೆಂಡು/ಎಸೆತ

ದಾಂಡು

ದಾಂಡಿಗ

ಸೀಮಾರೇಖೆ

ಪಂದ್ಯ ಪುರುಷ

ಸರಣಿ ಪುರುಷ

ಪಂದ್ಯ

ಓಟ

ಓಟಗಾರ

ಅಖಾಡಾ

ಶ್ರೇಯಾಂಕ

ಸುತ್ತು

ಉದ್ದ ಜಿಗಿತ

ವಿಶ್ವಕಪ್

ವಿಶ್ವದಾಖಲೆ

ಗೂಟ

ಗೂಟರಕ್ಷಕ

ಉಪನಾಯಕ

ಗುಂಡು ಎಸೆತ

ಸರಣಿ

ಉಪಾಂತ್ಯ

ಮೈದಾನ

ಅಂಕ/ಮೊತ್ತ

ಶತಕ

ಎಂಟರ ಘಟ್ಟ

ಅರ್ಧಶತಕ

ಎತ್ತರ ಜಿಗತ ಇತ್ಯಾದಿ,

ಮನೋರಂಜನೆಗೆ ಸಂಬಂಧಿಸಿದಂತೆ ಹೆಚ್ಚು ಪದಗಳು ಇಂಗ್ಲಿಶಿನಿಂದ ಸ್ವೀಕರಿಸಿಕೊಳ್ಳಲಾಗಿದೆ. ಅಥವಾ ಇತರೆ ಭಾಷೆಗಳ ಪದಗಳು ಬಳಕೆಯಿಂದ ಹಿನ್ನೆಲೆಗೆ ಸರಿದಿರುವ ಸಾಧ್ಯತೆಗಳು ಹೆಚ್ಚಾಗಿವೆ.

**೪.೮ ವೈದ್ಯಕೀಯ**

ಕರ್ನಾಟಕದ ವೈದ್ಯಕೀಯ (ಎಂದರೆ ಆಯುರ್ವೇದದ) ಇತಿಹಾಸವನ್ನು ನೋಡುವುದಾದರೆ, ಕರ್ನಾಟಕದ ಉತ್ತರ ಭಾಗ ಅಶೋಕನ ರಾಜ್ಯದಲ್ಲಿದ್ದುದರಿಂದ ಆತ ಸ್ಥಾಪಿಸಿದ್ದ ಮನುಷ್ಯರ ಮತ್ತು ಪಶುಗಳ ಔಷಧಾಲಯಗಳು ಈ ಪ್ರದೇಶದಲ್ಲಿ ಇದ್ದಿರಬಹುದೆಂದು ಊಹಿಸಿ ಕರ್ನಾಟಕದ ವೈದ್ಯ ಇತಿಹಾಸವನ್ನು ಕ್ರಿ.ಶ.ಪೂ. ೨೬೦ರಿಂದ ಪ್ರಾರಂಭಿಸಬಹುದು. ರಸಾಯನ ಮತ್ತು ಲೋಹಶಾಸ್ತ್ರಗಳ

ಪಿತನೆಂಬ ಗೌರವಕ್ಕೆ ಪಾತ್ರನಾಗಿದ್ದ, ಸಾತವಾಹನರ ಕಾಲದ ಬೌದ್ಧಬಿಕ್ಷು ನಾಗಾರ್ಜುನ ರಸಾಯನ ಪ್ರಯೋಗಗಳಲ್ಲಿ ತೊಡಗಿದ್ದ. ರಸರತ್ನಾಕರ, ಲೋಹಶಾಸ್ತ್ರ ಮುಂತಾದ ವೈದ್ಯಗ್ರಂಥಗಳನ್ನು ಬರೆದ ಈತನನ್ನು ಕರ್ನಾಟಕದ ಪ್ರಥಮ ವೈದ್ಯವ್ಯಕ್ತಿ ಎನ್ನಬಹುದಾಗಿದೆ. ಶಾತವಾಹನರ ಅನಂತರ ರಾಜ್ಯ ಕಟ್ಟಿದ ಗಂಗರ ಅರಸ ದುರ್ವಿನೀತನ (೬೦೫-೬೫೦) ಗುರುವಾಗಿದ್ದ ದಿಗಂಬರ ಜೈನ ಯತಿ ಪೂಜ್ಯಪಾದ ವೈದ್ಯಶಾಸ್ತ್ರದಲ್ಲಿಯೂ ಪಂಡಿತನಾಗಿದ್ದ. ಇವನು ಬರೆದ ಕಲ್ಯಾಣಕಾರಕ ಎಂಬ ಸಂಸ್ಕೃತ ವೈದ್ಯಗ್ರಂಥವನ್ನು ಮುಂದಿನ ಎಲ್ಲ ವಿದ್ವಾಂಸರೂ ಗೌರವದಿಂದ ಸ್ಮರಿಸಿದ್ದಾರೆ.

ಆಯುರ್ವೇದದ ಅಧ್ಯಯನ ಅಧ್ಯಾಪನಗಳು ದೇವಾಲಯಗಳಲ್ಲಿ ಇರುತ್ತಿದ್ದ ಪಾಠ ಶಾಲೆಗಳಲ್ಲಿ ನಡೆಯುತ್ತಿದ್ದವು. ಅವುಗಳ ನಿರ್ವಹಣೆಗಾಗಿ ರಾಜರು ಭೂಮಿ ಮತ್ತು ಕರ್ನಾಟಕದಲ್ಲಿ ವೈದ್ಯ ಗ್ರಾಮಗಳನ್ನು ದೇವಾಲಯಗಳ ಹೆಸರಿನಲ್ಲಿ ದಾನ ಮಾಡುತ್ತಿದ್ದರು. ಶಾಸ್ತ್ರಜ್ಞರಾದ ವೈದ್ಯರನ್ನು ರಾಜಾಸ್ಥಾನದಲ್ಲಿ ನೇಮಕ ಮಾಡಲಾಗುತ್ತಿತ್ತು. ವೈದ್ಯರು ತಾವೇ ಗಿಡಮೂಲಿಕೆಗಳಿಂದ ಔಷಧಗಳನ್ನು ಬೇಕಾದಾಗ ತಯಾರಿಸಿ ಉಚಿತವಾಗಿ ರೋಗಿಗಳಿಗೆ ಕೊಡುತ್ತಿದ್ದರು. ಕಾಷ್ಠೌಷಧಿಗಳು ಅದರಲ್ಲೂ ಗಿಡಮೂಲಿಕಾ ಪ್ರಯೋಗಗಳೇ ಪ್ರಾಮುಖ್ಯ ಪಡೆದಿದ್ದುವು. ಕೆಲವು ದೇವಾಲಯಗಳಲ್ಲಿ ಸಹ ಔಷಧಿಗಳನ್ನು ಜನರಿಗೆ ಉಚಿತವಾಗಿ ನೀಡಲಾಗುತ್ತಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ ಶಾಸ್ತ್ರಜ್ಞರಾದ ಅರ್ಚಕರು, ಜ್ಯೋತಿಷಿಗಳು ವೈದ್ಯ ವೃತ್ತಿಯನ್ನು ನಡೆಸುತ್ತಿದ್ದರು.

ನಡುಗಾಲದಲ್ಲಿ ವಿಜಯನಗರ ಸಾಮ್ರಾಜ್ಯದ ದಕ್ಷ ಆಡಳಿತ ಈ ಯುಗದ ಪ್ರಮುಖ ಘಟನೆ. ಈ ಅರಸರು ಪುನರುಜ್ಜೀವನಕ್ಕಾಗಿ ಮಾಡಿದ ಕಾರ್ಯಗಳಿಂದ ಪ್ರಾಚೀನ ವಿದ್ಯೆಗಳು ಬದುಕಿಕೊಂಡವು. ಹದಿನೈದನೆಯ ಶತಮಾನದವರೆಗೆ ದಕ್ಷಿಣ ಭಾರತದಲ್ಲಿ ಏಕೈಕ ವೈದ್ಯ ಪದ್ಧತಿಯಾಗಿದ್ದ ಆಯುರ್ವೇದಕ್ಕೆ ಎದುರಾಳಿಗಳಾಗಿ **ಯುನಾನಿ** ಪದ್ಧತಿ ಹದಿನಾರನೆಯ ಶತಮಾನದಲ್ಲೂ, ಐರೋಪ್ಯ ಪದ್ಧತಿ ಹದಿನೇಳನೆಯ ಶತಮಾನದಲ್ಲೂ ಕರ್ನಾಟಕಕ್ಕೆ ಬಂದು ಕ್ರಮೇಣ ನೆಲೆಯೂರಿದುವು. ಮುಸ್ಲಿಂ ಸುಲ್ತಾನರ ಕಾಲದಲ್ಲಿ ಯುನಾನಿ **ಹಕೀಮರು** ರಾಜಾಸ್ಥಾನ ಮತ್ತು ಸಮಾಜದಲ್ಲಿ ವೈದ್ಯವೃತ್ತಿಯನ್ನಾರಂಭಿಸಿದರು.

ಆಧುನಿಕ ಯುಗದಲ್ಲಿ ಬ್ರಿಟಿಶ್ ಆಡಳಿತ ಭಾರತದಾದ್ಯಂತ ಕ್ರಮ ಕ್ರಮವಾಗಿ ಹರಡಿದ ಪರಿಣಾಮವಾಗಿ ಯುರೋಪಿನ ವೈದ್ಯಪದ್ಧತಿ ರಾಜಮಾನ್ಯತೆಯನ್ನು ಪಡೆಯಿತು. ಜನಾರೋಗ್ಯ ರಕ್ಷಣಾಕ್ಷೇತ್ರದಲ್ಲಿ ಪ್ರಥಮವಾಗಿ ಕಾರ್ಯನಿರತವಾದ ಈ ಪದ್ಧತಿ ದಿನೇ ದಿನೇ ಬೆಳೆಯುತ್ತ ಇಂದು ಎಲ್ಲೆಲ್ಲಿಯೂ ರೂಢಮೂಲವಾಗಿದೆ. ಪ್ರಾಚೀನ ಆಯುರ್ವೇದಕ್ಕೆ ಇದರಿಂದ ಬಹುಮಟ್ಟಿನ ಧಕ್ಕೆ ತಗುಲಿತಾದರೂ ತನ್ನ ಅಂತಃಸತ್ತ್ವದಿಂದ ಅದು ಇಂದಿಗೂ ಉಳಿದು ತನ್ನ ವೈಶಿಷ್ಟ್ಯದಿಂದ ಜನತಾಸೇವೆಯನ್ನು ಯಥಾಶಕ್ತಿ ಸಲ್ಲಿಸುತ್ತಿದೆ.

ಪ್ರಾಚೀನ ಕಾಲದಲ್ಲಿ ಆಯುರ್ವೇ ಚಿಕಿತ್ಸಾ ಮಾದರಿಯೊಂದೇ ಬಳಕೆಯಲ್ಲಿತ್ತು ಆಧುನಿಕ ಕಾಲದಲ್ಲಿ **ಯುನಾನಿ** ಮತ್ತು **ಇಂಗ್ಲಿಶ್ ಚಿಕಿತ್ಸಾ** ಮಾದರಿಗಳು ಕಾಣಬಹುದಾಗಿದೆ. ಪ್ರಾಚೀನ ಕಾಲದಲ್ಲಿ

ಚಿಕಿತ್ಸೆ ನೀಡುವ ಸಲುವಾಗಿಯೇ ಪ್ರತ್ಯೇಕ ವ್ಯವಸ್ಥೆಯ ಕಟ್ಟಡಗಳಿದ್ದ ಬಗ್ಗೆ ಯಾವುದೇ ಮಾಹಿತಿಗಳು ಸಿಗುವುದಿಲ್ಲ. ತಮ್ಮ ಮನೆಯಿಂದಲೇ ಔಷಧೋಪಚಾರ ಮಾಡುವ ಪದ್ಧತಿ ಇತ್ತು. ಆನಂತರ ಕಾಲದಲ್ಲಿ ಔಷದೋಪಚಾರಕ್ಕಾಗಿಯೇ ಬೇರೆ ಕಟ್ಟಡಗಳ ವ್ಯವಸ್ಥೆ ಬಂದ ಮೇಲೆ ಅದನ್ನು ಗುರುತಿಸಲು **ದವಾಖಾನೆ, ಆಸ್ಪತ್ರೆ, ಹಾಸ್ಪಿಟಲ್** ಇತ್ಯಾದಿ ಪದಗಳು ಸ್ವೀಕರಿಸಿಕೊಳ್ಳಲಾಗಿದೆ. ಇಲ್ಲಿ ಚಿಕಿತ್ಸೆ ಕೊಡುವವರನ್ನು **ಆಜಾರಿ, ಡಾಕ್ಟರ್** ಎಂದು ಮತ್ತು ಇವರ ಸಹಾಯಕ್ಕಿರುವವರನ್ನು

ಆಯಾ,

ದಾದಿ

ನರ್ಸ್

ಕಾಂಪೌಂಡರ್

ಇತ್ಯಾದಿ ಪದಗಳಿಂದ ಗುರುತಿಸಲಾಗುತ್ತದೆ. **ಕಾಲರಾ, ನ್ಯೂಮೋನಿಯ, ಟೈಫಾಯಿಡ್, ಮಲೇರಿಯಾ, ಕ್ಯಾನ್ಸರ್, ಡಿಫ್ತಿರಿಯಾ, ಟೀಬಿ,** ಇಂತಹ ಅನೇಕ ಹೊಸ ಹೊಸ ಮಾದರಿಯ ಕಾಯಿಲೆಗಳಿಗೆ ಸಂಬಂಧಿಸಿದ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ. ಆಸ್ಪತ್ರೆಗೆ ಸಂಬಂಧಿಸಿದ ಇತರೆ ಸ್ವೀಕರಣ ಪದಗಳನ್ನು ಹೀಗೆ ಪಟ್ಟಿ ಮಾಡಬಹುದು.

**ಅರಬ್ಬಿ**

ಇಲಾಜು

ಕಸಾಲೆ

ತಬಿಯತ್

**ಪಾರಸಿ**

ಜುಲಾಬು

ಕಾಳಜ್

ಜಕಂ

ಜೇರು

ಡಾಕ್

**ಇಂಗ್ಲಿಶ್**

ಅಬಾಷನ್

ಅಲರ್ಜಿ

ಆಂಬುಲೆನ್ಸ್

ಆಪರೇಷನ್

ಆಸ್ತಮಾ

ಇಂಜಕ್ಷನ್

ಎಕ್ಸ್‌ರೇ

ಕ್ಲೋರೊಫಾರಂ

ಟಾನಿಕ್ಕ(ಟಾಣಿಕ್ಕು)

ಟಿಂಚರ್

ಡ್ರಗ್

ಥರ್ಮಾಮೀಟರ್

ಪೆನ್ಸಿಲಿನ್

ಬ್ಯಾಂಡೇಜ್

ಬ್ಯಾಕ್ಟೀರಿಯಾ

ಮೆಡಿಸಿನ್

ಸ್ಟೆತಾಸ್ಕೋಪ್

ಇತ್ಯಾದಿ. ಆರೋಗ್ಯ ಸಂಬಂಧಿ ವಲಯದಲ್ಲಿ ವಿವಿಧ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿಕೊಂಡಿದ್ದರೂ ಇಂಗ್ಲಿಶಿನಿಂದ ಸ್ವೀಕರಿಸಿದ ಪದಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

**೪.೯ ಕೃಷಿ**

ಭಾರತವು ಕೃಷಿ ಅವಲಂಬಿತ ದೇಶವಾಗಿದೆ. ಪ್ರಾಚೀನ ಕಾಲದಿಂದಲೂ ಕೃಷಿ ನಡೆದುಕೊಂಡು ಬಂದಿದೆ. ಭಾರತದಲ್ಲಿ ಹರಪ್ಪ, ಮೆಹಂಜೋದಾರೋ ನಾಗರಿಕತೆಗಳ ಕಾಲದಲ್ಲೇ ವ್ಯವಸ್ಥಿತ ಕೃಷಿ ಚಟುವಟಿಕೆಗಳಿದ್ದ ಬಗ್ಗೆ ಕುರುಹುಗಳು ಸಿಕ್ಕಿವೆ. ಕೃಷಿ ಚಟುವಟಿಕೆಯಲ್ಲೂ ಕಾಲದಿಂದ ಕಾಲಕ್ಕೆ ಬದಲಾವಣೆಗಳು ಕಂಡು ಬಂದಿವೆ. ಬೇರೆ ಬೇರೆ ದೇಶಿಯ ಜನರ ಆಗಮನವು ಅನೇಕ ಹೊಸ ಕೃಷಿ ಮಾದರಿಗಳು ಬಳಕೆಗೆ ಬರಲು ಕಾರಣವಾಗಿವೆ. ಇದರೊಂದಿಗೆ ಅನೇಕ ಹೊಸ ತಳಿಯ ಬೆಳೆಗಳು, ಹೊಸ ಉಪಕರಣಗಳು ಬಳಕೆಗೆ ಬಂದು ಅವುಗಳನ್ನು ಗುರುತಿಸುವ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ.

**ಪಾರಸಿ**

ಅನಾಜು

ಅಬಾದು

ಕರ್ದಾದಾರ

ಕಿಸಾನ

ಕುಷ್ಕಿ

ಖರೀಪ
ಚಕಬಂದಿ
ಚಮನ
ಜಟರ
ಜಮೀನ್
ಜಹಗೀರ
ತರಿ
ದಾಸ್ತಾನು
ಪೈಮಾಯಿಸಿ
ರೈತ
ರೈತಾಪಿ

**ಅರಬ್ಬಿ**

ಅಂಬಾರ
ಇರಸಾಲ
ಕರಾಬ
ಕಸಿ
ಜಕಾತಿ
ಜಿನಸು
ತರಮು

**ಪೋರ್ಚುಗೀಸ್**

ಗಡಾಂಗ
ಗೋದಾಮ

**ಇಂಗ್ಲಿಶ್**

ಎಕರೆ
ಕಾಂಪೋಸ್ಟ್
ಪಂಪು
ಲೇವಿ
ಹೈಬ್ರಿಡ್
ಬೋರ್

ಇತ್ಯಾದಿ ಪದಗಳು ಕಂಡು ಬಂದವು. ರಾಸಾಯನಿಕ ಗೊಬ್ಬರ, ಹನಿ ನೀರಾವರಿ, ಕೊಳವೆ ಬಾವಿ ಇಂತಹ ಹೊಸಪದಗಳು ಕನ್ನಡದಲ್ಲಿ ರಚನೆಗೊಂಡಿವೆ. ಅನೇಕ ಹೊಸ ತರಕಾರಿಗಳು, ಹೊಸ ಹೊಸ ಧಾನ್ಯಗಳ ಹೆಸರುಗಳು ಸ್ವೀಕರಣದಿಂದ ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ.

### ೪.೬ ಸಾರಿಗೆ ಮತ್ತು ಸಂಪರ್ಕ

ಸಾರಿಗೆ ಮತ್ತು ಸಂಪರ್ಕ ಮಾನವ ಬದುಕಿನ ಅತಿ ಅವಶ್ಯಕ ಅವಶ್ಯಕತೆಗಳಲ್ಲಿ ಒಂದಾಗಿದೆ. ಮಾನವರು ತಮ್ಮ ಚಲನಶೀಲ ಬದುಕಿನ ನಿರ್ವಹಣೆಯ ಕಾಲಘಟ್ಟದಲ್ಲಿ ತನಗಿಂತ ಸಮರ್ಥ ಅಥವಾ ತನ್ನ ಶ್ರಮವನ್ನು ಕಡಿಮೆ ಮಾಡಲು ಸಾರಿಗೆ ವ್ಯವಸ್ಥೆಯನ್ನು ಕಂಡುಕೊಂಡರು. ಇದು ವಿಕಸಿತ ಮಾನವರ ಮೊದಲ ಅನ್ವೇಷಣೆಯಾಗಿರಬೇಕು. ಮಾನವರು ಮೊದಮೊದಲು ತಮ್ಮ ವಸ್ತುಗಳನ್ನು ಅಥವಾ ಸ್ವಂತ ತಾವು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಾಗಿಸುವಲ್ಲಿ ಸಾರಿಗೆ ಸಾಧನವಾಗಿ ಪ್ರಾಣಿಗಳನ್ನು ಬಳಸಿಕೊಂಡಿರಬೇಕು ಯಾಕೆಂದರೆ ಮಾನವರು ಮೊದಮೊದಲು ಪ್ರಾಣಿಗಳ ಅವಲಂಬಿಯಾಗಿದ್ದು ಕಂಡುಬಂದಿದೆ. ಚಕ್ರಗಳ ಅನ್ವೇಷಣೆ ಮಾನವ ಬದುಕಿನ ಬಹುಮುಖ್ಯ ಅನ್ವೇಷಣೆಗಳಲ್ಲಿ ಒಂದು. ಚಕ್ರ ಅನ್ವೇಷಣೆ ಸಾರಿಗೆ ವ್ಯವಸ್ಥೆಯಲ್ಲಿ ಬದಲಾವಣೆ ಕಂಡು ಬಂದು ನೇರವಾಗಿ ಪ್ರಾಣಿಗಳ ಮೇಲೆ ಹೇರಲ್ಪಡುತ್ತಿದ್ದ ವಸ್ತು ಅಥವಾ ಮಾನವರ ಬದಲಿಗೆ ಚಕ್ರ ಬಳಸಿ ಮಾಡಿದ ವಿಶೇಷ ಬಂಡಿಗಳಲ್ಲಿ ಸಾಗಿಸುವ ವ್ಯವಸ್ಥೆ ಕಂಡು ಬಂದಿತು. ಈ ಕಾಲಕ್ಕೂ ಪ್ರಾಣಿಗಳು ಬಳಕೆಗೊಂಡರು ಈ ಬಂಡಿಗಳನ್ನು ಎಳೆಯುವ ಸಾಧನವಾಗಿ ಬಳಸಲಾಗುತಿತ್ತು. ಬಂಡಿಗಳ ಅನ್ವೇಷಣೆಯು ಕ್ರಮೇಣ ಮಾನವರ ಸಾಗಣೆ, ವಸ್ತುಗಳ ಸಾಗಣೆಗೆ ಬೇರೆ ಬೇರೆಯಾಗಿ ವಿಂಗಡಿಸಲಾಯಿತು.

ಮಾನವ ವಿಕಾಸವಾದಂತೆಲ್ಲ ಅವರ ಬದುಕುವ ಕ್ರಮದಲ್ಲಿ ಬಂದ ಬದಲಾವಣೆಗಳು ಅನೇಕ ಹೊಸ ಹೊಸ ಪ್ರಯೋಗಗಳಿಗೆ ಕಾರಣವಾಯಿತು. ಹಾಗೆಯೆ ಸಾರಿಗೆ ಅಥವಾ ಸಂಪರ್ಕ ಸಾಧನಗಳ ಬೆಳವಣಿಗೆಯಲ್ಲಿ ಕಂಡುಬಂದವು. ಮಾನವರು ರಾಜಕೀಯ ವ್ಯವಸ್ಥೆಗೆ ಒಳಪಟ್ಟ ಮೇಲೆ ಪ್ರದೇಶಗಳ ನಡುವೆ ಗಡಿಗಳು ನಿರ್ಮಾಣವಾದವು. ಈ ಕಾರಣದಿಂದಾಗಿ ಸಂಪರ್ಕ ಸಾಧನಗಳ ಅವಶ್ಯಕತೆ ಕಂಡುಬಂದವು. ಪ್ರಾಚೀನ ಕಾಲದಲ್ಲಿ ಒಂದು ಪ್ರದೇಶದಿಂದ ಇತರ ಪ್ರದೇಶಗಳಿಗೆ ಸಂಪರ್ಕ ಸಾಧಿಸಲು ಅಥವಾ ಮಾಹಿತಿ ತಲುಪಿಸಲು ಕೆಲವು ವಸ್ತುಗಳನ್ನು ಬಳಸಿಕೊಂಡು ಶಬ್ಧ ಮಾಡುವ ಮೂಲಕ ಮಾಹಿತಿಗಳ ವಿನಿಮಯ ಮಾಡಲಾಗುತಿತ್ತು. ಆಧುನಿಕತೆ ತೆರೆದುಕೊಂಡಂತೆ ಈ ಸಾಧನಗಳಲ್ಲಿ ಅಭಿವೃದ್ಧಿ ಕಂಡುಬಂತು.

ಮಾನವರು ಸಾರಿಗೆ ವ್ಯವಸ್ಥೆಗೆ ಹೆಚ್ಚಾಗಿ ಪ್ರಾಣಿಗಳನ್ನೇ ಅವಲಂಬುಸಿಸುತ್ತ ಬಂದಿದ್ದಾರೆ. ಮಾನವ ಸಾಗಣೆಗೆ ಕುದುರೆ, ಆನೆ, ಕತ್ತೆ ಒಂಟೆ, ಎಮ್ಮೆ, ಕೋಣ, ಎತ್ತುಗಳಂತ ಬಲಿಷ್ಠ ಪ್ರಾಣಿಗಳನ್ನು

ಬಳಸುತ್ತ ಬಂದಿದ್ದಾರೆ. ಆಧುನಿಕತೆಯ ಪ್ರಭಾವ ಪ್ರಾಣಿಗಳ ಸ್ಥಾನದಲ್ಲಿ ಯಂತ್ರಗಳ ಪ್ರವೇಶವಾದ ಮೇಲೆ ಸಾರಿಗೆ ಕ್ಷೇತ್ರದಲ್ಲಿ ಬಹು ದೊಡ್ಡ ಬದಲಾವಣೆಗಳು ಕಂಡು ಬಂದವು. ಈ ಬದಲಾವಣೆಯ ಫಲವಾಗಿ ಬಂದ ವಸ್ತು ವಿಷಯಗಳನ್ನು ಗುರುತಿಸುವ ಅನೇಕ ಪದಗಳು ಕನ್ನಡ ಪದಕೋಶದ ಭಾಗಗಳಾದವು. ಈ ಕ್ಷೇತ್ರದಲ್ಲಿ ಇಂಗ್ಲಿಶ್ ಪದಗಳು ಹೆಚ್ಚಾಗಿ ಕಂಡುಬಂದಿವೆ. ಈ ಕ್ಷೇತ್ರದ ಪದಕೋಶದಲ್ಲಿ ಆದ ಬೆಳವಣಿಗೆಯನ್ನು ಹೀಗೆ ಗುರುತಿಸಬಹುದು.

ಕನ್ನಡ ಪದಕೋಶವನ್ನು ಗಮನಿಸಿದಾಗ ರಸ್ತೆ ಮತ್ತು ಜಲ ಸಾರಿಗೆಗೆ ಸಂಬಂಧಿಸಿದ ಪದಗಳು ಪ್ರಾಚೀನ ಕಾಲದಿಂದಲೂ ಕಂಡು ಬಂದಿವೆ. ರಸ್ತೆ ಮಾರ್ಗವು ಮುಖ್ಯವಾದದ್ದಾಗಿದ್ದು ಜಲಮಾರ್ಗ ಅಷ್ಟು ಪ್ರಚಲಿತವಲ್ಲದ ಅಥವಾ ವಿದೇಶಿಗರ ಸಂಪರ್ಕ ಸಿಗುವವರೆಗೂ ಮುನ್ನೆಲೆಗೆ ಬರದಿರುವುದು; ಪ್ರಾಚೀನ ಶಾಸನ ಮತ್ತು ಕಾವ್ಯಗಳಲ್ಲಿ ಇದಕ್ಕೆ ಸಂಬಂಧಿಸಿದ ಪದಗಳು ಸಿಗದಿರುವುದರಿಂದ ಊಹಿಸಬಹುದಾಗಿದೆ. ಪ್ರಾಚೀನ ಕಾವ್ಯ ಮತ್ತು ಶಾಸನಗಳಲ್ಲಿ ಸಿಗುವ ಈ ವಲಯಕ್ಕೆ ಸಂಬಂಧಿತ ಪದಗಳನ್ನು ಹೀಗೆ ಗುರುತಿಸಬಹುದಾಗಿದೆ. ಉದಾ.

ವೋಣಿ

ಓಣಿ

ಕಾಲುದಾರಿ

ಚಿಕ್ಕ ಅಡ್ಡದಾರಿ

ಕಾಲ್ಪಟ್ಟೆ

ಸಣ್ಣದಾರಿ

ಬಂಡಿದಾರಿ

ಹೆದ್ದಾರಿ

ಹಿರಿಯತ ಹೆದ್ದಾರಿ

ರಾಜಮಾರ್ಗ

ರಾಜಪಥ,

ಇತ್ಯಾದಿ, ಆದರೇ ಈ ದಾರಿಗಳ ಸ್ವರೂಪದ ಬಗ್ಗೆ ಅಷ್ಟೇನು ಮಾಹಿತಿಗಳು ಸಿಗುವುದಿಲ್ಲ. ಯಾವ ಮಾರ್ಗ ಎಷ್ಟು ವಿಸ್ತಾರವಾಗಿದ್ದವು ಅದರ ಬಳಕೆ ಮತ್ತು ಬಳಕೆಗೆ ಇದ್ದ ನಿಯಮಗಳು ಈ ಬಗ್ಗೆ ಯಾವುದೇ ಮಾಹಿತಿ ಲಭ್ಯವಿಲ್ಲ.

ಮಧ್ಯಕಾಲೀನ ಕರ್ನಾಟಕ ಅನೇಕ ಇತರೆ ದೇಶಗಳ ಸಂಪರ್ಕಕ್ಕೆ ಒಳಗಾಗಿತ್ತು. ಇದು ಈ ಕಾಲದ ರಸ್ತೆ ಮಾದರಿಗಳಲ್ಲಿ ಅನೇಕ ಬದಲಾವಣೆಗಳಿಗೆ ಕಾರಣವಾಯಿತು. ಈ ಕಾಲದಲ್ಲಿ ಸಿಕ್ಕ ಪಾರಸಿ, ಅರಬ್ಬಿ ಪದಗಳ ಸಂಪರ್ಕದಿಂದ ಕನ್ನಡದಲ್ಲಿ ದಾರಿಗಳನ್ನು ರಸ್ತೆ ಎಂದು ಗುರುತಿಸುವ ಪದ ಬಳಕೆಗೆ ಬಂತು. ಆನಂತರ ಇಂಗ್ಲಿಶನಿಂದ ಸ್ವೀಕರಿಸಿಕೊಂಡ ರೋಡ್ ಪದ ಬಳಕೆಗೆ ಬಂದಿತು.

ಇದು ಕನ್ನಡದಲ್ಲಿ ದಾರಿ ಅಥವಾ ರಸ್ತೆಯ ಹೊಸ ಮಾದರಿಯೊಂದನ್ನು ಗುರುತಿಸಲು ಬಳಕೆಗೆ ಬಂದ ಪದವಾಗಿದೆ. ಇದರೊಂದಿಗೆ ಡಾಂಬರ್ ಮತ್ತು ಸಿಮೆಂಟ್ ರೋಡ್ ಎಂಬ ಹೊಸ ಪದಗಳು ಪದಕೋಶದ ಭಾಗವಾಗಿವೆ. ಈ ಮಾದರಿಯ ರಸ್ತೆಗಳಲ್ಲಿ ಬೇರೆ ಬೇರೆ ಮಾದರಿಗಳಿವೆ. ಅವುಗಳನ್ನು ಹೀಗೆ ಗುರುತಿಸಬಹುದು.

ಗ್ರಾಮಗಳ ರಸ್ತೆ

ಜಿಲ್ಲಾ ರಸ್ತೆ

ರಾಜ್ಯ ಹೆದ್ದಾರಿ

ರಾಷ್ಟ್ರೀಯ ಹೆದ್ದಾರಿ, ಇತ್ಯಾದಿ.

ಹೊಸ ಕಾಲದಲ್ಲಿ ಆವಿಷ್ಕಾರವಾದ ವಾಹನ ರೈಲ್. ಇದು ಚಲಿಸುವ ಮಾರ್ಗವನ್ನು ರೈಲ್ ವೇ(>ರೈಲು ಹಳಿ) ಎಂದು ಗುರುತಿಸಲಾಗುತ್ತದೆ. ಆಧುನಿಕ ಸಂಶೋಧನೆಗಳು ಸಾರಿಗೆ ಕ್ಷೇತ್ರದಲ್ಲಿ ಕಂಡುಕೊಂಡ ಪ್ರಗತಿಯ ಕಾರಣದಿಂದ ಮಾನವರು ವಾಯು ಮಾರ್ಗವಾಗಿ ಚಲಿಸಬಲ್ಲ ಸಾಧ್ಯತೆಗಳನ್ನು ಸಾಧಿಸಿದರು. ಇದನ್ನು ಏರ್ ವೇ ಎಂದು ಗುರುತಿಸಲಾಗುತ್ತದೆ. ಈ ನಾಲ್ಕು ಮಾದರಿಯ ಮಾರ್ಗಗಳ ಪರಿಕಲ್ಪನೆಯೊಂದಿಗೆ ಅದಕ್ಕೆ ಸಂಬಂಧಿಸಿದ ಅನೇಕ ಪದಗಳು ಕನ್ನಡಕ್ಕೆ ಸೇರಿಕೊಂಡವು.

ಪ್ರಾಚೀನ ಕಾಲದಲ್ಲಿ ರಸ್ತೆ ಮಾರ್ಗದಲ್ಲಿ ಎತ್ತು, ಕತ್ತೆ, ಕೋಣ, ಕುದುರೆ, ಆನೆ, ಒಂಟೆಯಂತ ಪ್ರಾಣಿಗಳಿಂದ ಎಳೆಯಲ್ಪಡುತ್ತಿದ್ದ ಬಂಡಿಗಳು ಅಥವಾ ವಿಶೇಷವಾಗಿ ತಯಾರಿಸಲ್ಪಟ್ಟ ರಥಗಳು ಚಲಿಸುತ್ತಿದ್ದವು. ಜಲಮಾರ್ಗದಲ್ಲಿ ಹಳ್ಳವಾಗಿದ್ದರೆ ತೆಪ್ಪ, ನದಿಯಾಗಿದ್ದರೆ ತಡವು, ಸಮುದ್ರವಾಗಿದ್ದರೆ ಛೈತ್ರಗಳಂತ ವಾಹನಗಳ ಬಳಕೆ ಕಂಡುಬಂದಿದೆ. ಜಾಗತೀಕರಣದ ಪ್ರಭಾವದಿಂದ ಸಾರಿಗೆ ಕ್ಷೇತ್ರದಲ್ಲಿ ಅನೇಕ ತರಹದ ವಾಹನಗಳು ಬಳಕೆಗೆ ಬಂದವು. ಈ ವಾಹನಗಳು ಕರ್ನಾಟಕಕ್ಕೂ ಬಂದ ಕಾರಣದಿಂದ ಈ ವಾಹನಗಳಿಗೆ ಸಂಬಂಧಿಸಿದ ಅನೇಕ ಪದಗಳು ಕನ್ನಡ ಪದಕೋಶ ಸೇರಿಕೊಂಡವು. ಉದಾ.

ಟಾಂಗಾ (ಕುದುರೆ ಗಾಡಿ)

ರಿಕ್ಷಾ

ಸೈಕಲ್

ಬೈಕ್

ಸ್ಕೂಟರ್

ಆಟೋ

ಕಾರ್

ಜೀಪ್

ಬಸ್

ಕ್ಯಾಬ್

ಲಾರಿ

ಟೆಂಪೋ ಟ್ರ್ಯಾಕ್ಸ್

ಮಿನಿಡೋರ್

ಟ್ರಾಕ್ಟರ್ ಇತಾದಿ.

ಇವುಗಳಲ್ಲಿ ದ್ವಿಚಕ್ರ(Bycycle), ಮೂರು ಚಕ್ರ(Try cycle), ನಾಲ್ಕು ಚಕ್ರ(Four Wheeler), ಮತ್ತು ಬಹುಚಕ್ರ(Malti Wheeler) ಎಂಬ ಪ್ರಕಾರಗಳಿವೆ. ಇದು ರಸ್ತೆ ಮಾರ್ಗದ ವಾಹನಗಳಲ್ಲಿ ಮಾತ್ರ ಕಂಡು ಬರುತ್ತದೆ. ಜಲಮಾರ್ಗದಲ್ಲಿ **ಶಿಪ್(>ಹಡಗು), ಬೋಟ್** ಹೆಸರಿನ ವಾಹನಗಳು ಕಂಡುಬಂದರೆ, ವಾಯು ಮಾರ್ಗದಲ್ಲಿ **ಹೆಲಿಕಾಪ್ಟರ್, ಏರೋಪ್ಲೇನ್(ವಿಮಾನ), ರಾಕೆಟ್** ಎಂಬ ವಾಹನ ಮತ್ತು **ರೈಲ್‌ಗಾಡಿ(>ಉಗಿಬಂಡಿ)** ಇತ್ಯಾದಿ ವಾಹನಗಳು ಬಳಕೆಗೆ ಬಂದವು. ಈ ವಾಹನಗಳಲ್ಲಿ ಕೆಲವನ್ನು ಸೀಮಿತ ಅವಧಿಗೆ ದುಡ್ಡು ಪಾವತಿಸಿ ಬಳಕೆ ಮಾಡಬಲ್ಲ ವಾಹನಗಳನ್ನು **ಟ್ಯಾಕ್ಸಿ** ಅಥವಾ **ರಿಕ್ಷಾ** ಎಂದು ಗುರುತಿಸಲಾಗುತ್ತದೆ.

ಈ ವಾಹನಗಳು ಹೊರಡುವ ನಿಗಧಿತ ಅವಧಿ ಮತ್ತು ಸ್ಥಳವನ್ನು ಹೊಂದಿರುತ್ತವೆ. ಇದನ್ನ ಹೊರಡುವ ಸಮಯ ಮತ್ತು ತಲಪುವ ಸಮಯ ಎನ್ನಲಾಗುತ್ತದೆ. ಈ ವಾಹನಗಳು ನಿಲ್ಲುವ ನಿಗಧಿತ ಸ್ಥಳಗಳನ್ನು ಗುರುತಿಸುವ ಪದಗಳು ಈ ರೀತಿ ಇವೆ. ಉದಾ.

ಬಸ್ ಸ್ಟ್ಯಾಂಡ್/ಸ್ಟಾಪ್

ರೈಲ್‌ವೇ ಸ್ಟೇಷನ್

ಏರ್ ಪೋರ್ಟ್

ಟ್ಯಾಕ್ಸಿ ಸ್ಟ್ಯಾಂಡ್

ಶಿಪ್‌ಯಾರ್ಡ್,

ಇತ್ಯಾದಿ, ಇಂತಹ ಇಂಗ್ಲಿಶನಿಂದ ಸ್ವೀಕರಿಸಿಕೊಂಡ ಪದಗಳಿಗೆ ಪರ್ಯಾಯವಾಗಿ ಕನ್ನಡದಲ್ಲಿ ಪದಗಳನ್ನು ರಚಿಸಿಕೊಳ್ಳಲಾಗಿದೆ. ಉದಾ.

ಬಸ್ ನಿಲ್ದಾಣ

ರೈಲ್‌ವೇ ನಿಲ್ದಾಣ

ವಿಮಾನ ನಿಲ್ದಾಣ

ಇಂಗ್ಲಿಶನ ಸ್ಟ್ಯಾಂಡ್/ಸ್ಟಾಪ್, ಸ್ಟೇಷನ್, ಪೋರ್ಟ್, ಯಾರ್ಡ್ ಈ ಎಲ್ಲ ಪದಗಳಿಗೆ ಕನ್ನಡದಲ್ಲಿ ನಿಲ್ದಾಣ ಎಂಬ ಪದ ರಚಿಸಿಕೊಳ್ಳಲಾಗಿದೆ. ಕೆಲವೊಮ್ಮೆ ನಿಲುಗಡೆ ಎಂಬ ಪದವನ್ನು ಬಳಸಲಾಗುತ್ತದೆ. ಆದರೆ ಇದು ರೈಲು ಮತ್ತು ವಿಮಾನಗಳಿಗೆ ಬಳಸಲಾಗದು. ಹಡಗು ನಿಲ್ಲುವ

ಸ್ಥಳವನ್ನು ಹಡುಗು ನಿಲ್ದಾಣ ಅಥವಾ ನೌಕಾಂಗಣ ಎಂಬ ಪದಗಳನ್ನು ರಚಿಸಿಕೊಳ್ಳಲಾಗಿದೆ. ಇದನ್ನು ಪಾರಸಿಯಿಂದ ಸ್ವೀಕರಿಸಿರುವ ಬಂದರ್ ಎಂಬ ಪದವನ್ನು ಬಳಸಲಾಗುತ್ತದೆ. ಸಾರಿಗೆ ಕ್ಷೇತ್ರದಲ್ಲಿ ಇವುಗಳಲ್ಲದೆ ಇವುಗಳಿಗೆ ಸಂಬಂಧಿಸಿದಂತೆ ಅನೇಕ ಪದಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ. ಉದಾ.

ಟಿಕೇಟ್

ಪ್ಲಾಟ್ ಫಾರ್ಮ್

ರನ್ ವೇ

ಪಾಸ ಪೋರ್ಟ್

ಏರ್ ಸ್ಪೇಸ್

ಪ್ಯಾರಾಚೂಟ್

ಡಿಸೇಲ್

ಪೆಟ್ರೋಲ್

ಕೆರೋಸಿನ್(ಸಿಮೇಎಣ್ಣೆ)

ಗ್ಯಾಸ್,

ಇತ್ಯಾದಿ, ಇಂದು ನಾಲ್ಕು ಪ್ರಕಾರದ ಸಾರಿಗೆ ವ್ಯವಸ್ಥೆಯನ್ನು ಕರ್ನಾಟಕದಲ್ಲಿ (ಜಾಗತೀಕ) ಕಾಣುತ್ತೇವೆ. ಇವುಗಳಲ್ಲಿ ಜನ ಸಾರಿಗೆ ಮತ್ತು ಸರಕು ಸಾರಿಗೆ ಎಂದು ಎರಡು ಪ್ರಕಾರಗಳುಂಟು. ಪ್ರತಿ ಪ್ರಕಾರಗಳಿಗೆ ಅದರದ್ದೇ ಆದ ಪದಕೋಶವಿದೆ. ಇಲ್ಲಿಯ ಅನೇಕ ಪದಗಳು ಕನ್ನಡಕ್ಕೂ ಸ್ವೀಕರಣವಾಗಿ ಬಂದವೆ.

**೪.೧೦.೨ ಸಂಪರ್ಕ ಸಾಧನಗಳು**

ಮಾನವರು ಒಂದೆಡೆ ನೆಲೆ ನಿಂತ ಮೇಲೆ ಸಮಾಜ ಜೀವಿಗಳಾಗಿ ಗುರುತಿಸಲಾಗುತ್ತದೆ. ಹೀಗೆ ಸಾಮಾಜಿಕ ಬಂದಕ್ಕೆ ಒಳಗಾದ ಮಾನವರು ತಮಗೆ ಅನುಕೂಲಕರ ಸ್ಥಳಗಳಲ್ಲಿ ವಾಸಿಸಲಾರಂಭಿಸಿದ ಮೇಲೆ, ಇತರ ಪ್ರದೇಶದಲ್ಲಿರುವ ಇತರರೊಂದಿಗೆ ಪರಸ್ಪರ ಸಂವಹನ ಬೆಳೆಸಲು ಅನೇಕ ತಂತ್ರಗಳನ್ನು ಬಳಸಿಕೊಂಡರು. ಪ್ರಾಚೀನ ಕಾಲದಲ್ಲಿ ದೊಡ್ಡದಾಗಿ ಶಬ್ದ ಮಾಡಬಲ್ಲ ವಾದ್ಯಗಳಿಂದ ಪ್ರಾರಂಭವಾಗಿ ಪಕ್ಷಿಗಳನ್ನು ಸಂದೇಶ ತಲುಪಿಸುವ ಸಾಧನವಾಗಿ ಬಳಸಿಕೊಳ್ಳುವ ವರೆಗಿನ ಪ್ರಗತಿಯನ್ನು ಕಾಣಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ಪಾರಿವಾಳ ಅಥವಾ ಹದ್ದುಗಳನ್ನು ಸುದ್ದಿ ಸಮರ್ಪಕ ಮಾಧ್ಯಮವಾಗಿ ಬಳಸಲಾಗುತಿತ್ತು. ಪ್ರಾಚೀನ ಕಾಲದಲ್ಲಿ ಸಂಪರ್ಕ ಸಾಧನವಾಗಿ ಒಲೆ ಎಂಬ ಪದ ಬಿಟ್ಟರೆ ಬೇರೆ ಯಾವ ಪದಗಳು ಕಂಡು ಬಂದಿಲ್ಲ. ನಡುಗನ್ನಡ ಕಾಲದಲ್ಲು ಕಾಗಜ್(ಕಾಗದ) ಎನ್ನುವ ಪದ ಬಿಟ್ಟರೆ ಬೇರೆ ಪದಗಳ ಉಲ್ಲೇಖ ಕಂಡು ಬಂದಿಲ್ಲ. ಆದರು ಒಲೆ ಮತ್ತು ಕಾಗಜ್ ಮಾದರಿಗಳಲ್ಲಿ

ವ್ಯತ್ಯಾಸವಿದೆ. ಹೊಸಕಾಲದಲ್ಲಿ ಇಂಗ್ಲಿಶ್‌ನ ಪ್ರಭಾವದಿಂದ ಆರಂಭವಾದ ಪೋಸ್ಟ್ ಸೇವೆ ಅನೇಕ ಹೊಸ ಪದಗಳ ಸೇರ್ಪಡೆಗೆ ಕಾರಣವಾಯಿತು. ಉದಾ.

ಲೆಟರ್

ಪೋಸ್ಟ್ ಕಾರ್ಡ್

ಪೋಸ್ಟ್ ಆಫಿಸ್

ಪೋಸ್ಟ್ ಮನ್

ಪೋಸ್ಟ್ ಮಾಸ್ಟರ್ ಇತ್ಯಾದಿ. ಇದೇ ಮಾದರಿಯಲ್ಲಿ ಖಾಸಗಿ ಅಂಚೆ ತಲುಪಿಸುವ ವ್ಯವಸ್ಥೆಯನ್ನು ಗುರುತಿಸಲು ಕೊರಿಯರ್ ಎಂಬ ಪದ ಬಳಕೆಯಲ್ಲಿದೆ.

ಆಧುನಿಕ ಕಾಲದಲ್ಲಿ ಕಾಗದ ಬಳಸಿಕೊಂಡು ನಡೆಸುತಿದ್ದ ಪತ್ರ ವ್ಯವಹಾರ ಹಿನ್ನೆಲೆಗೆ ಸರಿದು ಏಲೆಟ್ರಾನಿಕ್ ಮಾದರಿಯ ಪತ್ರ ವ್ಯವಹಾರ ನಡೆಸುವ ವ್ಯವಸ್ಥೆ ಬಳಕೆಗೆ ಬಂತು. ಇದು ತ್ವರಿತಗತಿಯ ವ್ಯವಹಾರ ನಡೆಯುವುದರಿಂದ ಬಹುಬೇಗ ಜನಪ್ರಿಯವಾಯಿತು. ಈ ಮಾದರಿಯ ಪತ್ರವ್ಯವಹಾರ ನಡೆಸಲು ಅನೇಕ ಹೊಸ ಸಾಧನಗಳು ಬಳಕೆಗೆ ಬಂದವು. ಉದಾ.

ಮೊಬೈಲ್

ಕಂಪ್ಯೂಟರ್

ಪೇಜರ್

ಫ್ಯಾಕ್ಸ್,

ಇತ್ಯಾದಿ, ಈ ಏಲೆಟ್ಕಾನಿಕ್ ಸಾಧನಗಳನ್ನು ಬಳಸಿ ಸಂದೇಶಗಳನ್ನು ರವಾನಿಸುವ ಮತ್ತು ಸ್ವೀಕರಿಸುವ ವ್ಯವಸ್ಥೆ ಬಳಕೆಗೆ ಬಂತು. ಈ ಮಾದರಿಯ ಸಂದೇಶ ರವಾನೆ ವ್ಯವಸ್ಥೆಗಳನ್ನು ಗುರುತಿಸಲು; ಈ–ಮೇಯ್ಲ್, ಮೆಸೆಜ್, ಪ್ಯಾಕ್ಸ್‌ಗಳಂತ ಪದಗಳು ಬಳಕೆಗೆ ಬಂದವು. ಈ–ಸಂದೇಶ ವ್ಯವಸ್ಥೆ ಬಂದ ಮೇಲೆ ಇದರಲ್ಲು ಕಾಲಕಾಲಕ್ಕೂ ಬದಲಾವಣೆ ಕಂಡು ಬಂದಿವೆ. ಈ ಕಾರಣದಿಂದ ಅನೇಕ ಹೊಸ ಪದಗಳು ಕನ್ನಡ ಪದಕೋಶಕ್ಕೆ ಸ್ವೀಕರಣವಾಗಿ ಬಂದವು. ಮೊಬೈಲ್‌ಗೆ ಸಂಬಂಧಿಸಿದಂತೆ ಅನೇಕ ಪದಗಳು ಕನ್ನಡದಲ್ಲಿ ಬಳಕೆಗೆ ಬಂದಿವೆ. ಉದಾ.

ಕಾಲ್ > ಕರೆ

ಮಿಸ್ ಕಾಲ್

ಕರೆನ್ಸಿ

ಬ್ಯಾಲೆನ್ಸ್

ರೀಚಾರ್ಜ್,

ಇತ್ಯಾದಿ, ಕಂಪ್ಯೂಟರ್ ಮತ್ತು ಲ್ಯಾಪ್‌ಟಾಪ್ ಬಂದ ಮೇಲೆ ಈ ಕ್ಷೇತ್ರದಲ್ಲಿ ಇಂಟರನೆಟ್(ಜಾಲತಾಣ)ನ ಆವಿಷ್ಕಾರ ಅನೇಕ ಹೊಸ ಸಂಪರ್ಕ ಮಾಧ್ಯಮಗಳ ಹುಟ್ಟಿಗೆ

ಕಾರಣವಾಯಿತು. ಇಂಟರನೆಟ್ ವ್ಯಾಪಕ ಬಳಕೆಗೆ ಬಂದ ಮೇಲೆ ಸೋಸಿಯಲ್ ಮೀಡಿಯಾ(ಸಾಮಾಜಿಕ ಜಾಲತಾಣ) ಎಂಬ ವ್ಯವಸ್ಥೆ ಬಳಕೆಗೆ ಬಂದಿತು.

ಸಾಮಾಜಿಕ ಜಾಲತಾಣಗಳು ಆಧುನಿಕ ಕಾಲದ ಒಂದು ಪ್ರಭಾವಿ ವಲಯ. ಈ ವಲಯವು ತುಂಬಾ ತ್ವರಿತಗತಿಯಲ್ಲಿ ಬೆಳವಣಿಗೆ ಹೊಂದುತ್ತಿರುವ ಮತ್ತು ಭಾಷೆಯನ್ನೇ ಅವಲಂಬಿಸಿರುವ ವಲಯ. ಇಂದು ಈ ಸಾಮಾಜಿಕ ಜಾಲತಾಣವನ್ನು ಬಳಸದ ವ್ಯಕ್ತಿಯೇ ಇಲ್ಲ ಎನ್ನಬಹುದು. ಹೀಗಾಗಿ ಈ ವಲಯದಲ್ಲಿ ಬಳಕೆಗೊಳ್ಳುವ ಪದಗಳನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು.

ಫೇಸ್‌ಬುಕ್

ಇನ್‌ಸ್ಟಾಗ್ರಾಂ

ಟ್ವಿಟರ್

ವಾಟ್ಸ್ ಆಫ್

ಮೆಸೆಂಜರ್

ಹ್ಯಾಂಗೌಟ್,

ಇತ್ಯಾದಿ, ಸಂದೇಶ ರವಾನೆಯ ಆ್ಯಪ್‌ಗಳು ಬಳಕೆಗೆ ಬಂದಿವೆ. ಈ ಸಂದೇಶ ಆ್ಯಪ್‌ಗಳಿಗೆ ಸಂಬಂಧಿಸಿದಂತೆ,

ಲೈಕ

ಪೊಕ್

ಕಾಮೆಂಟ್

ಶೇರ್

ಚಾಟ್

ಕಾಮೆಂಟ್‌ನಂತಹ ಪದಗಳು ಬಳಕೆಯ ನೆಲೆಯಲ್ಲಿ ಹೆಚ್ಚು ಮುನ್ನೆಲೆಗೆ ಬಂದವು. ಇಂಟರ್‌ನೆಟ್ ಬಳಕೆಗೆ ಬಂದ ಮೇಲೆ ಹುಟ್ಟಿಕೊಂಡ ಹೆಚ್ಚು ಹೆಚ್ಚು ಪದಗಳು ತುಂಬಾ ವೇಗವಾಗಿ ಬಳಕೆಗೆ ಬಂದವು. ಇದಕ್ಕೆ ಸಂಬಂಧಿಸಿದಂತೆ ತುಂಬಾ ಜನಪ್ರಿಯ ಪದಗಳನ್ನು ಹೀಗೆ ಗುರುತಿಸಬಹುದು. ಉದಾ.

ಸೈಬರ್

ಬ್ರೌಸಿಂಗ್

ಸರ್ಚ್

ಯಾಹೂ

ಜಿಮೆಯ್ಲ್

ಡೌನ್ಲೋಡ್

ಅಪ್‌ಲೋಡ್

ಗೂಗಲ್ ಮ್ಯಾಪ್

ವೈಫೈ,

ಇತ್ಯಾದಿ. ಈ ಮಾದರಿಯ ಪದಗಳು ಕನ್ನಡ ಪದಕೋಶದ ಭಾಗವಾಗಿ ಬಳಕೆಗೆ ಬಂದಿವೆ.

ಸಾರಿಗೆ ಮತ್ತು ಸಂಪರ್ಕ ಸಾಧನ ಕ್ಷೇತ್ರದಲ್ಲಿ ತುಂಬಾ ಬದಲಾವಣೆಗಳು ಕಂಡು ಬಂದು ಅನೇಕ ಪದಗಳು ಕನ್ನಡ ಪದಕೋಶದ ಭಾಗವಾಗಿವೆ. ಈ ಕ್ಷೇತ್ರದಲ್ಲಿ ಇಂಗ್ಲಿಶ್ ಪದಗಳು ಹೆಚ್ಚು ಸ್ವೀಕರಣವಾಗಿ ಕನ್ನಡಕ್ಕೆ ಬಂದಿವೆ. ಕೆಲವು ಪದಗಳನ್ನು ಕನ್ನಡಕ್ಕೆ ಅನುವಾದಿಸಿ ಬಳಕೆಗೆ ತರಲಾಗಿದೆ. ಹೀಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಕ್ಕೆ ಸಂಬಂಧಿಸಿದ ಪದಕೋಶವು ಪ್ರಾಚೀನ ಕಾಲದಿಂದ ತುಂಬಾ ಹಲುಸಾಗಿ ಬೆಳವಣಿಗೆ ಕಂಡಿದೆ. ಅರಬ್ಬಿ, ಪಾರಸಿ, ಮರಾಠಿ, ಉರ್ದು ಮತ್ತು ಇಂಗ್ಲಿಶ್ ಭಾಷೆಗಳಿಂದ ಪದಗಳನ್ನು ಸ್ವೀಕರಿಸಲಾಗಿದೆ.

## ೪.೧೧ ವ್ಯವಹಾರಿಕ

ಮಾನವ ಪರಸ್ಪರ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಾಡಿಕೊಂಡ ವ್ಯವಸ್ಥೆಯೇ ವ್ಯಾಪಾರ. ತನ್ನಲಿರುವ ಹೆಚ್ಚಿನದನ್ನು ಮಾರುವ ಅಥವಾ ತನಗೆ ಅವಶ್ಯಕವಾದ ವಸ್ತುವನ್ನು ಖರೀದಿಸುವ ಪ್ರಕ್ರಿಯೆಯೇ ವ್ಯಾಪಾರವೆನಿಸಿಕೊಳ್ಳುತ್ತದೆ. ಈ ವ್ಯಾಪಾರವು ಹಲವಾರು ಮಾದರಿಗಳಲ್ಲಿ ನಡೆಯುತ್ತದೆ. ಇದು ವಸ್ತು ವಿನಿಮಯ ವ್ಯವಸ್ಥೆಯಿಂದ ಹಣದರೂಪದ ವ್ಯವಹಾರದವರೆಗಿನ ದಾರಿ ಕ್ರಮಿಸಿದೆ. ಪ್ರಾಚೀನ ಕಾಲದಲ್ಲಿ ವ್ಯಾಪಾರವು ಒಂದು ವಸ್ತು ವಿನಿಮಯ ವ್ಯವಸ್ಥೆಯಾಗಿತ್ತು. ಜನರು ತಮ್ಮಲ್ಲಿರುವ ವಸ್ತುಗಳನ್ನು ಇತರ ವಸ್ತುಗಳ ಬದಲಾಗಿ ವಿನಿಮಯ ಮಾಡಿಕೊಳ್ಳಲಾಗುತ್ತಿತ್ತು. ಹಣ ಬಳಕೆಗೆ ಬಂದ ಮೇಲೆ ವಸ್ತುಗಳನ್ನು ಹಣದೊಂದಿಗೆ ವಿನಿಮಯ ಮಾಡಿಕೊಳ್ಳುವ ವ್ಯವಸ್ಥೆ ಬಂತು. ಕ್ರಮೇಣ ಕೇವಲ ಹಣವೊಂದೇ ವ್ಯಾಪಾರದ ಮಾರ್ಗವಾಯಿತು. ಬದುಕಿನ ಅವಶ್ಯಕತೆಗಾಗಿ ವ್ಯಾಪಾರ ಮಾಡುತ್ತಿದ್ದ ಮಾನವರು ಲಾಭಕ್ಕಾಗಿ ವ್ಯಾಪಾರ ಮಾಡಲಾರಂಭಿಸಿದರು. ಕ್ರಮೇಣ ಇದು ವೃತ್ತಿಯಾಗಿ ಪರಿಣಮಿಸಿತು.

ವ್ಯಾಪಾರವನ್ನು ವೃತ್ತಿಯಾಗಿಸಿಕೊಂಡವರನ್ನು ಪ್ರಾಚೀನ ಕಾಲದಲ್ಲಿ ವರ್ತಕರು ಎಂಬ ಹೆಸರಿನಿಂದ ಕರೆಯಲಾಗುತಿತ್ತು. ವರ್ತಕರಲ್ಲಿ ಎರಡು ರೀತಿಯವರುಂಟು ಒಂದು, ವಿನಿಮಯ ವರ್ತಕರು, ಎರಡು, ಉತ್ಪಾದಕ ವರ್ತಕರು.

ಗಾತ್ರಿಗ

ಗವರೆ

ಬಣಂಜಿಗರು

ನಕರ

ಸೇಟಿಗುತ್ತ

ಮುಮ್ಮುರಿದಂಡ

ವಡ್ಡವ್ಯವಹಾರಿ

ಸೆಟ್ಟಿಕಾರ

ಹಲರು

ಎಳಮೆ

ಸಾಲಿಕೆ

ಬಲ್ಲಾಳ

ನಾನಾದೇಸಿ

ಉಭಯ ನಾನಾದೇಸಿ

ಇತ್ಯಾದಿ, ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡ ವಿನಿಮಯ ವರ್ತಕರಾದರೇ,

ಕಂಬಾರ

ಕುಂಬಾರ

ಅಕ್ಕಸಾಲಿ

ಮಾದಿಗ

ಸಮಗಾರ

ಮೇದ

ಮೊದಲಾದ, ಉತ್ಪಾದಕ ವ್ಯಾಪಾರ ವರ್ತಕರಾಗಿದ್ದಾರೆ. ವಿನಿಮಯ ವರ್ತಕರನ್ನು ಸೆಟ್ಟಿಯೆಂದು ಕರೆಯಲಾಗುತ್ತಿತ್ತು. ಈ ಕಾಲದಲ್ಲಿ ಎಲ್ಲ ಸಮುದಾಯಗಳ ವ್ಯಾಪಾರಸ್ಥರನ್ನು ಸೆಟ್ಟಿಗಳೆಂದೇ ಕರೆಯಲಾಗಿದೆ. ಹೊಸ ಕಾಲದಲ್ಲಿ ವ್ಯವಹಾರಿಗರನ್ನು ವ್ಯಾಪಾರಿ, ಬಿಜಿನೆಸ್‌ಮನ್ ಎಂಬ ಪದಗಳು ಸ್ವೀಕರಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ವ್ಯಾಪಾರವನ್ನು ಮುಖ್ಯವಾಗಿ ನಾಲ್ಕು ವರ್ಗಗಳಲ್ಲಿ ವಿಂಗಡಿಸಬಹುದು. **ಅಂಗಡಿ, ಸಂತೆ, ಪೇಟೆ, ಪಟ್ಟಣ** ಅಂಗಡಿಯು ಊರಿನಲ್ಲಿರುವ ವ್ಯಾಪಾರ ಕೇಂದ್ರವಾದರೇ, ಸಂತೆಯು ವಾರಕ್ಕೆ ಒಂದು ದಿನ ನಡೆಯುವ ವ್ಯಾಪಾರದ ವ್ಯವಸ್ಥೆಯಾಗಿದೆ. ಪ್ರಾಚೀನ ಕಾಲದಲ್ಲಿ ಸಂತೆ ಮತ್ತು ಅಂಗಡಿಗಳನ್ನು ಕಟ್ಟಿಸುವುದು ಪುಣ್ಯದ ಕೆಲಸವೆಂದು ನಂಬಲಾಗಿತ್ತು. ಹೀಗೆ ಕಟ್ಟಿಸಿದ ಸಂತೆಯನ್ನು **ಧರ್ಮದ ಸಂತೆ** ಮತ್ತು ಅಂಗಡಿಯನ್ನು **ಧರ್ಮದ ಅಂಗಡಿ, ದೇವರ ಅಂಗಡಿ, ಮಾನ್ಯದ ಅಂಗಡಿಗಳು** ಎಂದು ಕರೆಯಲಾಗುತ್ತಿತ್ತು*(ಮೋಹನಕೃಷ್ಣ ರೈ ಕೆ.:೨೦೧೭:೧೦೨).* ಈ

ಮೂಲಕ ವ್ಯಾಪಾರ ನಡೆಸಲಾಗುತಿತ್ತು. ಕರ್ನಾಟಕವು ಪ್ರಾಚೀನ ಕಾಲದಿಂದಲೂ ದೇಶ-ವಿದೇಶಗಳೊಂದಿಗೆ ವ್ಯಾಪಾರ ಸಂಬಂಧಗಳು ಹೊಂದಿತ್ತು. ಈ ಕಾರಣದಿಂದ ವ್ಯಾಪಾರ ಮಾಡುವ ಕೇಂದ್ರಗಳಿಗೆ ಸಂಬಂಧಿಸಿದಂತೆ ಹೊಸಪದಗಳು ಕನ್ನಡದಲ್ಲಿ ಬಳಕೆಗೆ ಬಂದವು. ಉದಾ.

ದುಕಾನ

ಕಿರಾಣಾ ಅಂಗಡಿ

ಬಜಾರ್

ಗಂಜ್

ಮಾರ್ಕೆಟ್

ಪ್ರಾವೀಜನ್ ಸ್ಟೋರ್

ರೆಸ್ಟೋರೆಂಟ್

ಹೊಟೇಲ್

ಮಾಲ್, ಇತ್ಯಾದಿ.

ಪ್ರಾಚೀನ ಕಾಲದಲ್ಲಿ ಸಾಗಣಿಗೆ ಕೋಣ, ಕತ್ತೆ, ಎತ್ತು ಮತ್ತು ಕುದುರೆಗಳನ್ನು ಬಳಸುತ್ತಿದ್ದರು. ಕೆಲವು ಶಾಸನಗಳಿಂದ ದೇವರೆತ್ತಿನ ಮತ್ತು ಬಂಡಿಗಳ ಮೇಲೆ ಸರಕು ಸಾಗಿಸಿದ ವಿಷಯ ತಿಳಿದುಬರುತ್ತದೆ. ಪ್ರಾಚೀನ ಕಾಲದಲ್ಲಿ ದಿನ ಬಳಕೆಗೆ ಬೇಕಾಗುವ ದಿನಸಿಗಳು, ತರಕಾರಿಗಳು, ತರಕಾರಿಯಾಗಿ ಬಳಸುವ ಕಾಯಿಗಳು, ಕರ್ಪೂರ, ಪಟ್ಟಾವಳಿ, ಭೂಸ, ಸೀರೆ, ಕಬ್ಬು, ಬಳೆಕಟ್ಟು, ಕಬ್ಬಿಣ ಹೀಗೆ ವೈವಿಧ್ಯಮಯ ವಸ್ತುಗಳ ವ್ಯಾಪಾರ ನಡೆಯುತ್ತಿತ್ತು. ನಡುಗನ್ನಡ ಮತ್ತು ಹೊಸಗನ್ನಡ ಕಾಲದಲ್ಲಿ ಈ ವಸ್ತುಗಳೊಂದಿಗೆ ಅನೇಕ ಹೊಸ ಹೊಸ ವ್ಯಾಪಾರ ಮಾಡಲಾಗುತ್ತದೆ. ವ್ಯಾಪಾರದ ಸರಕನ್ನು ಜಲಮಾರ್ಗ ಮತ್ತು ರಸ್ತೆಮಾರ್ಗದ ಮೂಲಕ ಸಾಗಿಸುತ್ತಿದ್ದರು.

ವ್ಯಾಪಾರವನ್ನು **ಚಿಲ್ಲರೆ** ಮತ್ತು **ಸಗಟು** ಎಂಬ ಎರಡು ಬಗೆಯಲ್ಲಿ ವಿಂಗಡಿಸಬಹುದು. ಉತ್ಪಾದಕರಿಂದ ಖರೀದಿಸಿ ಮಾರಾಟ ಮಾಡುವುದು ಅಂದರೆ ಉತ್ಪಾದಕರಿಂದ ಖರೀದಿಸಿ ಇತರೇ ವ್ಯಾಪಾರಿಗಳಿಗೆ ಮಾರಟ ಮಾಡುವುದು ಸಗಟು ವ್ಯಾಪಾರ ಅನಿಸಿಕೊಂಡರೆ, ಸಗಟು ಖರೀದಿಸಿ ಗ್ರಾಹಕರಿಗೆ ಮಾರಾಟ ಮಾಡುವ ವ್ಯವಸ್ಥೆಯೇ ಚಿಲ್ಲರೇ ವ್ಯಾಪಾರ ಎಂದು ಕರೆಸಿಕೊಳ್ಳಲಾಗುತ್ತದೆ. ಈ ಪದಕ್ಕೆ ಸಂವಾದಿಯಾಗಿ **ಹೋಲ್‌ಸೇಲ್, ರಿಟೇಲ್** ಪದಗಳ ಬಳಕೆ ಕಂಡುಬಂದಿವೆ. ಹೋಲ್‌ಸೇಲ್ ಪದದಂತೆ **ಹೋಲ್‌ಸೇಲ್ ಅಂಗಡಿ, ಹೋಲ್‌ಸೇಲ್ ರೇಟ್, ಹೋಲ್‌ಸೇಲ್ ವ್ಯಾಪಾರಿ** ಇತ್ಯಾದಿ ಪದಗಳು ಬಳಕೆಯಲ್ಲಿವೆ.

ವ್ಯಾಪಾರವೆನ್ನುವುದು ಅದರಿಂದ ಬರುವ ಫಲವನ್ನು ಅವಲಂಬಿಸಿರುತ್ತದೆ. ಈ ಫಲವನ್ನು ಗುರುತಿಸಲು ಪ್ರಾಚೀನ ಕಾಲದಲ್ಲಿ ಸಂಸ್ಕೃತದಿಂದ ಸ್ವೀಕರಿಸಿದ ಲಾಭ ಮತ್ತು ನಷ್ಟ ಎಂಬ ಪದಗಳು ಬಳಕೆಯಾಗುತ್ತಿದ್ದವು. ನಡುಗಾಲದಲ್ಲಿ **ಕಿಫಾಯತ್, ಫಾಯಿದಾ** ಮತ್ತು **ನಫ್ಲಅ** ಪದ ಬಳಕೆಯಾಗಿವೆ.

ಆನಂತರ ಇಂಗ್ಲಿಶನಿಂದ ಸ್ವೀಕರಿಸಿದ **ಪ್ರಾಫಿಟ್** ಮತ್ತು **ಇನ್‌ಕಂ** ಎನ್ನುವ ಪದಗಳು ಬಳಕೆಗೆ ಬಂದವು. ನಷ್ಟ ಎಂಬ ಪದಕ್ಕೆ **ಲುಕ್ಸಾನ್** ಮತ್ತು **ಲಾಸ್** ಪದಗಳು ಸ್ವೀಕರಣವಾಗಿ ಬಂದಿವೆ. ನಷ್ಟದಿಂದ ಉಳಿಯಲು ಅಥವಾ ಹೆಚ್ಚಿನ ಲಾಭಕ್ಕಾಗಿ ಬೆಲೆಯಲ್ಲಿ ಹೆಚ್ಚು ಕಡಿಮೆ ಪ್ರಕ್ರಿಯೆಯನ್ನು ಗುರುತಿಸಲು **ಕೊಸರು, ಬಾರೀಕಿ, ಚೌಕಾಸಿ, ಬಾರಗೇನಿಂಗ್** ಪದಗಳು ಸ್ವೀಕರಣವಾಗಿ ಬಂದಿವೆ. ಕೊಂಡ ಅಥವಾ ಕೊಳ್ಳಲಿರುವ ವಸ್ತುಗಳ ಬೆಲೆ ಹೆಚ್ಚಾದಾಗ ದುಬಾರಿಯಾಯಿತು ಎನ್ನಲಾಗುತ್ತದೆ. ಈ ಪದದೊಂದಿಗೆ ಇದರಿಂದ ರಚನೆಗೊಂಡ **ದುಬಾರಿ ಖರ್ಚ್, ದುಬಾರಿ ಬೆಲೆ, ದುಬಾರಿ ವೆಚ್ಚ** ಪದಗಳು ಕನ್ನಡದಲ್ಲಿ ಬಳಕೆಗೆ ಬಂದಿವೆ. ವ್ಯಾಪಾರದಲ್ಲಿ ಆದ ನಷ್ಟದ ಪರಿಣಾಮವನ್ನು ಗುರುತಿಸಲು **ದಿವಾಳಿ, ಪಾಪರ್** ಎಂಬ ಪದಗಳು ಸ್ವೀಕರಣವಾಗಿ ಬಂದಿವೆ. ವ್ಯಾಪಾರಕ್ಕೆ ಸಂಬಂಧಿಸಿದಂತೆ ಇನ್ನು ಅನೇಕ ಪದಗಳು ಪಾರಸಿ, ಅರಬ್ಬಿ ಮತ್ತು ಇಂಗ್ಲಿಶನಿಂದ ಪದಗಳನ್ನು ಸ್ವೀಕರಿಸಲಾಗಿದೆ. ಉದಾ.

**ಪಾರಸಿ**

ಕಾರಖಾನೆ

ಕಿರ್ದಿ

ಖಜಾನೆ

ಗಂಜು

ಗಲ್ಲೆ

ಗುಂಜಾಯಿಷಿ

ಗುಜರಿ

ದಲ್ಲಾಳಿ

ದುಬಾರಿ

ನಾದಾರ

ನಿಖರು

ಪಕ್ಕಾಸೇರು

ಪರವಾನಗಿ

ಬಜಾರ

ರವಾನೆ

ರಶೀದಿ

ವಸೂಲಾತಿ

ಸರಾಸರಿ

**ಅರಬ್ಬಿ**

ಇಸ್ತಿಹಾರ

ಇಸ್ತಿಹಾರನಾಮೆ

ಖರ್ಚು

ಕಿಫಾಯತಿ

ಕಿಮ್ಮತ್ತು

ಕಿರಾಯಿ

ಗರಜು

ಜಮೆ

ಜಮಾ ಖರ್ಚ

ಜಾಹಿರಾತು

ದಲ್ಲಾಳ

ನಗದು

ಬಾಕಿ

ಬಾಕಿದಾರ

ಬಾಬತ್ತು

ಮಾಲೀಕ

ಮಾಲು

ಮಾಲದಾರ

ಮುಪತ್ತು

ಮೋಗಬಲು

ರಕಮು

ರುಸುಮು

ರೊಕ್ಕ

ವಜಾ

ವಸೂಲು

ಸರಾಪ

ಹಿಸಾಬ

ಖರೀದಿ ಪಟ್ಟಿ

ಪೋರ್ಚುಗೀಸ್

ಲಿಲಾವು(ನಿಲಾಮಿ)

**ಇಂಗ್ಲಿಶ್**

ಅಡ್ವಾನ್ಸ್

ಇನಕಮ್ ಟ್ಯಾಕ್ಸ್

ಎಜೆಂಟ್

ಎಜೆನ್ಸಿ

ಓನರ್

ಕಮಿಶನ್

ಕಲೆಕ್ಷನ್

ಕೊಟೇಶನ್

ಕ್ಯಾಶ್

ಕ್ಯಾಶಿಯರ್

ಕೌಂಟರ್

ಡಿಪೊ

ಪರ್ಮಿಟ್

ಬಜೇಟ್

ಬಿಲ್ಲು

ಬೇನಿಫಿಟ್

ಬ್ರಾಂಡ್

ಬ್ರೋಕರ್

ಲೆಡ್ಜರ್

ಶಾಪ್

ಶೇರ್

ಸ್ಯಾಂಪಲ್,

ಇತ್ಯಾದಿ, ಅನೇಕ ಪದಗಳನ್ನು ಸ್ವೀಕರಣದಿಂದ ಕನ್ನಡ ಸೇರಿವೆ. ಆಧುನಿಕ ಕಾಲದಲ್ಲಿ ವ್ಯವಹಾರ ವಲಯದಲ್ಲಿ ಕನ್ನಡ ಪದಕೋಶಕ್ಕೆ ಇನ್ನೊಂದು ಮಹತ್ವದ ವಿಷಯವೆಂದರೇ ಬ್ಯಾಂಕ್ ವ್ಯವಸ್ಥೆ. ಬ್ಯಾಂಕಗೆ ಸಂಬಂಧಿಸಿದ ಅನೇಕ ವಿಷಯಗಳು ಕನ್ನಡಕ್ಕೆ ಬಂದ ಮೇಲೆ ಅಲ್ಲಿಯ ಪದಕೋಶವು ಸ್ವೀಕರಣವಾಗಿ ಬಂದಿವೆ.

ಅಕೌಂಟ್

ಅಕೌಂಟ್ ಬುಕ್

ಅಕೌಂಟೆಂಟ್

ಲಾಕರ್

ಲೋನ್

ಪಾಸ್‌ಬುಕ್

ಸೆವಿಂಗ್ಸ್

ಕ್ಯಾಶಿಯರ್, ಇತ್ಯಾದಿ.

### ೪.೧೧.೨ ತೆರಿಗೆಗೆಗಳು

ತೆರಿಗೆಯನ್ನು ಆಡಳಿತ ನಡೆಸುವ ಸರ್ಕಾರಗಳು ಸಾರ್ವಜನಿಕ ಉಪಯೋಗಕ್ಕಾಗಿ ಜನರಿಂದ ವಂತಿಗೆ ಪಡೆಯುವುದಾಗಿರುತ್ತದೆ. ಪ್ರಾಚೀನ ಕಾಲದಿಂದಲೂ ಸರ್ಕಾರಗಳು ಜನರಿಂದ ಅವರ ಆದಾಯದ ಆರು ಪ್ರತಿಶತ ಸರ್ಕಾರಕ್ಕೆ ಕೊಡಬೇಕು ಎನ್ನುವ ನಿಯಮಗಳು ರೂಪಿಸಲಾಗಿತ್ತು. ಈ ನಿಯಮಗಳಿಗೆ ಅನುಗುಣವಾಗಿ ವಾರ್ಷಿಕ ತೆರಿಗೆ ಖಜಾನೆಗೆ ಭರ್ತಿ ಮಾಡಲಾಗುತ್ತಿತ್ತು.

ಪ್ರಾಚೀನ ಕರ್ನಾಟಕದಲ್ಲಿ ರಾಜನಿಗೆ ಬರುತ್ತಿದ್ದ ರಾಜ್ಯಾದಾಯವು ಅನೇಕ ಮೂಲಗಳಿಂದ ಬರುತ್ತಿತ್ತು. ರಾಜ್ಯಾದಾಯದ ಅಧಿಕ ಮೊತ್ತ ತೆರಿಗೆಗಳ ಮೂಲಕ ಬರುತ್ತಿತ್ತು. **ಭೂತೆರಿಗೆ, ಆಸ್ತಿತೆರಿಗೆ, ವೃತ್ತಿತೆರಿಗೆ, ವ್ಯಾಪಾರದ ತೆರಿಗೆ, ಉತ್ಪನ್ನಗಳಿಗೆ ಹಾಕುತ್ತಿದ್ದ ತೆರಿಗೆ, ಸಾಮಾಜಿಕ ತೆರಿಗೆಗಳನ್ನು** ಸಂಗ್ರಹಿಸಲಾಗುತ್ತಿತ್ತು. ಪ್ರಾಚೀನ ಕಾಲದಲ್ಲಿ ಈ ವ್ಯವಸ್ಥೆಯನ್ನು **ತೆರಿಗೆ, ಸುಂಕ, ಆಯ, ಸೇಸ್, ದೆಜಿ** ಎನ್ನುವ ಹೆಸರುಗಳಿಂದ ಕರೆಯಲಾಗಿದೆ. ಈ ಪದಗಳಿಗೆ ಸಂವಾದಿಯಾಗಿ ಈಗ ಇನ್‌ಕಂಟ್ಯಾಕ್ಸ್ ಎಂಬ ಪದ ಬಳಕೆಯಾಗುತ್ತಿದೆ. ಈ ಕಾಲದಲ್ಲಿ ಬಳಕೆಯಲ್ಲಿದ್ದ ತೆರಿಗೆಗಳನ್ನು ಹೀಗೆ ಗುರುತಿಸಬಹುದು. ಉದಾ.

ಸುಂಕ

ಮಹವನೆ

ಪನ್ನನಾಮ

ಚಿತ್ತಾಯ

ದಸವಂದ

ದಂಡಾಯ

ದವಸಾಯದ ಸುಂಕ

ಕುಳಿಯ ಸುಂಕ

ಹಂದರವಣ

ಸಂತೆವಣ

ತಳಾರಗೂಲಿ

ಕನ್ನಾಡಿವಣ

ವಡರಾವುಲ

ಜೋಲಿದೇಶಿ

ಕುರಿದೆರೆ

ಅಂಗಡಿ ಸುಂಕ

ಅಂಬಿಗದೆಱೆ

ಅಕ್ಕಸಾಲಿಯಾಯ

ಅಗಸದೆಱೆ

ಅಡಕೆಲೆ ಸುಂಕ

ಅಭ್ಯಾಗತೆ

ಅಸಂಬಳ

ಅಡುದೆಱೆ

ಅಡುವಣ

ಆನೆದೆಱೆ

ಉರುವಲುದೆಱೆ

ಉಪ್ಪಲಿಕದೆಱೆ

ಎತ್ತಿನಸುಂಕ

ಒಕ್ಕಲುದೆಱೆ

ಕಟಕಸೇಸೆ

ಕಪ್ಪಡದಸುಂಕ

ಕಪ್ಪಿಲದೆಱೆ

ಕಬ್ಬಿಲದೆಱೆ

ಕಬ್ಬುನಸುಂಕ

ಕಾವಲದೆಱೆ

ಕಾವಲಿದೆಱೆ

ಕಿಱುಕುಳ

ಕುಂಬಾರದೆಱೆ

ಕುದುರೆ ಸುಂಕ

ಗಾಣದ ವೊಕ್ಕಲುದೆಱೆ

ಗಾಣದೆಱೆ

ಗ್ರಾಮದೆಱೆ

ತಿಪ್ಪೆಸುಂಕ

ತಳಾರಿಕೆ ಸುಂಕ

ನಾವಿದದೆಱೆ

ಸಂತೆಬೀಯ

ಸೂಳೆದೆಱೆ

ಸೆಟ್ಟಿದೆಱೆ

ಇತ್ಯಾದಿ ಈ ಮಾದರಿಯ ತೆರಿಗೆಗಳು ಪ್ರಾಚೀನ ಕರ್ನಾಟಕದಲ್ಲಿ ಬಳಕೆಯಲ್ಲಿದ್ದವು. ಆಧುನಿಕ ಕಾಲಕ್ಕೆ ಅನೇಕ ಹೊಸ ತೆರಿಗೆ ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಈ ವ್ಯವಸ್ಥೆಯು ಪ್ರಾಚೀನ ಕಾಲದ ತೆರಿಗೆ ವ್ಯವಸ್ಥೆಗಳಿಗಿಂತ ಭಿನ್ನವಾದದ್ದಾಗಿದೆ. ವಾರ್ಷಿಕ ಆದಾಯ ಮತ್ತು ಒಟ್ಟು ಸಂಪತ್ತಿನ ಆಧಾರದ ಮೇಲೆ ಇಷ್ಟು ಪ್ರತಿಶತ ಎಂದು ತೆರಿಗೆ ವಿಧಿಸಲಾಗುತ್ತದೆ.

### ೪.೧೧.೩ ನಾಣ್ಯಗಳು

ನಾಣ್ಯಗಳು ನಮ್ಮ ಇತಿಹಾಸ ಮತ್ತು ಸಂಸ್ಕೃತಿಯ ಅವಿಭಾಜ್ಯ ಅಂಗ. ಪ್ರಾಚೀನ ಕಾಲದಿಂದಲೂ ನಾಣ್ಯಗಳು ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ತಾಂತ್ರಿಕ ಇತಿಹಾಸದಲ್ಲಿ ಹಾಸುಹೊಕ್ಕಿ ಬೆಳೆದು ಬಂದಿವೆ. ವ್ಯಾಪಾರವನ್ನು ವಿನಿಮಯ ಪದ್ಧತಿಯಿಂದ ಹಣದಿಂದ ನಡೆಯಲಾರಂಭಿಸಿದ ಮೇಲೆ ನಾಣ್ಯಗಳು ಬಳಕೆಗೆ ಬಂದವು.

ಆರಂಭಕಾಲದಲ್ಲಿ ನಾಣ್ಯಗಳು ಅವುಗಳ ತೂಕ ಮತ್ತು ಬಳಕೆಗೊಂಡ ಲೋಹದ ಆಧಾರದ ಮೇಲೆ ಅದರ ಮೌಲ್ಯ ನಿರ್ಧರಿಸಲಾಗುತ್ತಿತ್ತು. ಭಾರತದಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಸೀಸ, ಹಿತ್ತಾಳೆ, ಟಿನ್, ಕಂಚು ಮತ್ತು ನಿಕ್ಕಲ್ ಈ ಲೋಹಗಳು ನಾಣ್ಯಗಳ ತಯಾರಿಕೆಯಲ್ಲಿ ಬಳಕೆಗೊಂಡಿವೆ. ಈ ನಾಣ್ಯಗಳ ಹೆಸರನ್ನು ಹೀಗೆ ಪಟ್ಟಿ ಮಾಡಬಹುದು. ಉದಾ.

ಚಿನ್ನದ ನಾಣ್ಯಗಳು

ಬೆಳೆ (೩/೪ ಗ್ರೇನ್)

ಹಾಗ (೧.೫ ಗ್ರೇನ್)

ಪಣ (೫/೬ ಗ್ರೇನ್)

ಕಾಟಿ (೧೩ ಗ್ರೇನ್)

ಪ್ರತಾಪ (೨೬ ಗ್ರೇನ್)

ವರಹ/ವರಾಹ (೫೨ ಗ್ರೇನ್)

ಮಾಡ

ಗದ್ಯಾಣ

ದೊಡ್ಡಗದ್ಯಾಣ

ದೊಡ್ಡ ವರಹ

ಬೆಳ್ಳಿ ನಾಣ್ಯ

ತಾರ (೩/೧೬)

ತಾಮ್ರದ ನಾಣ್ಯ

ಅರೆಕಾಸು

ಕಾಸು ಜಿತಲ್

ಕಾಣಿ

ದುಗ್ಗಾಣಿ

**೪.೧೧.೩.೨ ಮುಸ್ಲಿಂ ಆಳ್ವಕೆಯ ಕಾಲದ ನಾಣ್ಯಗಳು:**

ಟಂಕ

ಮೊಹರ

ಆಶ್ರಫಿ

ದಿನಾರ

ರುಪಿಯಾ

ಪೈಸೆ

ಜಿತಲ್

ಗನಿ

ಆದಿಲ್

ದಾಮ್

ಧರಣ

ದಿಹಾಂ

ಟಿಪ್ಪು ಸುಲ್ತಾನ ತನ್ನ ಆಳ್ವಿಕೆಯ ಕಾಲದಲ್ಲಿ ತಾನು ಟಂಕಿಸಿದ ನಾಣ್ಯಗಳಿಗೆ ಇಸ್ಲಾಮಿನ ಸಂತರ ಹಾಗೂ ಗ್ರಹಗಳ ಹೆಸರನ್ನು ಕೊಟ್ಟನು.

ಅಹ್ಮದಿ

ಸಾದಿಕಿ

ಫಾರೂಕೀ

ಹೈದರೀ

ಇಮಾಮಿ

ಆಬಿದೀ

ಬಾಕಿರೀ

ಜಾಫರೀ

ಕಾಜಿಮೀ

ಓಠಮಾನಿ/ಮುಷ್ತರಿ

ಜೋಹ್ರ

ಬಹ್ರಾಂ

ಅಖ್ತರ

ಕುತ್ಬ ಇತ್ಯಾದಿ.

ಈಸ್ಟ್ ಇಂಡಿಯಾ ಕಂಪನಿಯು **ಎರಡು ಪಗೋಡಾ, ಒಂದು ಪಗೋಡಾ, ಎರಡು ಮೊಹರು, ಒಂದು ಮೊಹರು, ಹದಿನೈದು ರೂಪಾಯಿ, ಹತ್ತು ರೂಪಾಯಿ ಮತ್ತು ಐದು ರೂಪಾಯಿ** ಮೌಲ್ಯದ ಚಿನ್ನದ ನಾಣ್ಯಗಳನ್ನು ಟಂಕಿಸಿತ್ತು. ಬ್ರಿಟಿಶ್ ಸರಕಾರ **ರೂಪಾಯಿ, ಅರ್ಧ ರೂಪಾಯಿ, ಕಾಲು ರೂಪಾಯಿ, ಎರಡು ಆಣೆ, ಒಂದು ಆಣೆ, ಅರ್ಧ ಆಣೆ** ನಾಣ್ಯಗಳನ್ನು ಮುದ್ರಿಸಿತ್ತು. ಕೆಲವು ಸಮಯ ಇಂಡಿಯಾ ಸರಕಾರ ರೂಪಾಯಿ ಮತ್ತು ಪೈಸೆ ನಾಣ್ಯಗಳನ್ನು ಮುಂದುವರೆಸಿತು. ಆನಂತರ ಭಾರತ ಸರಕಾರವು ೧೯೪೭ ರಿಂದ ೧೯೫೦ರ ವರೆಗೆ ರೂಪಾಯಿ ಮತ್ತು ಪೈಸೆ ನಾಣ್ಯಗಳನ್ನು ಮುಂದುವರೆಸಿತು. ಆನಂತರ ತನ್ನ ನಾಣ್ಯಗಳ ವಿನ್ಯಾಸದಲ್ಲಿ ಬದಲಾವಣೆ ತಂದು ಹೊಸ ಪೈಸೆಗೆ **ನಯಾ ಪೈಸೆ**ಯೆಂದು ಗುರುತಿಸಿ ಒಂದು ರೂಪಾಯಿಗೆ ನೂರು ಪೈಸೆಯೆಂದು ಘೋಷಿಸಲಾಯಿತು. ಇಲ್ಲಿಯವರೆಗೂ ಭಾರದ ಮೇಲೆ ಮೌಲ್ಯ ನಿರ್ಧರಿಸಲಾಗುತ್ತಿದ್ದ ಪದ್ಧತಿಯಿಂದ ಪ್ರತಿ ನಾಣ್ಯಕ್ಕೂ ಅದರದೆ ಆದ ಮೌಲ್ಯ ನಿರ್ಧರಿಸಲಾಯಿತು. ಚಿನ್ನ, ಬೆಳ್ಳಿ ಮತ್ತು ತಾಮ್ರಗಳ ಬದಲಾಗಿ ನಿಕ್ಕಲ್ ಮತ್ತು ತಾಮ್ರಗಳ ಮಿಶ್ರಣವನ್ನು ನಾಣ್ಯಗಳಿಗಾಗಿ ಬಳಸಲಾಯಿತು ಮತ್ತು ಕಾಗದದ ರೂಪಾಯಿಗಳನ್ನು

ಮುದ್ರಿಸಲಾಯಿತು. ಈ ಕಾಲದ ನಾಣ್ಯ ಮತ್ತು ನೋಟುಗಳನ್ನು ಬೇರೆ ಬೇರೆ ಹೆಸರುಗಳಿಂದ ಗುರುತಿಸದೆ ಅವುಗಳ ಮೌಲ್ಯದ ಮೇಲೆ ಗುರುತಿಸಲಾಗುತ್ತದೆ. ಉದಾ.

ಒಂದು ಪೈಸೆ

ಎರಡು ಪೈಸೆ

ಐದುಪೈಸೆ

ಹತ್ತು ಪೈಸೆ

ಇಪತ್ತು ಪೈಸೆ

ಇಪ್ಪತ್ತೈದು ಪೈಸೆ

ಐವತ್ತು ಪೈಸೆ

ಒಂದು ರೂಪಾಯಿ

ಎರಡು ರೂಪಾಯಿ

ಐದು ರೂಪಾಯಿ

ಇಪತ್ತು ರೂಪಾಯಿ

ಐವತ್ತು ರೂಪಾಯಿ

ನೂರು ರೂಪಾಯಿ

ಐದುನೂರು ರೂಪಾಯಿ

ಸಾವಿರ ರೂಪಾಯಿ ಮತ್ತು

ಎರಡು ಸಾವಿರ ರೂಪಾಯಿ ಈ ಮೌಲ್ಯದ ನಾಣ್ಯಗಳನ್ನು ಕಾಣಬಹುದಾಗಿದೆ. ಪ್ರಾಚೀನ ಕಾಲದಲ್ಲಿ **ನಾಣ್ಯ, ಪಣ, ಹಣ** ಮತ್ತು ಸಂಸ್ಕೃತದಿಂದ ಸ್ವೀಕರಿಸಿದ **ರೂಪಾಯಿ**(ರೂಪ್ಯಕಂ) ಈ ಪದಗಳಿಂದ ಗುರುತಿಸಲಾಗುತ್ತಿತ್ತು. ನಾಣ್ಯಗಳನ್ನು ಅವುಗಳ ಗಾತ್ರದ ಅಥವಾ ಆಕಾರದ ಮೇಲೆ ಅವನ್ನು ಗುರುತಿಸಲಾಗುತ್ತಿತ್ತು. ಕೆಲವೊಮ್ಮೆ ಬೇರೆ ಬೇರೆ ಕಾರಣಗಳಿಗಾಗಿ ಅವುಗಳಿಗೆ ಇಟ್ಟ ಹೆಸರಿನಿಂದ ಗುರುತಿಸಲಾಗಿದೆ. ನಡುಗನ್ನಡಕಾಲದಲ್ಲಿ ಉರ್ದು, ಮರಾಠಿಯ **ರೂಪಾಯಿ, ಪೈಸೆ, ರೋಕ್ಕಡ, ಸಿಕ್ಕಾ,** ಇಂಗ್ಲಿಶನ **ನೋಟ್, ಕ್ವಾಯಿನ್, ಡಾಲರ್** ಇತ್ಯಾದಿ ಪದಗಳು ಸ್ವೀಕರಿಸಿಕೊಳ್ಳಲಾಗಿದೆ. ನಾಣ್ಯಗಳನ್ನು ಟಂಕಿಸುವ ಸ್ಥಳಗಳನ್ನು ಟಂಕಶಾಲೆ, ಕಮ್ಮಟಗಳೆಂದು ಕರೆಯಲಾಗಿದೆ.

ಭಾರತದಲ್ಲಿ ವ್ಯಾವಹಾರಕ್ಕೆ ಸಂಬಂಧಿಸಿದ ಪದಕೋಶವು ತುಂಬಾ ವ್ಯಾಪಕವಾಗಿ ಬೆಳವಣಿಗೆ ಕಂಡಿದೆ. ಪ್ರಾಚೀನ ಕಾಲದಲ್ಲಿ ಸಂಸ್ಕೃತ, ಪ್ರಾಕೃತದಿಂದ ಸ್ವೀಕರಿಸಿದರೇ, ನಡುಗನ್ನಡ ಕಾಲದಲ್ಲಿ ಉರ್ದು, ಪಾರಸಿ, ಅರಬ್ಬಿ, ಮರಾಠಿಗಳಿಂದ ಸ್ವೀಕರಿಸಿದ ಪದಗಳು ಕಂಡುಬಂದಿವೆ. ಹೊಸಗನ್ನಡ ಪದಕೋಶದಲ್ಲಿ ಇಂಗ್ಲಿಶನಿಂದ ಪದಗಳನ್ನು ಸ್ವೀಕರಿಸಲಾಗಿದೆ.

## ೪.೧೨ ಅಳತೆ ಮತ್ತು ತೂಕ:

ಆಡಳಿತವು ಜನರ ಅನುಕೂಲಕ್ಕಾಗಿ ಅನೇಕ ಅಳತೆ ಮತ್ತು ತೂಕ ಮಾಡುವ ಕ್ರಮಗಳನ್ನು ಬಳಕೆಗೆ ತಂದಿದೆ. ಈ ಅಳತೆ ಮತ್ತು ತೂಕದ ಕ್ರಮಗಳು ಕಾಲದಿಂದ ಕಾಲಕ್ಕೆ ಬದಲಾವಣೆಗೊಳಗಾಗಿವೆ. ಕಾಲದಿಂದ ಕಾಲಕ್ಕೆ ಅಳತೆ ಮಾಡುವ ಕ್ರಮಗಳಲ್ಲೂ ಬದಲಾವಣೆಗಳು ಬಂದಿವೆ. ಈ ಅಳತೆ ಮತ್ತು ತೂಕಕ್ಕೆ ಸಂಬಂಧಿಸಿದ ಪದಗಳನ್ನು ಹೀಗೆ ಗುರುತಿಸಬಹುದು.

### ೪.೧೨.೧ ಉದ್ದಳತೆ

ಕನಾಟಕದ ಇತಿಹಾಸದಲ್ಲಿ ಆರಂಭ ಕಾಲದಲ್ಲಿ ಉದ್ದ ಅಳತೆ ಮಾಡಲು ಅನೇಕ ಉಪಕರಣಗಳನ್ನು ಬಳಸಿದ್ದು ಕಂಡುಕೊಳ್ಳಲಾಗಿದೆ. ಕಾಲ ಕಾಲಕ್ಕೆ ಈ ಉಪಕರಣಗಳಲ್ಲಿ ಅನೇಕ ಬದಲಾವಣೆಗಳಾಗಿದ್ದು ಇದಕ್ಕೆ ಸಂಬಂಧಿಸಿದ ಪದಕೋಶ ಬೆಳವಣಿಗೆ ಹೊಂದಿದೆ. ಪ್ರಾರಂಭಕಾಲದಲ್ಲಿ ಮಾನವರ ದೇಹದ ಅಂಗಾಗಳಿಂದ ಅಳೆಯುವ ಕ್ರಮ ಪ್ರಾರಂಭಗೊಂಡು ಇತರೆ ವಸ್ತುಗಳಿಗೆ ಬದಲಾಗಿದ್ದು ಕಂಡುಬಂದಿದೆ. ಅದರಲ್ಲೂ ಅನೇಕ ಪ್ರಕಾರಗಳು ಕಂಡುಬಂದು ಅವನ್ನ ಹೆಸರಿಸುವ ಪದಕೋಶ ಬೆಳದಿದೆ. ಮಾನವ ದೇಹದಿಂದ ಅಳೆಯುವ ಕ್ರಮವನ್ನು ಹೀಗೆ ಗುರುತಿಸಲಾಗಿದೆ. ಉದಾ.

*ಅಂಗೂಷ್ಟಕ್ಕೆ ಕನಿಷ್ಟಿಕೆ*
*ಯಿಂ ಗೋಕರಣಂ ವಿತಸ್ತಿ ಪೆಸರಿಲಿಯಂ ಮ*
*ಧ್ಯಾಂಗುಲಿ ಯಿಂದಮತಾಲಾ*
*ಕೃಂಗೇಣತರಜನಿಯಿ ನಳೆಯೆ ತಂ ಪ್ರದೇಶಂ//*
*ಅರತ್ನಿ ನಾಮಂ ಸಕನಿಸ್ಟಕಂ ಮೊಳಂ*
*ಸಿರಕ್ಕೆ ಮೇಲೆತ್ತಿದು ಬಾಹು ಪೌರುಷಂ*
*ಕಾರದವಯಂ ವ್ಯಾಮಾ ಮತಿ ಪ್ರಸಾರಿತಂ//*

(ಅಭಿದಾನ ವಸ್ತುಕೋಶ-ನಾಗವರ್ಮ)

ಈ ಸೂತ್ರದಲ್ಲಿ ***ಗೋಕರ್ಣ, ವಿತಷ್ಟಿ, ತಾಲ, ಗೇಣು, ಅರತ್ನಿ, ಮೊಳ, ರತ್ನಿ, ಪುರುಷ, ವ್ಯಾಮ***(ಕನ್ನಡದಲ್ಲಿ ಮಾರು ಎಂದು ಕರೆಯುತ್ತಾರೆ.) ಈ ಅಳತೆಗೆ ಸಂಬಂಧಿಸಿದ ಪದಗಳನ್ನು ಗುರುತಿಸಬಹುದು. ಆನಂತರ ಇತರ ಪ್ರಕಾರದ ಅಳತೆಗಳನ್ನು ಶಾಸನ ಮತ್ತು ಸಾಹಿತ್ಯಿಕ ಕೃತಿಗಳಲ್ಲಿ ಹೆಸರಿಸಲಾಗಿದೆ. ಇಲ್ಲಿ ಅವುಗಳ ಪ್ರಮಾಣಕ್ಕಿಂತ ಅಧ್ಯಯನದ ಉದ್ದೇಶದಂತೆ ಅವುಗಳ ಹೆಸರಿಗೆ ಮಹತ್ವ ನೀಡಲಾಗಿದೆ. ಈ ಅಳತೆಗಳು ಸಣ್ಣಕಣದಿಂದ ಪ್ರಾರಂಭಗೊಂಡು ಹೆಚ್ಚಾಗುತ್ತ ಹೋಗುತ್ತವೆ. ಉದಾ.

ಅಣು
ತ್ರಶರೇಣು
ಕೂದಲಳತೆ

ಹೇನಿನ ಅಳತೆ

ಸಾಸಿವೆ ಕಾಳು

ಗೋಧಿಕಾಳು

ಅಂಗುಲ

ಪ್ರಮಾಣ

ಹೆಜ್ಜೆ

ವಿತೈಷ್ಟಿ

ಹಸ್ತ

ದಂಡ

ಕ್ರೋಶ

ಯೋಜನ

ಈ ಮಾದರಿಯ ಪದಗಳು ನಮ್ಮ ಪ್ರಾಚೀನ ಕಾಲದಲ್ಲಿ ಬಳಕೆಯಾಗಿದ್ದರ ಉಲ್ಲೇಖಗಳು ಸಿಗುತ್ತವೆ. ಆನಂತರ ಈ ಅಳತೆಯ ಕ್ರಮದಲ್ಲಿ ಬದಲಾವಣೆ ಕಂಡು ಬಂದಿದ್ದು ಪ್ರಸ್ತುತ ಎರಡು ಮಾದರಿಯ ಅಳತೆ ಕ್ರಮವನ್ನು ಬಳಸಲಾಗುತ್ತಿದೆ. ಅದಕ್ಕೆ ಸಂಬಂಧಿಸಿದ ಪದಗಳು ಈ ರೀತಿಯಲ್ಲಿವೆ.

| **ಮೆಟ್ರಿಕ್ ಪದ್ಧತಿ** | **ಬ್ರಿಟಿಶ್ ಪದ್ಧತಿ** |
|---|---|
| ಮಿಲಿಮೀಟರ್ | ಅಂಗುಲ್ |
| ಸೆಂಟಿಮೀಟರ್ | ಅಡಿ |
| ಡೆಸಿಮೀಟರ್ | ಗಜ |
| ಮೀಟರ್ | ಫರ್ಲಾಂಗ್ |
| ಡೆಕಾಮೀಟರ್ | ಮೈಲಿ |
| ಹೆಕ್ಟಾಮೀಟರ್ | |
| ಕಿಲೊಮೀಟರ್ | |
| ಮಿರಿಯಾ ಮೀಟರ್ | |

ಇವುಗಳಲ್ಲದೆ ಚದುರು ಅಳತೆ ಮಾದರಿಯು ಬಳಕೆಯಲ್ಲಿದ್ದು ಅದಕ್ಕೆ ಸಂಬಂಧಿಸಿದ ಪದಗಳು ಹೀಗಿವೆ. ಉದಾ.

| **ಮೆಟ್ರಿಕ್ ಪದ್ಧತಿ** | **ಬ್ರಿಟಿಶ್ ಪದ್ಧತಿ** |
|---|---|
| ಚದುರ ಮಿಲಿ ಮೀಟರ್ | ಚದುರ ಅಂಗುಲ |
| ಚದುರ ಸೆಂಟಿಮೀಟರ್ | ಚದುರ ಅಡಿ |

| | |
|---|---|
| ಚದುರ ಡೆಸಿಮೀಟರ್ | ಚದುರಗಜ |
| ಚದುರ ಮೀಟರ್ | ಎಕರೆ |
| ಚದುರ ಡೆಕಾಮೀಟರ್ | ಚದುರ ಮೈಲಿ |
| ಚದುರ ಹೆಕ್ಟಾಮೀಟರ್ | |
| ಚದುರ ಕಿಲೊಮೀಟರ್ | |
| ಚದರ ಮಿರಿಯಾಮೀಟರ್ | |

### ೪.೧೨.೨ ಪ್ರದೇಶ ಅಳತೆ

ಪ್ರದೇಶವನ್ನು ಅಳೆಯಲು ಅನೇಕ ದೇಶಿ ಅಳತೆ ಕ್ರಮಗಳು ಗುರುತಿಸಲಾಗಿದೆ. ಇವುಗಳಲ್ಲಿ ಅನೇಕ ಪ್ರಕಾರಗಳಿದ್ದು, ಆಯಾ ಆಳ್ವಿಕೆಯ ಪ್ರದೇಶಕ್ಕೆ ಸಂಬಂಧಿಸಿದಂತೆ ಇವುಗಳಲ್ಲಿ ವ್ಯತ್ಯಾಸಗಳು ಇದ್ದವು. ಆಯಾ ಪ್ರದೇಶದ ಅಳತೆ ಪ್ರಕಾರಕ್ಕೆ ಆ ಪ್ರದೇಶದ ಹೆಸರಿನೊಂದಿಗೆ ಅಥವಾ ಅದನ್ನು ಬಳಕೆಗೆ ತಂದ ಅಧಿಕಾರಿಯ ಹೆಸರಿನಲ್ಲಿ ಗುರುತಿಸಲಾಗುತ್ತಿತ್ತು. ಉದಾ. ಬೆಳವಾಡಿಯ ಗಳೆ, ಮಲ್ಲಿನಾಥ ಕೋಲು ಇತ್ಯಾದಿ. ಇವುಗಳಲ್ಲದೆ ಪಾರಂಪರಿಕ ಮಾದರಿಯ ಅಳತೆ ಕ್ರಮವೊಂದಿತ್ತು ಅದಕ್ಕೆ ಸಂಬಂಧಿಸಿದ ಪದಗಳನ್ನು ಹೀಗೆ ಗುರುತಿಸಬಹುದು. ಉದಾ.

ಅಂಗೂಲ

ಹಸ್ತ

ಮಾರು

ಹಾಗ

ಮತ್ತರು/ನಿವರತನ/ವಿಶಿಕ

ಹಾಡ

ಗದ್ಯಾಣ ವರಹ

ಗುಂಟೆ

ಗಿರಿಕಲ್‌ಗಿಡ್ಡಕಣಿ

ಗಿಡ್ಡಕಣಿ

ಕಣಿ

ಧರನ

ಪೋಲೆ/ಗಳೆ/ಕೊಲು

ಹದಿನಾರನೆಯ ಶತಮಾನದಲ್ಲಿ ಈ ಕ್ರಮದಲ್ಲಿ ಬದಲಾವಣೆಯಾಗಿದ್ದು ಪ್ರಸ್ತುತ ಇಂಗ್ಲಿಶನಿಂದ ಸ್ವೀಕರಿಸಿಕೊಂಡ ಅಳತೆ ಕ್ರಮ ಮತ್ತು ಅದಕ್ಕೆ ಸಂಬಂಧಿಸಿದ ಅಳತೆ ಪರಿಕರಗಳನ್ನು ಬಳಸಲಾಗುತ್ತಿದೆ.

ಈ ಹೊಸ ಸ್ವೀಕರಣದಿಂದ ಹೊಸಪದಗಳು ಕನ್ನಡ ಪದಕೋಶಕ್ಕೆ ಸೇರಿಕೊಂಡಿವೆ ಅವುಗಳು ಹೀಗಿವೆ. ಉದಾ.

| **ಮೆಟ್ರಿಕ್ ಪದ್ಧತಿ** | **ಬ್ರಿಟಿಶ್ ಪದ್ಧತಿ** |
|---|---|
| ಮಿಲಿಯೇರ್ | ಅಂಗುಲ್ |
| ಸೆಂಟಿಯೇರ್ | ಲಿಂಕ್ |
| ಡೆಸಿಯೇರ್ | ಚೈನ್ |
| ಏರ್ | ಚದರ ಚೈನ್ |
| ಡೆಕೇರ್ | ಎಕರೆ |
| ಹೆಕ್ಟೇರ್ | |
| ಕಿಲೊಯೇರ್ | |
| ಚದರಕಿಲೋಮೀಟರ್ | |

**೪.೧೨.೩ ಪ್ರಮಾಣ ಅಳತೆ**

ಪ್ರಾಚೀನ ಕರ್ನಾಟಕದಲ್ಲಿ ಪ್ರಮಾಣ ಅಳತೆಯಲ್ಲಿ ದವಸ ಧಾನ್ಯಗಳು ಮತ್ತು ಬೆಣ್ಣೆ, ತುಪ್ಪ, ಎಣ್ಣೆಯಂತ ದ್ರವ ಪದಾರ್ಥಗಳನ್ನು ಅಳೆಯಲು ಬಳಕೆಗೊಂಡ ಆಳತೆ ಮಾಪನಗಳು ಹೆಚ್ಚು ಕಡಿಮೆ ಒಂದೇ ಆಗಿದ್ದವು. ಆದರೆ ಕೆಲವು ಅಳತೆ ಮಾಪನಗಳು ಬರಿ ಘನ ಪದಾರ್ಥಗಳನ್ನು ಅಳೆಯಲು ಬಳಸುವಂತವುಗಳಾಗಿದ್ದವು. ಅವುಗಳನ್ನು ಹೀಗೆ ಗುರುತಿಸಲಾಗಿದೆ. ಉದಾ.

ಅರ್ಕಾಲು

ಅಗ್ರ

ಅಚ್ಚು

ಅಟವಿ

ಅಡ್ಡಿ

ಅಡ್ಡಿಅಡ್ಡಿಡಿ

ಆಳ್ಮೊಟೆ

ಇಕ್ಕಳ

ಇಗುಲ

ಐಗಳ

ಕಂಡಗ

ಕಂಡಿ

ಕಮ್ಮಿ
ಕವಳಿಗೆ
ಕಳರುಗುಣಿಗೆ
ಕಾಡಿ
ಕುಳ
ಕೊಟ್ಟ
ಕೊಳಗ
ಗಾತ್ರ
ಗುಮ್ಮಿ
ಬಿಟ್ಟಿ
ಚಾರಿ
ಚಂಚಾಲುತೊಂಬ
ನಗ
ಪಡ್ಲ
ಪಲ್ಲ
ಪಾವು
ಅರೆ ಪಾವು
ಬಕ್ಕ
ಬಳ್ಳ
ಹೆಬ್ಬಳ್ಳ
ಮಣ
ಮಕ್ಕರಿ
ಮಾನ
ಸೇರು
ಪಂಚೇರು
ಅಚ್ಚೇರು
ಸೊಲ್ಗೆ
ಹೆಂಡಿಗೆ

ಗದ್ಯಾಣ

ಸಿದ್ದಿದೆ

ಗಿಡ್ಡ

ಅರೇವಣ

ಇಮ್ಮಣ

ವೊಕ್ಕಲು

ಪಂಚಕ

ಸಲಗೆ

ಇತ್ಯಾದಿ, ಪದಗಳು ಪ್ರಾಚೀನ ಕರ್ನಾಟಕದಲ್ಲಿ ಕಂಡುಬಂದಿವೆ. ಹೊಸಗಾಲದಲ್ಲಿ ಈ ಅಳತೆ ಮಾಪನದಲ್ಲೂ ಬದಲಾವಣೆಗಳು ಕಂಡುಬಂದು ಹಳೆಯ ಅಳತೆ ಮಾಪನಗಳಲ್ಲಿ ಹೆಚ್ಚಿನವು ಬಳಕೆಯಿಂದ ತಪ್ಪಿ ಹೋಗಿವೆ. ಧಾನ್ಯಗಳು ಅಳೆಯಲು ಬಳಕೆಯಾಗುವ ಕೆಲವು ಮಾಪನಗಳು ಮಾತ್ರ ಬಳಕೆಯಲ್ಲಿವೆ. ಅವು ಕೂಡ ಬಳಕೆಯಿಂದ ಕ್ರಮೇಣ ಮಾಯವಾಗುತ್ತಿವೆ. ಈ ಅಳತೆ ಕ್ರಮದ ಸ್ಥಾನದಲ್ಲಿಗ ಬ್ರಿಟಿಶ್ ಅಳತೆ ಮಾಪನಗಳು ಬಂದಿವೆ ಮತ್ತು ಘನ ಮತ್ತು ದ್ರವ ವಸ್ತುಗಳನ್ನು ಅಳತೆ ಮಾಡಲು ಬೇರೆ ಬೇರೆ ಮಾಪನಗಳನ್ನು ಬಳಸಲಾಗುತ್ತಿದೆ. ಅದಕ್ಕೆ ಸಂಬಂಧಿಸಿದ ಪದಗಳನ್ನು ಹೀಗೆ ಗುರುತಿಸಲಾಗಿದೆ. ಉದಾ.

### ೪.೧೨.೩.೧ ದ್ರವ ಅಳತೆ

| ಮೆಟ್ರಿಕ್ ಪದ್ದತಿ | ಬ್ರಿಟಿಶ್ ಪದ್ಧತಿ |
|---|---|
| ಮಿಲಿಲೀಟರ್ | ಗಿಲ್ಲು |
| ಸೆಂಟಿಲೀಟರ್ | ಪಿಂಟ್ |
| ಡೆಸಿಲೀಟರ್ | ಕ್ವಾಟ್ರ್ |
| ಲೀಟರ್ | ಗ್ಯಾಲನ್ |
| ಡೆಕಾಲೀಟರ್ | ಬ್ಯಾರಲ್ |
| ಹೆಕ್ಟೊಲೀಟರ್ | |
| ಕಿಲೊಲೀಟರ್ | |

ಧಾನ್ಯಗಳ ಅಳತೆಗೆ ತೂಕ ಮಾಡುವ ಕ್ರಮವನ್ನು ಅಳವಡಿಸಿಕೊಳ್ಳಲಾಗಿದೆ. ಧಾನ್ಯಗಳೊಂದಿಗೆ ಇತರೆ ಎಲ್ಲ ಮಾದರಿಯ ಘನ ವಸ್ತುಗಳನ್ನು ಅಳೆಯಲು ಈ ಅಳತೆ ಕ್ರಮವನ್ನು ಅಳವಡಿಸಲಾಗುತ್ತಿದೆ.

ಇದು ಕನ್ನಡಕ್ಕೆ ಸ್ವೀಕರಣದಿಂದಾಗಿ ಬಂದ ಮಾದರಿಯಾಗಿದೆ. ಇದಕ್ಕೆ ಸಂಬಂಧಿಸಿದ ಪದಕೋಶವನ್ನು ಹೀಗೆ ಗಿರುತಿಸಬಹುದು. ಉದಾ.

ಮಿಲಿಗ್ರಾಂ

ಸೆಂಟಿಗ್ರಾಂ

ಡೆಸಿಗ್ರಾಂ

ಗ್ರಾಂ

ಡೆಕಾಗ್ರಾಂ

ಹೆಕ್ಟೊಗ್ರಾಂ

ಕಿಲೋಗ್ರಾಂ

ಮಿರಿಯಾಗ್ರಾಂ

ಕ್ವಿಂಟಾಲ್

ಮೆಟ್ರಿಕ್ ಟನ್ ಇಂತಹ ಪದಗಳು ಕನ್ನಡ ಪದಕೋಶಕ್ಕೆ ಹೊಸದಾಗಿ ಸೇರಿಕೊಂಡಿವೆ.

**೪.೧೨.೩.೨ ಘನ ಅಳತೆ**

| ಮೆಟ್ರಿಕ್ ಪದ್ದತಿ | ಬ್ರಿಟಿಶ್ ಪದ್ಧತಿ |
|---|---|
| ಘನ ಮಿಲಿ ಮೀಟರ್ | ಘನ ಅಂಗುಲ |
| ಘನ ಸೆಂಟಿಮೀಟರ್ | ಘನ ಅಡಿ |
| ಘನ ಡೆಸಿಮೀಟರ್ | ಘನ ಗಜ |
| ಘನ ಮೀಟರ್ | |
| ಘನ ಡೆಕಾಮೀಟರ್ | |
| ಘನ ಹೆಕ್ಟಾಮೀಟರ್ | |
| ಘನ ಕಿಲೊಮೀಟರ್ | |
| ಘನ ಮಿರಿಯಾಮೀಟರ್ | |

ಕನ್ನಡದಲ್ಲಿ ಲೋಹಗಳ ಮಾರಾಟದ ಇತಿಹಾಸವನ್ನು ನೋಡಿದರೆ ಮೊದಮೊದಲು ವ್ಯವಹಾರಗಳಲ್ಲಿ ಬಳಕೆಗೊಂಡಿದ್ದು ಬಂಗಾರ ಮತ್ತು ಬೆಳ್ಳಿ. ಇದರ ಹೊರತಾಗಿ ಕಬ್ಬಿಣ, ತಾಮ್ರ, ಕಂಚನ್ನು ಜನ ಬಳಸುತ್ತಿದ್ದರು. ಪ್ರಾಚೀನ ಕಾಲದಲ್ಲಿ ಬಂಗಾರ, ಬೆಳ್ಳಿ ಮತ್ತು ಇತರೆ ಲೋಹಗಳನ್ನು ಅಳೆಯುವ ಕ್ರಮವನ್ನು ಗುರುತಿಸುವ ಪದಗಳನ್ನು ಹೀಗೆ ಕಂಡುಕೊಳ್ಳಲಾಗಿದೆ. ಉದಾ.

### ೪.೧೨.೪ ಬಂಗಾರ/ಬೆಳ್ಳಿ

ಪಲ

ಕರ್ಷ

ಪುರನ

ಧರನ

ಮಾಸ

ಪಣ

ಗುಂಜಾ

ಗಂದಕ

ಬಂಗಾರ ಮತ್ತು ಬೆಳ್ಳಿಯನ್ನು ಅಳತೆ ಮಾಡುವಲ್ಲಿ ಆಧುನಿಕ ಮಾದರಿಗಳು ಬಳಕೆಗೊಳ್ಳುತ್ತಿದ್ದು, ಅದಕ್ಕೆ ಸಂಬಂಧಿಸಿದ ಪದಗಳನ್ನು ಹೀಗೆ ಗುರುತಿಸಬಹುದು.

ಗ್ರೇನ್

ಪೆನಿವೇಯ್ಟ್

ಔನ್ಸ್

ಪೌಂಡ್

### ೪.೧೨.೫ ಇತರೆ ಲೋಹ

ಭರ

ತುಲ

ಪಲ

ಪ್ರಸ್ಥ

ಸತೆರ

ದಿನಾರ

ದ್ರಕ್ಷುಣ

ಭಾಗ

ಅಂಶ

ಯವ

ಕಾಲ

ಪಾದ

ಇತರೆ ಲೋಹಗಳನ್ನು ಆಧುನಿಕ ಕಾಲದಲ್ಲಿ ಎಲ್ಲ ಘನವಸ್ತುಗಳ ಹಾಗೆ ಕಿಲೋಗ್ರಾಂ ಅಳತೆಯಲ್ಲಿ ಅಳೆಯಲಾಗುತ್ತಿದೆ.

**೪.೧೨.೬ ಔಷಧ ತೂಕ**

ಗ್ರೇನ್

ಸ್ಕ್ರೂಪಲ್

ಡ್ರಾಮ್

ಔನ್ಸ್

ಪೌಂಡ್

**೪.೧೨.೭ ಕಾಗದ ಅಳತೆ**

ಹಾಳೆ

ದಸ್ತು

ರೀಮ್ಮ

ಬಂಡಲ್

ಬೇಲ್

**೪.೧೨.೮ ಪುಸ್ತಕದ ಅಳತೆ**

ಪೊಲ್ಸ್ ಅಷ್ಟದಳ

ಕ್ರೌನ್ ಅಷ್ಟದಳ

ಡೆಮ್ಮಿ ಅಷ್ಟದಳ

ರಾಯಲ್ ಅಷ್ಟದಳ

ಕ್ರೌನ್ ಪೋಲಿಯೊ

ರಾಯಲ್ ಪೋಲಿಯೊ

**೪.೧೨.೯ ಕಾಲದ ಅಳತೆ**

ಜನಜೀವನದಲ್ಲಿ ಕಾಲದ ಗಣನೆ ತುಂಬಾ ಮಹತ್ವ ಪಡೆದುಕೊಂಡಿದೆ. ದಿನನಿತ್ಯದ ಜೀವನ ಪ್ರಾರಂಭವಾಗುವುದೇ ಸಮಯದ ಆಧಾರದ ಮೇಲೆ ಮತ್ತು ಭಾರತೀಯ ಅನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳು ಈ ಕಾಲದ ಗಣನೆಯ ಮೇಲೆ ಅವಲಂಬನೆಯಾಗಿವೆ. ಭಾರತೀಯರಲ್ಲಿ ಕಾಲದ ಬಗೆಗೆ ತುಂಬಾ ನಂಬಿಕೆ ಮತ್ತು ಅಪನಂಬಿಕೆಗಳು ಇವೆ. ಸಾಮಾನ್ಯವಾಗಿ ವಿಶ್ವದ ಎಲ್ಲ ದೇಶಗಳಂತೆ ಭಾರತದಲ್ಲೂ ಗ್ರಹಗತಿಗಳ ಮೇಲೆಯೇ ಕಾಲದ ಗಣನೆ ನಿರ್ಧರಿಸಲಾಗುತ್ತದೆ.

ಭಾರತೀಯರು ಪ್ರಾಚೀನ ಕಾಲದಲ್ಲಿ ಸಮಯದ ಗಣನೆಯನ್ನು ಗಳಿಗೆ, ಕ್ಷಣ, ದಿನ, ವಾರ, ತಿಂಗಳು, ವರ್ಷಗಳ ಆಧಾರದ ಮೇಲೆ ಅಳೆಯಲಾಗುತ್ತದೆ. ಪ್ರಸ್ತುತ ಕಾಲದಲ್ಲಿ ಇಂಗ್ಲಿಶನಿಂದ ಸ್ವೀಕರಿಸಿಕೊಂಡ

ಸೆಕೆಂಡ್

ಮಿನಿಟ್/ನಿಮಿಷ

ಅವರ್

ಡೆ

ವೀಕ್

ಮಂತ್

ಇಯರ್, ಇತ್ಯಾದಿಗಳು ಕನ್ನಡ ಪದಕೋಶದ ಭಾಗವಾಗಿವೆ.

ಭಾರತೀಯ ಪಂಚಾಂಗದ ಪ್ರಕಾರ ದಿನಗಳನ್ನು ಏಳು ದಿನಗಳಿಗೆ ಒಂದು ವಾರವೆಂದು ಪರಿಗಣಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಸೂರ್ಯ ಮತ್ತು ಚಂದ್ರರನ್ನು ಗ್ರಹಗಳೆಂದು ಪರಿಗಣಿಸಿ ಏಳು ಗ್ರಹಗಳ ಹೆಸರನ್ನು ಒಂದೊಂದು ದಿನಕ್ಕೆ ಹೆಸರಿಸಲಾಗಿತ್ತು. ಉದಾ.

ಭಾನುವಾರ

ಸೋಮವಾರ

ಮಂಗಳವಾರ

ಬುಧವಾರ

ಗುರುವಾರ

ಶುಕ್ರವಾರ

ಶನಿವಾರ,

ಬ್ರಿಟಿಶರ ಆಗಮನದಿಂದ ಆದ ಇಂಗ್ಲಿಶ್ ಪ್ರಭಾವವು ಅವರ ದಿನಗಳ ಹೆಸರನ್ನು ಕನ್ನಡದಲ್ಲಿ ಬಳಸುವಂತಾಯಿತು. ಉದಾ,

ಸನ್‌ಡೆ

ಮಂಡೆ

ಟ್ಯೂಸ್‌ಡೆ

ವೆಡ್ನೆಸ್‌ಡೆ

ಥರ್ಸ್‌ಡೆ

ಫ್ರಾಯ್ಡೆ

ಸಾಟರ್ಡೆ

ದಿನಗಳನ್ನು ತಿಥಿಗಳ ಆಧಾರದ ಮೇಲೆ ತಿಂಗಳಿಗೆ ಎರಡು ಪಕ್ಷವಾಗಿ ವಿಭಾಗಿಸಲಾಗಿದೆ. ಉದಾ.

ಪ್ರತಿಪತ(ಪಾಡ್ಯ)

ದ್ವಿತಿಯ(ಬಿದಿಗೆ)

ತೃತೀಯ(ತದಿಗೆ)

ಚತುರ್ಥಿ(ಚೌತಿ)

ಪಂಚಮಿ

ಷಷ್ಠಿ

ಸಪ್ತಮಿ

ಅಷ್ಟಮಿ

ನವಮಿ

ದಶಮಿ

ಏಕಾದಶಿ

ದ್ವಾದಶಿ

ತ್ರಯೋದಶಿ

ಚತುರ್ದಶಿ

ಪೂರ್ಣಿಮಾ/ಅಮಾವಾಸ್ಯೆ

ತಿಂಗಳನ್ನು ಚಂದ್ರರ ಚಲನೆಯ ಆಧಾರದ ಮೇಲೆ ನಿರ್ಧರಿಸಲಾಗುತ್ತದೆ. ಹದಿನೈದು ದಿನಗಳಿಗೆ ಒಂದು ಪಕ್ಷವೆಂದು, ತಿಂಗಳನ್ನು ಎರಡು ಪಕ್ಷವಾಗಿ ವಿಂಗಡಿಸಲಾಗಿದೆ. ಮೊದಲ ಪಕ್ಷದ ಕೊನೆ ದಿನವನ್ನು ಹುಣ್ಣಿಮೆಯಾಗಿ, ಎರಡನೆ ಪಕ್ಷದಕೊನೆಯ ದಿನವನ್ನು ಅಮವಾಸ್ಯೆಯಾಗಿ ಪರಿಗಣಿಸಲಾಗಿದೆ. ಹೀಗೆ ಒಂದು ಹುಣ್ಣಿಮೆ ಮತ್ತು ಒಂದು ಅಮವಾಸ್ಯೆಯ ನಡುವಿನ ದಿನವನ್ನು ತಿಂಗಳಾಗಿ ಪರಿಗಣಿಸಲಾಗಿದೆ. ಇಂತ ಹನ್ನೆರಡು ತಿಂಗಳನ್ನು ಒಂದು ವರ್ಷವೆಂದು ಪರಿಗಣಿಸಲಾಗುತ್ತದೆ. ಭಾರತೀಯರು ತಿಂಗಳನ್ನು ಚಂದ್ರಮಾನದ ಆಧಾರದ ಮೇಲೆ ವಿಂಗಡಿಸಲಾಗಿದೆ. ಉದಾ.

ಚೈತ್ರ

ವೈಶಾಖ

ಜೇಷ್ಠ

ಆಷಾಢ

ಶ್ರಾವಣ

ಭಾದ್ರಪದ

ಅಶ್ವಯುಜ

ಕಾರ್ತಿಕ

ಮಾರ್ಗಶಿರ

ಪುಷ್ಯ

ಮಾಘ

ಫಾಲ್ಗುಣ

ಹಿಂದೂ ಪಂಚಾಂಗದ ಪ್ರಕಾರ ಈ ಹೆಸರುಗಳ ಬಳಕೆ ಕಂಡು ಬಂದಿದೆ. ಈ ಹೆಸರುಗಳು ಸಂಸ್ಕೃತದಿಂದ ಸ್ವೀಕರಿಸಿದ್ದಾಗಿವೆ. ಈ ಹೆಸರುಗಳ ಬಳಕೆ ನಿಂತು ಹೋಗಿದೆ. ಪ್ರಸ್ತುತ ಇಂಗ್ಲಿಶ್‌ನಿಂದ ಸ್ವೀಕರಿಸಿದ ಹೆಸರುಗಳ ಬಳಕೆ ಕಂಡುಬಂದಿದೆ. ಉದಾ.

ಜನವರಿ

ಫೆಬ್ರವರಿ

ಮಾರ್ಚ್

ಏಪ್ರಿಲ್

ಮೇ

ಜೂನ್

ಜುಲೈ

ಆಗಸ್ಟ್

ಸೆಪ್ಟೆಂಬರ್

ಅಕ್ಟೋಬರ್

ನವೆಂಬರ್

ಡಿಸೆಂಬರ್

ಈ ಹೆಸರುಗಳು ಎಲ್ಲ ವಲಯಗಳಲ್ಲೂ ಬಳಕೆಯಾಗುತ್ತಿವೆ. ನಡುಗನ್ನಡ ಕಾಲದಲ್ಲಿ ಇಸ್ಲಾಂ ಧರ್ಮದ ಪ್ರಭಾವದಿಂದ ಅಥವಾ ಮುಸ್ಲಿಂ ಆಳ್ವಿಕೆಯ ಕಾರಣದಿಂದ ಈ ಧರ್ಮದ ತಿಂಗಳ ಮತ್ತು ದಿನಗಳ ಹೆಸರುಗಳು ಕೆಲವು ದಾಖಲೆಗಳಲ್ಲಿ ಬಳಕೆಯಾಗಿದ್ದನ್ನು ಕಾಣಬಹುದು. ಆದರೂ ಅವುಗಳ ಬಳಕೆಯ ವ್ಯಾಪಕತೆ ಅಷ್ಟೊಂದು ಕಂಡುಬಂದಿಲ್ಲ.

ಹತ್ತು ವರ್ಷಗಳ ಅವಧಿಯನ್ನು ದಶಕವೆಂದು, ನೂರು ವರ್ಷಗಳ ಅವಧಿಯನ್ನು ಶತಕವೆಂದು ಕರೆಯಲಾಗುತ್ತದೆ. ಬ್ರಿಟಿಶ್‌ರ ಸಂಪರ್ಕದಿಂದ ಈ ಅವಧಿಗಳನ್ನು ಗುರುತಿಸುವ ಅನೇಕ ಪದಗಳು ಬಳಕೆಗೆ ಬಂದಿವೆ. ಉದಾ.

೨೫ ವರ್ಷಗಳ ಅವಧಿಯನ್ನು **ಸಿಲ್ವರ್ ಜುಬ್ಲಿ,**

೫೦ ವರ್ಷಗಳ ಅವಧಿಯನ್ನು **ಗೊಲ್ಡನ್ ಜುಬ್ಲಿ,**

೭೫ ವರ್ಷಗಳ ಅವಧಿಯನ್ನು **ಡೈಮಂಡ್ ಜುಬ್ಲಿ,**

೧೦೦ ವರ್ಷಗಳ ಅವಧಿಯನ್ನು **ಸೆಂಚೂರಿ ಇಯರ್,**

ಇತ್ಯಾದಿ ಪದಗಳನ್ನು ಸ್ವೀಕರಿಸಲಾಗಿದೆ. ಇವುಗಳನ್ನು ಕನ್ನಡದಲ್ಲಿ **ರಜತ ಮಹೋತ್ಸವ, ಸುವರ್ಣ ಮಹೋತ್ಸವ, ವಜ್ರ ಮಹೋತ್ಸವ, ಮತ್ತು ಶತಮಾನೋತ್ಸವ** ಎಂದು ಅನುವಾದಿಸಲಾಗಿದೆ.

ಭಾರತೀಯರಲ್ಲಿ ತೆದಿಯನ್ನು ಯುಗವನ್ನಾಗಿ(ಕೃತಯುಗ, ದ್ವಾಪರಯುಗ, ತ್ರೇತಾಯುಗ, ಕಲಿಯುಗ), ಶತಮಾನಗಳನ್ನಾಗಿ ಎಣಿಸಲಾಗುತ್ತದೆ. ಯಾವ ಯುಗಕ್ಕೆ ಸೇರಿದ ಅಥವಾ ಯಾವ ಶತಮಾನಕ್ಕೆ ಸೇರಿದ ಎಂದು ಗುರುತಿಸಲು ಈ ಪರಿಭಾಷೆಗಳು ಬಳಕೆಯಾಗಿವೆ. ಭಾರತದಲ್ಲಿ ಶತಕಗಳನ್ನು ಗುರುತಿಸಲು ಅನೇಕ ಹೆಸರುಗಳು ಬಳಕೆಯಾಗಿವೆ. ಉದಾ. **ವಿಕ್ರಮ ಶಕ, ಶಕವರುಷ, ಗುಪ್ತ ಶಕ, ಚಾಲುಕ್ಯ ಶಕ, ಶಾಲಿವಾಹನ ಶಕ,** ಇತ್ಯಾದಿ. ಮದ್ಯಕಾಲೀನ ಕರ್ನಾಟಕದಲ್ಲಿ ಉರ್ದುವಿನಿಂದ **ಹಿಜರಿ ಶಕ** ಸ್ವೀಕರಿಸಿಕೊಳ್ಳಲಾಗಿದೆ. ಆನಂತರ ಇಂಗ್ಲಿಶರ ಆಳಿಕೆಗೆ ಒಳಪಟ್ಟ ಮೇಲೆ ಅವರಿಂದ ಕ್ರಿಸ್ತ್ ಪೂರ್ವ, ಕ್ರಿಸ್ತ್‌ಶಕಗಳು ಪದಗಳನ್ನು ಕನ್ನಡದಲ್ಲಿ ಸ್ವೀಕರಿಸಲಾಗಿದೆ.

ಕರ್ನಾಟಕದಲ್ಲಿ ಅಳತೆ ಮತ್ತು ಮಾಪನಕ್ಕೆ ಸಂಬಂಧಿಸಿದಂತೆ ಪದಗಳಲ್ಲಿ ಗಣನೀಯ ಬೆಳವಣಿಗೆ ಕಂಡು ಬಂದಿವೆ. ಕಾಲ ಕಾಲಕ್ಕೆ ಆದ ಭಾಷಿಕ ಪ್ರಭಾವಗಳಿಂದ ಅನೇಕ ಮಾಪನಗಳು ಮತ್ತು ಅದಕ್ಕೆ ಸಂಬಂಧಿಸಿದ ಪದಕೋಶವು ಕನ್ನಡಕ್ಕೆ ಸ್ವೀಕರಣವಾಗಿ ಬಂದಿವೆ.

ಈ ಅಧ್ಯಾಯದಲ್ಲಿ ಕನ್ನಡ ಪದಕೋಶವನ್ನು ವಿವಿಧ ವಲಯಗಳಿಗನುಗುಣವಾಗಿ ವಿಂಗಡಿಸಿ ಕೊಳ್ಳಲಾಗಿದೆ. ಪ್ರಾಥಿನಿಧಿಕವಾಗಿ ಮಹತ್ವದ ವಲಯಗಳ ಪದಕೋಶದಲ್ಲಿ ಆದ ಬೆಳವಣಿಗೆಯನ್ನು ಪರಿಶೀಲಿಸಲಾಗಿದೆ. ಆಡಳಿತ, ಶಿಕ್ಷಣ, ಸಾಮಾಜಿಕ ಜೀವನ, ವ್ಯವಹಾರಕ್ಕೆ ಸಂಬಂಧಿಸಿದ ಪದಕೋಶದಲ್ಲಿ ಮಹತ್ವದ ಬದಲಾವಣೆಗಳು ಕಂಡುಬಂದಿವೆ. ಆಧುನಿಕ ಕಾಲದಲ್ಲಿ ಚಾಲ್ತಿಗೆ ಬಂದ ವಲಯಗಳಲ್ಲಿ ಇಂಗ್ಲಿಶ್ ಪದಗಳು ವ್ಯಾಪಕವಾಗಿವೆ. ಆಡಳಿತ ಮತ್ತು ಸಾಮಾಜಿಕ ದಿನನಿತ್ಯದ ಜೀವನದ ಪದಕೋಶದಲ್ಲಿ ಪಾರಸಿ, ಅರಬ್ಬಿ ಉರ್ದು, ಮರಾಠಿಗಳು ಕಂಡುಬರುತ್ತವೆ. ಅಧ್ಯಯನಕ್ಕೆ ಒಳಪಡಿಸಿದ ಎಲ್ಲ ವಲಯಗಳಲ್ಲಿ ಸಂಸ್ಕೃತ ಮತ್ತು ಇಂಗ್ಲಿಶ್ ಪದಗಳು ಹೆಚ್ಚು ಕನ್ನಡ ಪದಕೋಶದ ಭಾಗವಾಗಿ ಬಂದು ಕನ್ನಡ ಪದಕೋಶವನ್ನು ಬೆಳಸಿವೆ.



# ಅಧ್ಯಾಯ : ಐದು

## ಪದಕೋಶದ ರಚನಾ ಸ್ವರೂಪ

೫.೧ ಹೊಸ ಸೃಷ್ಟಿ

೫.೨ ಸಾದೃಶ್ಯ ಸೃಷ್ಟಿ

೫.೩ ಸ್ವೀಕರಣ

೫.೩.೧ ಶಬ್ದ ಸ್ವೀಕರಣ,

೫.೩.೨ ಭಾಷಾಂತರ ಸ್ವೀಕರಣ,

೫.೩.೩ ಮಿಶ್ರ ಸ್ವೀಕರಣ

೫.೪ ಅರ್ಥ

# ಅಧ್ಯಾಯ : ಐದು

## ಪದಕೋಶದ ರಚನಾ ಸ್ವರೂಪ

ಎಲ್ಲ ಜೀವಂತ ಭಾಷೆಗಳ ಪದಕೋಶದಂತೆ ಕನ್ನಡ ಪದಕೋಶವು ಕೂಡ ನಿರಂತರವಾಗಿ ಬೆಳವಣಿಗೆ ಹೊಂದುತ್ತಾ ಬಂದಿದೆ. ಈ ಬೆಳವಣಿಗೆಯು ಆಯಾ ಕಾಲದ ಪ್ರಭಾವ ಪ್ರೇರಣೆಯಿಂದ ನಡೆದಿದೆ. ಈ ಪ್ರಭಾವವು ಅನೇಕ ಕಡೆಯಿಂದ ಆಗಿರುವುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ. ಕನ್ನಡವು ಮೊದಲಿನಿಂದಲೂ ಅನೇಕ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿಕೊಂಡಿದೆ. ಈ ಕಾರಣದಿಂದ ಕನ್ನಡದಲ್ಲಿ ಮೂಲ ಪದಕೋಶ ಮತ್ತು ಸ್ವೀಕರಣ ಪದಕೋಶ ಎಂಬ ಎರಡು ಮಾದರಿಗಳು ರಚನೆಯಾಗಿವೆ. ಮೂಲ ಪದಕೋಶ ಬಳಕೆಯ ಜೊತೆಗೆ ಸ್ವೀಕರಣ ಪದಕೋಶವು ಬಳಕೆಯಾಗುತ್ತಿದೆ.

ಕನ್ನಡಕ್ಕೆ ಸ್ವೀಕರಣವಾಗಿ ಬಂದಿರುವ ಸಂಸ್ಕೃತ, ಪ್ರಾಕೃತ, ಅರಬ್ಬಿ, ಪಾರಸಿ, ಉರ್ದು, ಮರಾಠಿ ಮತ್ತು ಇಂಗ್ಲಿಶ್ ಭಾಷೆಯ ಪದಗಳು ಬಳಕೆಯಲ್ಲಿವೆ. ಈ ಸ್ವೀಕರಣ ಪದಕೋಶದ ಸ್ವರೂಪ ಕನ್ನಡ ಪದಗಳ ರಚನೆಗೆ ಭಿನ್ನವಾಗಿ ಕಂಡು ಬಂದಿದೆ. ಈ ಭಿನ್ನರಚನೆಗಳು ಕನ್ನಡಕ್ಕೆ ಒಗ್ಗಿ ಕನ್ನಡದಲ್ಲಿ ಬಳಕೆಯಾಗುತ್ತಿವೆ. ಹೀಗೆ ಕನ್ನಡ ರಚನೆಗೆ ಹೊಂದಿಕೊಳ್ಳುವಾಗ ಈ ಪದಗಳಲ್ಲಿ ಆದ ಬದಲಾವಣೆಗಳು ಕಂಡುಬಂದಿವೆ.

ಈ ಸ್ವೀಕರಿಸಿಕೊಂಡ ಪದಗಳಿಗೆ ಕನ್ನಡಕ್ಕೆ ಅನುವಾದಿಸುವ ಕೆಲಸವು ಕನ್ನಡದಲ್ಲಿ ನಡೆದಿದೆ. ಅದರಲ್ಲಿ ಸಂಸ್ಕೃತ, ಪ್ರಾಕೃತ, ಅರಬ್ಬಿ, ಪಾರಸಿ, ಉರ್ದು, ಮರಾಠಿಯಿಂದ ಸ್ವೀಕರಿಸಿದ ಪದಗಳನ್ನು ನೇರವಾಗಿ ಬಳಸಲಾಗಿದೆ. ಆದರೇ ಇಂಗ್ಲಿಶನಿಂದ ಸ್ವೀಕರಿಸಿದ ಅನೇಕ ಪದಗಳಿಗೆ ಪರ್ಯಾಯ ಪದಗಳನ್ನು ರಚಿಸಿಕೊಳ್ಳಲಾಗಿದೆ. ಈ ರೀತಿ ಪದಗಳನ್ನು ರಚಿಸುವಲ್ಲಿ ಅನೇಕ ಮಾದರಿಯನ್ನು ಅನುಸರಿಸಲಾಗಿದೆ. ಈ ಮಾದರಿಗಳಲ್ಲಿ ಮುಖ್ಯವಾಗಿ ಹೊಸ ಸೃಷ್ಟಿ, ಸಾದೃಶ್ಯ ಸೃಷ್ಟಿ ಮತ್ತು ಅನುವಾದ ಮಾಡುವ ಈ ಮೂರು ಮಾದರಿಗಳು ಕನ್ನಡದಲ್ಲಿ ಮುಖ್ಯವಾಗಿ ಕಂಡು ಬಂದಿವೆ. ಈ

ಮೂರು ಮಾದರಿಗಳಿಗೆ ಸಂಬಂಧಿಸಿದಂತೆ ಕನ್ನಡ ಪದಕೋಶದ ಸ್ವರೂಪ ಎಂತದ್ದು ಎನ್ನುವುದನ್ನು ಈ ಅಧ್ಯಾಯದಲ್ಲಿ ಚರ್ಚೆಮಾಡಲಾಗಿದೆ.

### ೫.೧ ಹೊಸ ಸೃಷ್ಟಿ:

ಕನ್ನಡಕ್ಕೆ ಸ್ವೀಕರಿಸಿಕೊಂಡ ಪದಗಳನ್ನು ಕನ್ನಡದಲ್ಲಿ ಬಳಸಬೇಕೆನ್ನುವ ಕಾರಣದಿಂದ ಈ ಪದಗಳಿಗೆ ಪರ್ಯಾಯವಾಗಿ ಹೊಸ ಪದಗಳನ್ನು ರಚಿಸಿಕೊಳ್ಳಲಾಗಿದೆ. ಈ ಪದಗಳು ಅನೇಕ ಮಾದರಿಯನ್ನು ಬಳಸಿಕೊಂಡು ರಚನೆಗೊಂಡಿವೆ. ಆ ರಚನೆಗಳನ್ನು ಹೀಗೆ ವಿಭಾಗಿಸಿಕೊಳ್ಳಬಹುದು.

#### ೫.೧.೧. ಕನ್ನಡ + ಕನ್ನಡ

ಕಾಲ್ಚೆಂಡು

ಕಾಳಸಂತೆ

ಕಪ್ಪುಹಣ

ತೆರಿಗೆ ಹಣ

ತೆರಿಗೆಗಳ್ಳ

ಕರೆಗಂಟೆ

ಹನಿನೀರಾವರಿ

ಸೊಳ್ಳೆಪರದೆ

ಹಲ್ಲುಪುಡಿ

ಮಳೆಬಿಲ್ಲು

ಕೈಚೀಲ

ಪಕ್ಷಿನೋಟ

#### ೫.೧.೨. ಸಂಸ್ಕೃತ +ಸಂಸ್ಕೃತ

ದೂರಶಿಕ್ಷಣ

ವೃತ್ತಿ ಶಿಕ್ಷಣ

ಭಾರಜಲ

ಆಕಾಶವಾಣಿ

ಶೀಘ್ರಲಿಪಿ

ತುರ್ತುಪತ್ರ

ಶಾಸನಸಭೆ

ಜಲಮಂಡಳಿ

ವರದಕ್ಷಿಣೆ

ಸ್ವಾತಂತ್ರ್ಯ ಯೋಧ

ಕೀಟನಾಶಕ

ವಿದೇಶಿ ವಿನಿಮಯ

ಭವಿಷ್ಯನಿಧಿ

ಮುಕ್ತ ವಿಶ್ವವಿದ್ಯಾಲಯ

ಸಹಾಯನಿಧಿ

ಪ್ರಸೂತಿ ಗೃಹ

ಖಾದ್ಯ ತೈಲ

ಪುಷ್ಪಕಂಸ

ಅಗ್ನಿಶಾಮಕ ದಳ

ಅಂಗಾಂಶ ಕೃಷಿ

ಸಾಲಕೂಪ

ದತ್ತಿನಿಧಿ

ವಾಯುಯಾನ

ಭೂಕಂಪ

ಜನಾಂದೋಲನ

ಆರಕ್ಷಕದಳ

ನಾಮಫಲಕ

ರೋಚಕ ವಿಜಯ

ವಿಧಾನಸೌಧ

ಗೃಹ ಬಂಧನ

ಜನಜಾಗೃತಿ

ಕುಟುಂಬ ಯೋಜನೆ

ಕುಟುಂಬ ನಿಯಂತ್ರಣ

ಪ್ರೌಢ ಶಾಲೆ

ಋಣಮೇಳ
ಪುಸ್ತಕ ಭಂಡಾರ
ಪ್ರಯೋಗಶಾಲೆ
ಗಗನಯಾತ್ರಿ
ಮೌಲ್ಯಮಾಪನ
ಪರಿಶಿಷ್ಟ ಸಂಚಿಕೆ
ವ್ಯಂಗ್ಯಚಿತ್ರ
ವೇಗವರ್ಧಕ
ಏಕಾಧಿಪತ್ಯ
ಪರಿಪಥ
ಸ್ವಾಗತಾಧಿಕಾರಿ
ಅಧಿಕಾರವರ್ಗ

**೫.೧.೩. ಕನ್ನಡ+ಸಂಸ್ಕೃತ**

ತಡೆಯಾಜ್ಞೆ
ಬೆರಳಚ್ಚು ಯಂತ್ರ
ನೆರೆಪೀಡಿತ
ದೋಸೆಯಂತ್ರ
ಅಡಿಗೆ ಅನಿಲ
ಮರುಭರ್ತಿ
ಬಡತನ ರೇಖೆ
ತಂಪು ಪಾನೀಯ
ಹನಿಗವಿತೆ
ಅರೆವಾಹಕ
ಅರೆಕಾಲಿಕ
ಅರೆಶುಷ್ಕ
ಬಿರುರೋಮ
ಎಣ್ಣೆ ಬೀಜ
ನಿದ್ದೆ ಮಾತ್ರೆ
ಆಣೆಪತ್ರ

೫.೧.೪. ಸಂಸ್ಕೃತ + ಕನ್ನಡ

ಸೌರಒಲೆ

ಪಕ್ಷಿನೋಟ

ಸಿಂಹಪಾಲು

ನ್ಯಾಯಬೆಲೆ

ಧ್ವನಿಸುರುಳಿ

ಭೂಕುಸಿತ

ಶುಭಹಾರೈಕೆ

೫.೧.೫. ಕನ್ನಡ + ಇಂಗ್ಲಿಶ್

ಗುಂಡು ಪಿನ್ನು

ಅಡಿಗೆ ಸೋಡ

ಬಟ್ಟೆಮಿಲ್

ಹಳೆಪೇಪರ್

ಹೋಲಿಗೆ ಮಿಶನ್

ಭಾರಿ ಬಿಸಿನೆಸ್

೫.೧.೬. ಇಂಗ್ಲಿಶ್ + ಕನ್ನಡ

ಗಿಲೀಟು ಕೆಲಸ

ಕ್ಯಾಟರ ಬಿಲ್ಲು

ಕಂತ್ರಿ ನಾಯಿ

ರೂಲು ದೊಣ್ಣೆ

ರೋಣ (ರೌಂಡ) ಕಲ್ಲು

ಕ್ವಿಂಟಾಲು ಗಟ್ಟಲೆ

ಮೈಲು ಗಟ್ಟಲೆ

ಮೈಲಿಗಲ್ಲು

ರೈಲುನಿಲ್ದಾಣ

ಓಜೋನು ಪೊರೆ

ಆಲಿವ್ ಎಣ್ಣೆ

೫.೧.೭. ಕನ್ನಡ + ಅರಬ್ಬಿ

ಅಂಗಡಿ ಮಾಲೀಕ

ಗುತ್ತಿಗೆ ಕರಾರು

ಮನೆ ಮಾಲೀಕ

ಬೆಳೆವಿಮೆ

ಬಟ್ಟೆಗಿರಣಿ

೫.೧.೮. ಕನ್ನಡ + ಪಾರಸಿ

ಗುತ್ತಿಗೆ ಕಾಗದ

ಕಡ್ಡಿ ಪೈಲ್ವಾನ

ಕಳ್ಳ ಕಾಗದ

೫.೧.೯. ಕನ್ನಡ + ಪೋರ್ಚುಗೀಸ್

ಗಡ್ಡೆ ಕೋಸು

ಹೂ ಕೋಸು

ಎಲೆ ಕೋಸು

೫.೧.೧೦. ಅರಬ್ಬಿ + ಅರಬ್ಬಿ

ಅದಲು ಬದಲು

ಖಾಸ ತೈನಾತಿ

ನಿಶಾ ಖೋರ

ಗೈರು ಹಾಜರಿ

೫.೧.೧೧. ಅರಬ್ಬಿ + ಕನ್ನಡ

ಅಮವಾಲು ದನ

ಖಾಸಾ ಕೋಣಿ

ಕಸಬುಗಾರ

ದಗಲ್ಬಾಜಿತನ

೫.೧.೧೨. ಅರಬ್ಬಿ + ಪಾರಸಿ

ಜಂಗಿ ಸರಂಜಾಮು

ಖಾಸಾ ಸವಾರಿ

ದಫ್ತರಖಾನೆ

೫.೧.೧೩. ಅರಬ್ಬಿ + ಇಂಗ್ಲಿಶ್

ತಮಾಷ ಬಂಗಲೆ

೫.೧.೧೪. ಅರಬ್ಬಿ + ಸಂಸ್ಕೃತ

ಖಾಸಗಿ ಕ್ಷೇತ್ರ

ಖಾಸಗಿ ಭಂಡಾರ

ನಗನಾಣ್ಯ

ಅಸಲು ಕ್ರಯ

ಇನಾಂಗ್ರಾಮ

ದಫನಕ್ರಿಯೆ

ಖಾಸಾಶಿಷ್ಯ

೫.೧.೧೫. ಪಾರಸಿ + ಪಾರಸಿ

ದಫ್ತರ ಬಂದಿ

ಕುಶಾಲು ತೋಪು

ತೋಪುಖಾನೆ

ರವಾನೆದಾರಿ

ಖಾತೆಕಿರ್ದಿ

ನೌವತ್ತುಖಾನೆ

೫.೧.೧೬. ಪಾರಸಿ + ಕನ್ನಡ

ಚಾಲಾಕಿತನ

ಅಬರುಗೇಡಿ

ಕಾಗದಹಾಳ

ಗಸ್ತುತಿರುಗು

ಖಾಯಂಗುತ್ತಿಗೆ

ಅಂದಾಜುಕಟ್ಟು

ಕಿಸೆಗಳ್ಳ

೫.೧.೧೭. ಪಾರಸಿ + ಅರಬ್ಬಿ

ಖಾತರ ಜಮಾ

ಗುದಸ್ತ ಬಾಕಿ

ಮುಲ್ಕಿ ಇಲಾಖೆ

ನಮಕ ಹರಾಮು

ದಿಗರು ಜವಾಬು

ದುಬಾರಿ ಖರ್ಚು

೫.೧.೧೮. ಪಾರಸಿ + ಇಂಗ್ಲಿಶ್

ಜಂಜರು ನಂಬರು

ತಲಾಶ ವಾರೆಂಟು

ದಿವಾಣಿ ಕೋರ್ಟು

ತಲಾಶ ವಾರೆಂಟು

೫.೧.೧೯. ಪಾರಸಿ + ಸಂಸ್ಕೃತ

ತುಪಾಕಿ ಸೇನೆ

ದಿಗರು ಉತ್ತರ

ದುಬಾರಿ ವೆಚ್ಚ

ಬಂದೂಕು ದಳ

ಖಾತೆ ಪುಸ್ತಕ

ದುಬಾರಿ ಕೆಲಸ

ನಕಲಿ ಶ್ಯಾಮ

೫.೧.೨೦. ಇಂಗ್ಲಿಶ್ + ಅರಬ್ಬಿ

ಗಿಲೀಟು ಮಾಲು

ಕಂತ್ರಿ ಮಾಲು

ಹೊಟೇಲ್ ಮಾಲೀಕ

೫.೧.೨೧. ಇಂಗ್ಲಿಶ್ + ಪಾರಸಿ

ನಾಟಿ ಸಿಪಾಯಿ

ರಬ್ಬರ ಮೊಹರು

ಸೈಕಲ್ ಸವಾರಿ

ಘೋಟ್ ಮೊಹಲ್ಲಾ

ಲೋಟನೆ ಮಹಲ್ಲೆ

೫.೧.೨೨. ಇಂಗ್ಲಿಶ್ + ಸಂಸ್ಕೃತ

ಆಗ್ರೋ ಕೇಂದ್ರ

ಟೆಲಿಸಂಪರ್ಕ

ಟೆಲಿಚಿತ್ರ

ನಾಟಿ ಔಷಧ

ಬಸ್‌ಪ್ರಯಾಣ

ರೈಲುಪ್ರಯಾಣ

ಹೋಲಸೇಲ್ ವ್ಯಾಪಾರಿ

೫.೧.೨೩. ಸಂಸ್ಕೃತ + ಪಾರಸಿ

ರಜತಪರದೆ

ಅಂಕ ಪರದೆ

ಕಮಲ ಮಹಲ್

ಅರ್ಧ ಸೇರು (ಅಚ್ಚೇರು)

೫.೧.೨೪. ಪೋರ್ಚುಗೀಸ್ + ಇಂಗ್ಲಿಶ್

ಎಲಂ ನೋಟೀಸು

ಹರಾಜು ನೋಟೀಸು

ರಸೀತಿ ಸ್ಟಾಂಪ

೫.೧.೧.೨೪. ಪೋರ್ಚುಗೀಸ್ + ಅರಬ್ಬಿ

ಲಿಲಾವು ಇಸ್ತಿಹಾರ

೫.೨. ಸಾದೃಶ್ಯ ಸೃಷ್ಟಿ

ಭಾಷೆಯಲ್ಲಿ ಪ್ರಚಲಿತವಿದ್ದ ಮಾದರಿಗಳ ಆಧಾರದ ಮೇಲೆ ಆಕೃತಿಮಾಗಳು ಅಥವಾ ಭಾಷಿಕ ರೂಪಗಳು ಮಾರ್ಪಾಡುಗೊಳ್ಳುವ, ಇಲ್ಲವೆ ಹೊಸ ರೂಪಗಳು ನಿರ್ಮಾಣಗೊಳ್ಳುವ ಪ್ರಕ್ರಿಯೆಗೆ ಸಾದೃಶ್ಯ ಸೃಷ್ಟಿ ಎಂದು ಕರೆಯಲಾಗುತ್ತದೆ. ಸಾದೃಶ್ಯ ಸೃಷ್ಟಿಯಲ್ಲಿ ಒಂದೇ ಭಾಷೆಯ ಒಂದು ವ್ಯವಸ್ಥೆಯಿಂದ ಇನ್ನೊಂದು ವ್ಯವಸ್ಥೆಗೆ ಒಂದು ಅಂಶದ ಸ್ಥಾನಾಂತರವಾಗುತ್ತದೆ. ಅಂದರೆ ಅದೇ ಭಾಷೆಯಲ್ಲಿರುವ ಮಾದರಿಯ ಸಾದೃಶ್ಯದ ಮೇಲೆ ಇಲ್ಲಿಯ ಒಂದು ಅಂಶ ಮಾರ್ಪಾಡುಗೊಳ್ಳುತ್ತದೆ; ಇಲ್ಲವೇ ಹೊಸ ರೂಪ ನಿರ್ಮಾಣವಾಗುತ್ತದೆ. ಇಲ್ಲಿ ಇದ್ದ ಒಂದು ಅಂಶ ಮತ್ತೊಂದು ಅಂಶದ ಹೋಲಿಕೆಯ ಮೇಲಿಂದ ಬದಲಾಗುವುದರಿಂದ ಮತ್ತು ಈ ಬಲಾವಣೆಗೆ

ಹೋಲಿಕೆ ಕಾರಣವಾಗುವುದರಿಂದ ಅದಕ್ಕೆ ಸಾದೃಶ್ಯ ಸೃಷ್ಟಿ ಎನ್ನಲಾಗುತ್ತದೆ*(ಕುಳ್ಳಿ ಜಿ.ಎಸ್., ೧೯೭೧:೫೫)*. ಈ ಮಾದರಿಯು ಕನ್ನಡದಲ್ಲಿ ತುಂಬಾ ಹಲುಸಾಗಿ ನಡೆದುಕೊಂಡು ಬಂದಿದೆ. ಈ ಮಾದರಿಯನ್ನು ಬಳಸಿಕೊಂಡು ಕನ್ನಡದಲ್ಲೇ ಹೊಸಪದಗಳನ್ನು ರಚಿಸಿಕೊಂಡಿದ್ದಲ್ಲದೆ ಅನೇಕ ಅನ್ಯಭಾಷೆಯಿಂದ ಸ್ವೀಕರಿಸಿಕೊಂಡ ಪದಗಳಿಗೂ ಕನ್ನಡ ಪದಗಳನ್ನು ಬಳಸಿಕೊಂಡು ಸಾದೃಶ್ಯ ಸೃಷ್ಟಿ ಮಾಡಿಕೊಳ್ಳಲಾಗಿದೆ. ಹೀಗೆ ಸಾದೃಶ್ಯ ಸೃಷ್ಟಿಯಾಗುವಲ್ಲಿ ಪೂರ್ವ ಮತ್ತು ಅಂತ್ಯ ಪ್ರತ್ಯಯಗಳನ್ನು ಬಳಸಿಕೊಳ್ಳಲಾಗಿದೆ. ಉದಾ.

**೫.೨.೧. ಅಂತ್ಯ ಪ್ರತ್ಯಯ**

ಕನ್ನಡದಲ್ಲಿ –ಅಡಿಗ (ಹೂವಾಡಿಗ, ಹಾವಾಡಿಗ) –ಇಗ (ಕನ್ನಡಿಗ, ಲೆಕ್ಕಿಗ), –ಇಕ (ಕರಿಕ, ಬಿಳಿಕ), –ಕಾರ (ಮಾಲಿಕಾರ, ಓಲೆಕಾರ), –ವಂತ (ಸಿರಿವಂತ, ಗುಣವಂತ), –ಗಾರ (ಮೋಸಗಾರ, ಛಲಗಾರ), –ಗಿತ್ತಿ (ಅಗಸಗಿತ್ತಿ, ನಾಯಿಂದಗಿತ್ತಿ), –ಇತ್ತಿ (ಒಕ್ಕಲಗಿತ್ತಿ, ಹೂವಾಡಗಿತ್ತಿ), –ತಿ (ಗೊಲ್ಲತಿ, ವಡ್ಡತಿ), –ತನ (ಸಿರಿತನ, ಬಡತನ), –ಇಕೆ (ಗೌಡಿಕೆ, ಬ್ರಾಹ್ಮಣಿಕೆ), –ಪು(ಬಿಳುಪು, ಇಂಪು) ಮೊದಲಾದ ಕನ್ನಡದ ಪ್ರತ್ಯಯಗಳನ್ನು ಬಳಸಿಕೊಂಡು ಸ್ವೀಕರಣ ಪದಗಳಿಗೆ ಸಾದೃಶ್ಯಗಳನ್ನು ಸೃಷ್ಟಿಸಿಕೊಳ್ಳಲಾಗಿದೆ. ಉದಾ :

**೫.೨.೧.೧ –ಗಿತ್ತಿ** ದರ್ಜಿಗಿತ್ತಿ

**೫.೨.೧.೨ –ತನ**

ಚಾಲಾಕಿತನ

ದಗಲ್ಬಾಜಿತನ

ನಾಜೂಕುತನ

ಸಿನಿಕತನ

**೫.೨.೧.೩ –ಇಕೆ**

ಕಸಬುಗಾರಿಕೆ

ಕಿಲ್ಲೇದಾರಿಕೆ

ಗುಮಾಸ್ತಿಕೆ

ಜವಾಬ್ದಾರಿಕೆ

ರೋಜುಗಾರಿಕೆ

ನಾಜೂಕುಗಾರಿಕೆ

**೫.೨.೧.೪ ಕಾರ, ಕಾರ, ಗಾರ** ಎಂಬ ಅಂತ್ಯ ಪ್ರತ್ಯಯಗಳು ಇದರಲ್ಲಿ ನಿರತನಾಗಿರುವವನು, ವ್ಯವಹರಿಸುವವನು ಎಂಬರ್ಥದಲ್ಲಿ ಬಳಕೆಯಾಗುತ್ತವೆ. ಕ್ರಿ.ಶ. ೧೧೬೫ರಲ್ಲಿ ಎರಡನೆಯ ನಾಗವರ್ಮನ ಕರ್ನಾಟಕ ಭಾಷಾಭೂಷಣದಲ್ಲಿ(ಪಗೆಕಾರಂ, ಬಗೆಕಾರಂ....ನಡೆವಳಿಕಾರಂ), ಕ್ರಿ.ಶ. ಸು. ೧೨೬೦ರ

ಕೇಶಿರಾಜನ ಶಬ್ದಮಣಿದರ್ಪಣದಲ್ಲಿ(ಇವರೆಳ ವ್ಯವಹರಿಪಂ ಮಾಡುವನಿವನೆಂಬಲ್ಲಿ ಕಾರಗಾರಂಗಳ ಸಂಭವಿಕುಂ–ಮಾಲಿಗಾರಂ, ಕಂಚಗಾರಂ, ಬಳೆಗಾರಂ, ಗೆಜ್ಜೆಗಾರಂ) ಈ ಕಾರ, ಗಾರ ಪ್ರತ್ಯಯಗಳು ಬಳಕೆಯಾಗಿವೆ. ಈ ಪದಗಳನ್ನು ಬಳಸಿಕೊಂಡು ಕನ್ನಡದಲ್ಲಿ ಅನೇಕ ಸಾದೃಶ್ಯಗಳನ್ನು ರಚಿಸಿಕೊಳ್ಳಲಾಗಿದೆ. ಉದಾ.

ಅಹಲೆಕಾರ

ಸಲಹೆಕಾರ

ಕಲಾಯಿಗಾರ

ಕಸಬುಗಾರ

ತಮಾಷೆಗಾರ

ಮೋಜುಗಾರ

ವರದಿಗಾರ

ಗಲ್ಲುಗಾರ

ವರದಿಗಾರ

ಸುದ್ದಿಗಾರ

ಅಂಕಣಕಾರ

ಮುನ್ನುಡಿಗಾರ

ವಿವರಣೆಗಾರ

**೫.೨.೧.೫ –ತಿ** : ಈ ಪ್ರತ್ಯಯವು ಒಂದು ವೃತ್ತಿಗೆ ಸಂಬಂಧಿಸಿದ ಹೆಣ್ಣನ್ನು ಗುರುತಿಸುವ ಪದ ರಚಿಸುವಲ್ಲಿ ಬಳಕೆಯಾಗಿದೆ. ಕನ್ನಡದಲ್ಲಿ ಈ ಪ್ರತ್ಯಯವನ್ನು ಬಳಸಿಕೊಂಡು ತಟಸ್ಥ ಪದಗಳನ್ನು (ಹೆಚ್ಚಾಗಿ ಇವನ್ನು ಪುರುಷವಾಚಕ ಪದಗಳನ್ನಾಗಿ ಗ್ರಹಿಸಲಾಗಿದೆ.) ಸ್ತ್ರೀವಾಚಕಗಳನ್ನಾಗಿಸಲು ಬಳಸಲಾಗಿದೆ. ಈ ಪ್ರತ್ಯಯವನ್ನು ಬಳಸಿಕೊಂಡು ಅನೇಕ ಸ್ತ್ರೀವಾಚಕ ಸಾದೃಶ್ಯಗಳನ್ನು ರಚಿಸಿಕೊಳ್ಳಲಾಗಿದೆ. ಉದಾ.

ಜೋಕುಗಾರ್ತಿ

ಜಾದೂಗಾರ್ತಿ

ಪಾರಸಿಯ **–ಅತಿ, –ಕೋರ/–ಖೋರ, –ಗಿರಿ,–ದಾನಿ, –ದಾನು,–ದಾರ,–ವಾರು,–ಶಾಹಿ** ಮೊದಲಾದ ಬೇರೆ ಬೇರೆ ಅರ್ಥದ ತದ್ಧಿತ ಪ್ರತ್ಯಯಗಳು ಕನ್ನಡದಲ್ಲಿ ಬಳಕೆಗೊಳ್ಳುತ್ತವೆ. ಈ ಪ್ರತ್ಯಯಗಳು ಅರಬ್ಬಿ, ಪಾರಸಿ, ಉರ್ದುವಿನಿಂದ ಸ್ವೀಕರಿಸಿದ ಶಬ್ಧಗಳಿಗೆ ಹತ್ತುವುದು ಸಾಮಾನ್ಯ. ಕೆಲವೊಮ್ಮೆ ಕನ್ನಡ, ಇಂಗ್ಲಿಶ್ ಪದಗಳಿಗೂ ಕೆಲವು ಪ್ರತ್ಯಯಗಳನ್ನು ಹಚ್ಚುವುದು ಕಂಡುಬರುತ್ತದೆ.

ಗುಲಾಬದಾನಿ

ಪೀಕದಾನಿ

ಪನ್ನೀರುದಾನಿ

ಹೂದಾನಿ

೫.೨.೧.೧೦ **–ದಾರ** ಎಂಬ ಪ್ರತ್ಯಯ ಹೊಂದಿರುವವನು ಪಡೆದಿರುವವನು ಎಂಬ ಅರ್ಥದಲ್ಲಿ ಸೇರುವ ಪಾರಸಿ ಪ್ರತ್ಯಯ (<ದಾರ) ಇದನ್ನು ಅರಬ್ಬಿ, ಪಾರಸಿ ಶಬ್ದಗಳಿಗೆ ಮಾತ್ರವಲ್ಲದೆ ಇತರ ಭಾಷೆಗಳ ಶಬ್ದಗಳಿಗೂ ಹಚ್ಚಿ ಬಳಸಲಾಗುತ್ತದೆ.

ಅಮಾನತ್ತುದಾರ

ಇನಾಮದಾರ

ಕಿಲ್ಲೆದಾರ

ಸುಬೇದಾರ

ಜಹಗೀರುದಾರ

ದುಕಾನುದಾರ

ಜೋಡಿದಾರ

ಅಮಲ್ದಾರ

ಜಾಗೀರುದಾರ

ದಫೇದಾರ

ಜಮೀನುದಾರ

ಕಂತ್ರಾಟುದಾರ

ಟೆಂಡರುದಾರ

ಲೈಸನ್ಸುದಾರ

ಆಡಳಿತದಾರ

ಶೇರುದಾರ

೫.೨.೧.೧೧ **–ದಾರಿ** ಎಂಬ ರೂಪ ಪಾರಸಿಯ –ದಾರ ತದ್ಧಿತ ಪ್ರತ್ಯಯಕ್ಕೆ –ಇ ಎಂಬುದು ಸೇರಿಸಿ, ಹುದ್ದೆ, ಉದ್ಯೋಗ, ಅಧಿಕಾರ ಸೂಚಿಸುವಾರ್ಥದಲ್ಲಿ ಬಳಕೆಯಾಗುತ್ತದೆ. ಇದು –ಗಿರಿ ಪ್ರತ್ಯಯದ ಸಮಾನಾರ್ಥದಲ್ಲಿಯೇ ಬಳಕೆಯಾಗುತ್ತದೆ. ಉದಾ.

ಆವಾಬುದಾರಿ

ಜವಾಬ್ದಾರಿ

ಜಮೀನ್ದಾರಿ

ತಾಬೀದಾರಿ

ತಜವೀಜುದಾರಿ

ಪತ್ತೇದಾರಿ

ರಹದಾರಿ

ಇಂತಹ ರೂಪಗಳಿಗೆ ಕನ್ನಡದ -ಇಕೆ ಪ್ರತ್ಯಯವನ್ನು ಸೇರಿಸಿ ಹೊಸ ಪದವಾಗಿ ಬಳಸುವ ಉದಾಹರಣೆಗಳು ಸಿಗುತ್ತವೆ.

ಜವಾಬ್ದಾರಿಕೆ,

ಜಮೀನ್ದಾರಿಕೆ,

ಕಿಲ್ಲೆದಾರಿಕೆ

ಚಂದಾದಾರಿಕೆ

ಮೊದಲಾದ ಪದಗಳನ್ನು ರಚಿಸಿಕೊಳ್ಳಲಾಗಿದೆ. ಆದರೆ ಅರ್ಥದಲ್ಲಿ ಮಾತ್ರ ಯಾವುದೇ ಬದಲಾವಣೆಗಳು ಆಗುವುದಿಲ್ಲ.

**೫.೨.೧.೧೨ -ವಾರು** ಈ ಪ್ರತ್ಯಯವು 'ಪ್ರಕಾರ' ಎಂಬರ್ಥದಲ್ಲಿ ಬಳಕೆಯಾಗುತ್ತದೆ.

ಇಲಾಖಾವಾರು

ಇನಂವಾರು

ಕೋಮುವಾರು

ಜಾತಿವಾರು

ಭಾಷಾವಾರು

**೫.೨.೧.೧೩ -ಈಕರಣ** ಎಂಬ ಸಂಸ್ಕೃತ ರೂಪವನ್ನು ಪ್ರತ್ಯಯವನ್ನಾಗಿ ಮಾಡಿಕೊಂಡು, ಇಂಗ್ಲಿಶಿನಲ್ಲಿ isationನಿಂದ ಕುಡಿದ್ದ ಪದಗಳಳಿಗೆ ಸಂವಾದಿಯಾಗಿ ಕನ್ನಡದಲ್ಲಿ ಹೊಸಪದಗಳ ರಚನೆಯಲ್ಲಿ ಬಳಸಲಾಗುತ್ತದೆ. ಉದಾ:

ಕೇಂದ್ರೀಕರಣ

ನಗರೀಕರಣ

ರಾಷ್ಟ್ರೀಕರಣ

ಡಾಂಬರೀಕರಣ

ವೀಡಿಯೋೀಕರಣ

ಹಿಂದೀಕರಣ

ಮಹಾನಗರೀಕರಣ

ಜಾಗತೀಕರಣ

ಕೋಮುವಾದೀಕರಣ

ಕಾಂಗ್ರೇಸ್ಸೀಕರಣ

ನಕಲೀಕರಣ

ಗ್ಲೋಬೀಕರಣ

ಆಂಗ್ಲೀಕರಣ

ಕಾಂಕ್ರಿಟೀಕರಣ

ಮಿಲಿಟರೀಕರಣ

ಮಹಿಳೀಕರಣ

ಪ್ಲಾಸ್ಟಿಕ್ಕೀಕರಣ

ಆಂಗ್ಲೀಕರಣ

ವಿಶೇಷಿಕರಣ

ಶುದ್ಧೀಕರಣ

ವಿಕೇಂದ್ರೀಕರಣ

ರಾಷ್ಟ್ರೀಕರಣ,

ಸಾಮಾಜೀಕರಣ

ಅರಣ್ಯೀಕರಣ

ಡಾಂಬರೀಕರಣ

ಹಸುರೀಕರಣ

ವಾಣಿಜ್ಯೀಕರಣ

ಸ್ಫಟೀಕರಣ

ದೀರ್ಘೀಕರಣ

ಹ್ರಸ್ವೀಕರಣ

ಶಸ್ತ್ರೀಕರಣ

ಸ್ಥಿರೀಕರಣ

ಶ್ರೇಣೀಕರಣ

ವೃತ್ತೀಕರಣ

ಟೆಲಿವೀಕರಣ

ಅರಣ್ಯೀಕರಣ

ಅಮಾನ್ನೀಕರಣ

ಪ್ರಪಂಚೀಕರಣ

ಭಾರತೀಕರಣ

ನಗರೀಕರಣ

ಸರಳೀಕರಣ

ವಿಲೀನೀಕರಣ

ವರ್ಗೀಕರಣ

ಜೈನೀಕರಣ

ಕಂಪ್ಯೂಟರೀಕರಣ

ಪ್ರೈವೇಟೀಕರಣ

ಖಾಸಗೀಕರಣ

ಸಿಮೆಂಟೀಕರಣ

ಜಾರೀಕರಣ

ಸರ್ಕಾರೀಕರಣ

ಇತ್ಯಾದಿ.

೫.೨.೧.೧೪ **–ಕರಿಸು** ನಾಮಪದಗಳನ್ನು ರಚಿಸಲು ಕರಣ ಪ್ರತ್ಯಯ ಬಳಕೆಯಾದರೇ, ಕ್ರಿಯಾಪದಗಳನ್ನು ರಚಿಸಲು **–ಕರಿಸು** ಪ್ರತ್ಯಯ ಬಳಸಿ ಸಾದೃಶ್ಯ ರಚಿಸಲಾಗಿದೆ. ಉದಾ.

ಶುದ್ಧೀಕರಿಸು

ರಾಷ್ಟ್ರೀಕರಿಸು

ದಾಖಲೀಕರಿಸು

ಟೆಲಿವೀಕರಿಸು

ಹಿಂದೀಕರಿಸು

ಒತ್ತಡೀಕರಿಸು

ಸಮಾನೀಕರಿಸು

೫.೨.೧.೧೫ **–ಶಾಹಿ** ಎಂಬುದು ಅಧಿಕಾರ; ಹಕ್ಕು ಎಂದು ನಾಮವಾಚಕವಾಗಿಯೂ ರಾಜನಿಗೆ ಅಥವಾ ರಾಜ್ಯಕ್ಕೆ ಸಂಬಂಧಿಸಿದ ಎಂದು ಗುಣವಾಚಕವಾಗಿಯೂ ಬಳಕೆಯಾಗುವ ಪಾರಸಿ ಪದ. ಇದು ಕನ್ನಡದಲ್ಲಿ ಪ್ರತ್ಯಯದಂತೆ ಬಳಕೆಯಾಗುತ್ತದೆ. ಉದಾ:

ಅಧಿಕಾರಶಾಹಿ

ಆಡಳಿತ ಶಾಹಿ

ದಫ್ತರಶಾಹಿ

ನಿಜಾಮಶಾಹಿ

ನೌಕರಶಾಹಿ

ಪುರೋಹಿತಶಾಹಿ

ಬಂಡಾವಾಳಶಾಹಿ

ಸಾಮ್ರಾಜ್ಯಶಾಹಿ

ಕಂಪ್ಯೂಟರ್‌ಶಾಹಿ

ಕುಟುಂಬಶಾಹಿ

ಯಜಮಾನಶಾಹಿ

೫.೨.೧.೧೬ –ಇಕೆ ಆಲಿಸು > ಆಲಿಕೆ,

ಕದ್ದಾಲಿಕೆ

ಕಿವಿಯಾಲಿಕೆ

ರೂಪಗಾರಿಕೆ

ಮೀನುಗಾರಿಕೆ

ತೋಟಗಾರಿಕೆ

೫.೨.೧.೧೭ –ಆಣಿಕೆ :

ಹೊಂದಾಣಿಕೆ

ಸಾಕಾಣಿಕೆ

ತಿದ್ದಾಣಿಕೆ

ನಿಡಿಸಾಣಿಕೆ

೫.೨.೧.೧೮ – ಇಗ :

ಲೆಕ್ಕಿಗ

ಟೈಪಿಗ

ಕಾಂಗ್ರೇಸಿಗ,

ನೆಲಸಿಗ

ಬ್ಯಾಟಿಗ

ಫುಟ್ಬಾಲಿಗ

೫.೨.೧.೧೯ –ಆತಿ– ಕಕ್ಕುಲಾತಿ >

ಮೀಸಲಾತಿ

ಖಾಯಮಾತಿ

ನೇಮಕಾತಿ

ವಸೂಲಾತಿ

೫.೨.೧.೨೦ –ಆಣೆ :

ಸಾಕಣೆ (Rearing)

ಚಲಾವಣೆ

ಚುನಾವಣೆ

ವರ್ಗಾವಣೆ

ಬಡಾವಣೆ

ಘೋಷಣೆ

ಕೊಚ್ಚಣೆ

೫.೨.೧.೨೧ –ಮೆ

ಕಾಣ್ಮೆ

ಜಾಣ್ಮೆ

ಮೇಲ್ಮೆ

ಬಲ್ಮೆ,

ಒಲುಮೆ

ಹಿರಿಮೆ

ಕಿರಿಮೆ ಇತ್ಯಾದಿ.

೫.೨.೧.೨೨ –ಣಿ : ಈ ಪ್ರತ್ಯಯವನ್ನು ನಾಮಪದಗಳನ್ನು ಸ್ತ್ರೀವಾಚಕವಾಗಿಸಲು ಬಳಸಲಾಗುತ್ತದೆ. ಇದು ಇತರ ಭಾಷೆಗಳಿಂದ ಬಂದ ಪದಗಳಿಗೂ ಬಳಸಿ ಪದ ರಚಿಸಲಾಗಿದೆ.

ಸಿಂಹಿಣಿ

ನಾಗಿಣಿ

ಯಕ್ಷಿಣಿ,

ಲಂಕಿಣಿ,

ತಪಸಿಣಿ

ಸೆಕ್ಸಿಣಿ

ನಚ್ಚಣಿ

ಸ್ವಾರಿಣಿ

ಮಾಲೀಕಣಿ

ಎಂಪಿಣಿ

ಕೊಲೆಗಾರಿಣಿ

ಚಿತ್ರಕಾರಣಿ

ಬಾಂಬಿಣಿ

ವಕ್ತಾರಿಣಿ

ಕ್ರೀಡಾಕಾರಿಣಿ

ಚೂಡಿದಾರಿಣಿ

ಮೇಯರಿಣಿ

ನಗ್ನಿಣಿ

ಟೈಲರಿಣಿ

ಮಾಸ್ತರಿಣಿ ಇತ್ಯಾದಿ

೫.೨.೧.೨೩ –ತನ

ಸಿನಿಕತನ

ಮೈಗಳ್ಳತನ

ಕೆಲಸಗಳ್ಳತನ

ಬಜಾರಿತನ

ದಲ್ಲಾಳಿತನ

ಹಣಬಾಕುತನ

ದಿವಾಳಿಕೋರತನ

ಲಂಚಬಾಕುತನ

ಕೊಳ್ಳುಬಾಕುತನ

ಆಕ್ರಮಣಕೋರತನ

೫.೨.೧.೨೪ -ತೆ

ಸೃಜನಶೀಲತೆ

ವಿಚಾರಶೀಲತೆ/ವೈಚಾರಿಕತೆ

ಸಂಕ್ಷಿಪ್ತತೆ

ಪ್ರಾಮಾಣಿಕತೆ

ಆತ್ಮೀಯತೆ

ಪರಿಪೂರ್ಣತೆ

ಘನತೆ

ಸಮಸಾಮಯಿಕತೆ

ಆಧುನಿಕತೆ

ಸಾರ್ಥಕತೆ

ಪ್ರಾದೇಶಿಕತೆ

೫.೨.೧.೨೫ -ವಳಿ

ಹೂಡುವಳಿ

ಹುಟ್ಟುವಳಿ

ನಡೆವಳಿ

ಕೂಡುವಳಿ

ಸಲುವಳಿ

೫.೨.೧.೨೬ -ಗುಳಿ

ಲಂಚಗುಳಿ

ಮರೆಗುಳಿ

೫.೨.೧.೨೭ -ಇತ

ಸಂಘಟಿತ

ಕುಂಠಿತ

ಉದ್ದೇಶಿತ

ಸಂಶಯಿತ

ಚಿಂತಿತ

ದುಃಖಿತ

ಚಾಲಿತ

ಬ್ಯಾಟರಿಚಾಲಿತ

೫.೨.೧.೨೮ –ಉತ್ತರ ಈ ಪದವನ್ನು ಆನಂತರ ಎನ್ನುವ ಅರ್ಥದಲ್ಲಿ ಬಳಸಿ ಹೊಸಪದಗಳನ್ನು ರಚಿಸಕೊಳ್ಳಲಾಗಿದೆ.

ಸ್ವಾತಂತ್ರ್ಯೋತ್ತರ

ಮರಣೋತ್ತರ

ಸ್ನಾತಕೋತ್ತರ

ಮತದಾನೋತ್ತರ

ಸಾಕ್ಷರೋತ್ತರ

ಜ್ಞಾನೋತ್ತರ

ಯುದ್ಧೋತ್ತರ

ವಸಾಹತೋತ್ತರ

ನವ್ಯೋತ್ತರ

ಘಟನೋತ್ತರ

ಆಧುನಿಕೋತ್ತರ

ಉದಾರೀಕರಣೋತ್ತರ ಇತ್ಯಾದಿ

೫.೨.೧.೨೯–ಪೂರ್ವ: ಈ ಪದವನ್ನು ಘಟನೆಗಿಂತ ಮುಂಚೆ ಎನ್ನುವ ಅರ್ಥದಲ್ಲಿ ಬಳಸಿ ಪದ ರಚಿಸಲಾಗಿದೆ.

ಸ್ವಾತಂತ್ರ್ಯಪೂರ್ವ

ಪದವಿಪೂರ್ವ

ಘಟನಾಪೂರ್ವ

೫.೨.೧.೩೦ –ಅರ್ಹ :

ಶಿಕ್ಷಾರ್ಹ (punishable)

ಗಮನಾರ್ಹ (noticeable)

೫.೨.೧.೩೧ –ಆತ್ಮಕ

ವರ್ಣನಾತ್ಮಕ

ನಕಾರಾತ್ಮಕ

ಸ್ಪರ್ಧಾತ್ಮಕ

ಸೃಜನಾತ್ಮಕ

ನಿರ್ಮಾಣಾತ್ಮಕ

ವಿಮರ್ಶಾತ್ಮಕ

ತುಲನಾತ್ಮಕ

ಕಲಾತ್ಮಕ,

ಧನಾತ್ಮಕ

ಋಣಾತ್ಮಕ

೫.೨.೧.೩೨ –ಆಸ್ಪದ :

ಸಂದೇಹಾಸ್ಪದ

ಹಾಸ್ಯಾಸ್ಪದ

ನಿಂದಾಸ್ಪದ

೫.೨.೧.೩೩ –ಶೀಲ :

ಸೃಜನಶೀಲ

ಚಿಂತನಶೀಲ

ಕ್ರಿಯಾಶೀಲ

ವಿಚಾರಶೀಲ

ಸಹನಶೀಲ ಇತ್ಯಾದಿ

೫.೨.೧.೩೪ –ಇಕ

ನೈತಿಕ

ಸಾರ್ವತ್ರಿಕ

ಪಾಕ್ಷಿಕ

ಸಾಂಪ್ರದಾಯಿಕ

ವೈವಾಹಿಕ

ವೈಯಕ್ತಿಕ

ಶೈಕ್ಷಣಿಕ

ಅರೆಕಾಲಿಕ

ಆಂತರಿಕ

ಮಾನಸಿಕ ಇತ್ಯಾದಿ

೫.೨.೧.೩೫–ಆತಿತ

ಪಕ್ಷಾತೀತ

ಕಾಲಾತೀತ

ಜಾತ್ಯಾತೀತ

ವರ್ಣಾತೀತ

ಊಹನಾತೀತ ಇತ್ಯಾದಿ

೫.೨.೧.೩೬ –ಇತರ

ಸೃಜನೇತರ

ಮನುಷ್ಯೇತರ

ವಾಣಿಜ್ಯೇತರ

ಕನ್ನಡೇತರ

ಶಿಕ್ಷಕೇತರ

ಸರ್ಕಾರೇತರ

ಕೃಷಿಯೇತರ ಇತ್ಯಾದಿ

೫.೨.೧.೩೭ –ರಹಿತ

ದಂಡರಹಿತ

ಜುಲ್ಮಾನೆರಹಿತ

ಆಶ್ರಯರಹಿತ ಇತ್ಯಾದಿ

೫.೨.೧.೩೮ –ವಾದಿ

ಗಾಂಧಿವಾದಿ

ಕಮ್ಯುನಿಷ್ಟವಾದಿ

ಎಡವಾದಿ

ಬಲವಾದಿ

ವಿಚಾರವಾದಿ ಇತ್ಯಾದಿ

೫.೨.೧.೩೯ –ಈಯ

ಸಿನಿಮೀಯ

ನಾಟಕೀಯ

ಕೇಂದ್ರೀಯ

ಮಾನವೀಯ

ಅಂತರಶಿಸ್ತೀಯ

ವಿತ್ತೀಯ ಇತ್ಯಾದಿ.

**೫.೨.೨ ಪೂರ್ವ ಪ್ರತ್ಯಯಗಳು**

ಕನ್ನಡದಲ್ಲಿ ಸಾದೃಶ್ಯ ಪದಗಳನ್ನು ರಚಿಸುವಲ್ಲಿ ಕೆಲವು ಪೂರ್ವ ಪ್ರತ್ಯಯಗಳನ್ನು ಬಳಸಿಕೊಂಡು ಪದರಚಿಸಿಕೊಳ್ಳಲಾಗಿದೆ. ಹೀಗೆ ಪದ ರಚಿಸಿಕೊಳ್ಳುವಲ್ಲಿ ಮುಖ್ಯವಾಗಿ ಸಂಸ್ಕೃತ ಮತ್ತು ಕನ್ನಡ ಪೂರ್ವ ಪ್ರತ್ಯಯಗಳನ್ನು ಬಳಸಿಕೊಂಡು ಸಾದೃಶ್ಯ ರಚನೆಯಾಗಿವೆ. ಉದಾ.

**೫.೨.೨.೧ ಅ–** : ಈ ಪ್ರತ್ಯಯವು ಪದಗಳನ್ನು ನಿಶೇದಾರ್ಥಕವಾಗಿಸಲು ಬಳಕೆಯಾಗುತ್ತದೆ. ಉದಾ.

ಅನಿವಾಸಿ

ಅಸೌಕರ್ಯ

ಅಸೌಕ್ಯ

ಅಪ್ರಕಟಿತ

ಅಮಾನ್ಯ

ಅವಿಶ್ವಾಸ

ಅಮಾನ್ಯೀಕರಣ ಇತ್ಯಾದಿ

**೫.೨.೨.೨ ಅಂತರ್–** : ಈ ಪ್ರತ್ಯಯವು ಒಂದು ವಿಷಯಕ್ಕೆ ಸಂಬಂಧಿಸಿದ ಇನ್ನೊಂದು ವಿಷಯದೊಂದನ್ನು ಹೇಳಲು ಬಳಸಲಾಗುತ್ತದೆ. ಇದು ಕನ್ನಡದಲ್ಲಿ ಇಂಗ್ಲಿಶನ Inter ಪದದ ಪರ್ಯಾಯವಾಗಿ ಬಳಸಿ ಸಾದೃಶ್ಯ ರಚಿಸಲಾಗಿದೆ. ಉದಾ.

ಅಂತರಾಷ್ಟೀಯ

ಅಂತರ್ ಜಾತೀಯ

ಅಂತರ್ ಬೆಳೆ

ಅಂತರ್ ಶಿಸ್ತೀಯ ಇತ್ಯಾದಿ

**೫.೨.೨.೩ ಸ್ವ–** : ಈ ಪ್ರತ್ಯಯವನ್ನು ಸ್ವಂತ ಎನ್ನುವ ಅರ್ಥದಲ್ಲಿ ಬಳಸಲಾಗಿದೆ. ಇದು ಇಂಗ್ಲಿಶನ Self ಪದದ ಪರ್ಯಾಯವಾಗಿ ಸಾದೃಶ್ಯ ರಚಿಸಲು ಬಳಸಲಾಗಿದೆ. ಉದಾ.

ಸ್ವಶಿಕ್ಷಣ

ಸ್ವವೈದ್ಯ

ಸ್ವಶಕ್ತಿ

ಸ್ವಪ್ರಯತ್ನ

ಸ್ವಸಹಾಯ ಇತ್ಯಾದಿ

**೫.೨.೨.೪ ಸಹಾಯಕ-** : ಈ ಪದವನ್ನು ಒಬ್ಬರ ಕೆಳಗೆ ಕೆಲಸ ಮಾಡುವವರು ಎನ್ನುವ ಅರ್ಥದಲ್ಲಿ ಬಳಸೊಕೊಳ್ಳಲಾಗಿದೆ. ಇದು ಇಂಗ್ಲಿಶನ ಘಣಚಿಟಣ ಪದದ ಪರ್ಯಾಯವಾಗಿ ಸಾದೃಶ್ಯ ರಚಿಸಲು ಬಳಸಿಕೊಳ್ಳಲಾಗಿದೆ. ಉದಾ.

ಸಹಾಯಕ ಅಧಿಕಾರಿ

ಸಹಾಯಕ ಪ್ರಾಧ್ಯಾಪಕ

ಸಹಾಯಕ ಅಭಿಯಂತರ

ಸಹಾಯಕ ಆಡಳಿತಾಧಿಕಾರಿಗಳು

ಸಹಾಯಕ ವೈದ್ಯಾಧಿಕಾರಿಗಳು

ಸಹಾಯಕ ಕ್ಷೇತ್ರ ಶಿಕ್ಷಣಾಧಿಕಾರಿಗಳು

ಸಹಾಯಕ ಆರಕ್ಷಕ ವರಿಷ್ಠಾಧಿಕಾರಿಗಳು

ಸಹಾಯಕ ಕುಲಸಚಿವ

ಸಹಾಯಕ ಕಾರ್ಯಪಾಲಕ

ಸಹಾಯಕ ಆಯುಕ್ತರು ಇತ್ಯಾದಿ.

**೫.೨.೨.೫ ಉಪ-** : ಈ ಪದವು ಕನ್ನಡದಲ್ಲಿ ಮುಖ್ಯವಾದ ಹುದ್ದೆಯ ಕೆಳಗಿನ ಹಂತದ ಅಧಿಕಾರವನ್ನು ಸೂಚಿಸಲು ಬಳಕೆಯಾಗಿದೆ.ಇದು ಇಂಗ್ಲಿಶ್‌ನ Vice, Deputy, Para, By, Sub, By ಈ ಪದಗಳ ಪರ್ಯಾಯವಾಗಿ ಸಾದೃಶ್ಯ ಸೃಷ್ಟಿಸಲು ಬಳಸಿಕೊಳ್ಳಲಾಗಿದೆ. ಉದಾ.

ಉಪರಾಷ್ಟ್ರಪತಿ

ಉಪಕುಲಪತಿ

ಉಪಪ್ರಧಾನಿ

ಉಪ ಸಚಿವ/ವೆ

ಉಪ ಜಿಲ್ಲಾಧಿಕಾರಿ

ಉಪಜೀವಿ

ಉಪಶೀರ್ಷಿಕೆ

ಉಪಕಸಬು

ಉಪಸಮಿತಿ

ಉಪನಿರ್ದೇಶಕರು

ಉಪಕಾನೂನು ಇತ್ಯಾದಿ.

**೫.೨.೨.೬ ಮುಖ್ಯ-** : ಈ ಪದವು ಕನ್ನಡದಲ್ಲಿ ಪ್ರಮುಖವಾದದ್ದು, ಮಹತ್ವದ್ದು ಎನ್ನುವ ಅರ್ಥದಲ್ಲಿ ಬಳಕೆಯಾಗುತ್ತದೆ. ಈ ಪದವು ಇಂಗ್ಲಿಶ್‌ನ Chief, Head, Main, Important ಈ ಪದಗಳ ಪರ್ಯಾಯವಾಗಿ ಸಾದೃಶ್ಯ ಸೃಷ್ಟಿಸಲು ಬಳಸಿಕೊಳ್ಳಲಾಗಿದೆ. ಉದಾ.

ಮುಖ್ಯಮಂತ್ರಿ

ಮುಖ್ಯಾಧಿಕಾರಿ

ಮುಖ್ಯೋಪಾಧ್ಯಾಯ

ಮುಖ್ಯಪಾತ್ರ

ಮುಖ್ಯ ಶೀರ್ಷಿಕೆ ಇತ್ಯಾದಿ.

**೫.೨.೨.೭ ಪ್ರಧಾನ-** :ಈ ಪದವನ್ನು ಇಂಗ್ಲಿಶನ Prime, Main, Chief ಈ ಪದಗಳ ಪರ್ಯಾಯವಾಗಿ ಸಾದೃಶ್ಯ ಸೃಷ್ಟಿಸಲು ಬಳಸಿಕೊಳ್ಳಲಾಗಿದೆ. ಉದಾ.

ಪ್ರಧಾನ ಮಂತ್ರಿ

ಪ್ರಧಾನಾಧಿಕಾರಿ

ಪ್ರಧಾನ ನಿಂದಿತ

ಪ್ರಾಧಾನ ಕಾರ್ಯದರ್ಶಿ ಇತ್ಯಾದಿ

**೫.೨.೨.೮ ನಿ-** : ಈ ಪ್ರತ್ಯಯವು ನಿಶೇದಾರ್ಥಕ ಸೂಚಿಸಲು ಬಳಕೆಯಾಗುತ್ತದೆ. ಇಂಗ್ಲಿಶನ Une, ill, less, dis ಈ ಪ್ರತ್ಯಯಗಳ ಪರ್ಯಾಯವಾಗಿ ಸಾದೃಶ್ಯ ಸೃಷ್ಟಿಸಲು ಬಳಸಿಕೊಳ್ಳಲಾಗಿದೆ. ಉದಾ.

ನಿರುದ್ಯೋಗ

ನಿರಾಶ್ರಿತ

ನಿರಕ್ಷರತೆ

ನಿರಾಶೆ

ನಿಶ್ಯಸ್ತ್ರೀಕರಣ ಇತ್ಯಾದಿ.

**೫.೨.೨.೯ ಬಹು-** : ಈ ಪದವು ಎರಡಕ್ಕಿಂತ ಹೆಚ್ಚಿನ ಎನ್ನುವ ಅರ್ಥದಲ್ಲಿ ಬಳಕೆಯಾಗುತ್ತದೆ. ಈ ಪದವು ಇಂಗ್ಲಿಶನ Multi, major ಈ ಪದಗಳ ಪರ್ಯಾಯವಾಗಿ ಸಾದೃಶ್ಯ ಸೃಷ್ಟಿಸಲು ಬಳಸಿಕೊಳ್ಳಲಾಗಿದೆ. ಉದಾ.

ಬಹುಮುಖ ಪ್ರತಿಭೆ

ಬಹುಮಹಡಿ ಕಟ್ಟಡ

ಬಹುದ್ದೇಶ

ಬಹುಸಂಖ್ಯಾಕ ಇತ್ಯಾದಿ.

ಈ ಸಂಸ್ಕೃತ ಪ್ರತ್ಯಯ ಮತ್ತು ಪದಗಳ ಜೊತೆಗೆ ಕೆಲವು ಕನ್ನಡ ಪ್ರತ್ಯಯಗಳು ಸಾದೃಶ್ಯ ರಚನೆಯಲ್ಲಿ ಬಳಕೆಯಾಗಿವೆ. ಉದಾ.

೫.೨.೨.೧೦ ಮುನ್- :

ಮುನ್ನುಡಿ

ಮನ್ಸೂಚನೆ

ಮುಂಜಾಗ್ರತೆ

ಮುಂದಾಳು

ಮುನ್ನೋಟ ಇತ್ಯಾದಿ

೫.೨.೨.೧೧ ಮೇಲ್- :

ಮೇಲ್ಜಾತಿ

ಮೇಲ್ಮನವಿ

ಮೇಲ್ವರ್ಗ

ಮೇಲ್ಮಧ್ಯಮವರ್ಗ

ಮೇಲ್ಮಟ್ಟ

ಮೇಲರಿಮೆ ಇತ್ಯಾದಿ

ಇಂಗ್ಲಿಶನಿಂದ ಸ್ವೀಕರಿಸಿಕೊಂಡ ಕೆಲವು ಪದಗಳಿಗೆ ಅದೇ ಅರ್ಥಸಾಮ್ಯವಿರುವ ಭಾರತೀಯ ಪೌರಾಣಿಕ ಘಟನೆಗಳನ್ನು ವಿವರಿಸುವ ಪದಗಳನ್ನ ಬಳಸಿಕೊಂಡು ಸಾದೃಶ್ಯ ರಚಿಸಿಕೊಳ್ಳಲಾಗಿದೆ. ಉದಾ:

ವಿಮಾನಾಪಹರಣ (hijack)

ಭಗೀರಥ ಪ್ರಯತ್ನ (Herculean task)

ಯಾದವೀ ಕಲಹ (Civil war)

ಅತಿರಥಮಹಾರಥರು (VIPS)

ಯಕ್ಷಪ್ರಶ್ನೆ (Unsolved problem)

ಅಜ್ಞಾತವಾಸ (Underground)

ಸುಗ್ರೀವಾಜ್ಞೆ (Ordinance), ಇತ್ಯಾದಿ

ಇಂಗ್ಲಿಶನಿಂದ ಸ್ವೀಕರಿಸಿಕೊಂಡ ಕೆಲವು ಪದಗಳಿಗೆ ಸಾದೃಶ್ಯ ಪದಗಳನ್ನು ರೂಪಿಸುವಾಗ ಆ ಪದಗಳು ವಿವರಿಸುತ್ತಿರುವ ಕೆಲಸದ ಆಧಾರದ ಮೇಲೆ ಕನ್ನಡದಲ್ಲಿ ಪದಗಳನ್ನು ರಚಿಸಿಕೊಳ್ಳಲಾಗಿದೆ. ಉದಾ.

ಹುಡುಕುದೀಪ (Torch)

ಹಣದುಬ್ಬರ (Inflation)

ಕೃತಿಚೌರ್ಯ (Plagarism)

ಹರಳುಗಟ್ಟು (crystalise)

ಹಣೆಬರಹ/ತಲೆಬರಹ/ಶಿರೋನಾಮೆ/ಶೀರ್ಷಿಕೆ (Heading)

ಬೀಸುನೋಟ (Sweeping View)

ಭೂಮಧ್ಯರೇಖೆ (equator)

ಪ್ರತಿಭಾ ಪಲಾಯನ (Brain drain)

ಕುಪ್ಪಳಿಸುವ ವರ್ಷ (leap year)

ಬೆರಳಚ್ಚು (Typewriting)

ಹೆಗ್ಗುರುತು (landmark)

ಚುಚ್ಚುಮದ್ದು (injection)

ನೆರಳಚ್ಚು (Xerox)

ಬೆಂಕಿಪೆಟ್ಟಿಗೆ/ಕಡ್ಡಿಪೊಟ್ಟಣ (match box)

ಸೂಜಿಗಲ್ಲು/ಅಯಸ್ಕಾಂತ (magnet)

ಕಣಜಾಲ (tissue)

ವಾರ್ತಾಗ್ರಾಹಕಶೃಂಗ (antennae)

ಚುಚ್ಚುಮದ್ದು (injection)

ಕೀಟನಾಶಕ (insecticide)

ಭೂಕಂಪ (earthquake),

ಇತ್ಯಾದಿ, ಇನ್ನು ಕೆಲವು ಇಂಗ್ಲಿಶನಿಂದ ಸ್ವೀಕರಿಸಿದ ಪದಗಳಿಗೆ ಆ ಪದ ಪ್ರತಿನಿಧಿಸುತ್ತಿರುವ ವಸ್ತು/ವಿಷಯದ ಸ್ವರೂಪವನ್ನು ಇಟ್ಟುಕೊಂಡು ಸಾದೃಶ್ಯ ರಚಿಸಿಕೊಳ್ಳಲಾಗಿದೆ.

ಗುಂಡುಸೂಜಿ (pin)

ಬಾಗುಸೂಜಿ (Stapple)

ಕಲ್ಲಿದ್ದಲು (coal)

ಕಲ್ಲೆಣ್ಣೆ (petrol)

ಭೂತಕನ್ನಡಿ/ರಾಹು ಕನ್ನಡಿ (lense)

ಅರೆಘನದ್ರಾವಣ (Gel)

ದುಂಡು ಮೇಜು (Round Table)

ಕೊಳಗೇರಿ (Slum)

ಧ್ವನಿಸುರುಳಿ (casset)

ಸಮವಸ್ತ್ರ (uniform)

ಜೀವಕೋಶ (cell)

ಜಲಪಾತ (Water falls)

ಭಾರಜಲ (heavy water)

ಇಂಗ್ಲಿಶ್ ಭಾಷೆಯ ಪದಗಳ ಆಕಸ್ಮಿಕ ಹೋಲಿಕೆ ಕಂಡುಬರುವ ಕನ್ನಡ ಅಥವಾ ಸಂಸ್ಕೃತ ಪದಗಳ ಸಾದೃಶ್ಯ ರಚಿಸಿಕೊಳ್ಳಲಾಗಿದೆ. ಉದಾ.

ಪ್ರಾಂಶುಪಾಲ – Principal

ಮಾರುಕಟ್ಟೆ – Market

ವಿಷವರ್ತುಲ – Vicious Circle

ಜಂಟಿ – joint

ಕನ್ನಡಕ್ಕೆ ಸ್ವೀಕರಿಸಿಕೊಂಡ ಕೆಲವು ನುಡಿಗಟ್ಟುಗಳನ್ನು ಅದೇ ಅರ್ಥಕ್ಕೆ ಸರಿಹೋಗುವ ಮತ್ತು ಅದೆ ರೀತಿಯ ಪ್ರಾಸಬದ್ಧವಾದ ಪದಗಳನ್ನು ಬಳಸಿ ಸಾದೃಶ್ಯ ರಚಿಸಿಕೊಳ್ಳಲಾಗಿದೆ. ಉದಾ.

ಕಂಡಲ್ಲಿ ಗುಂಡು – Shoot at sight

ಕಲೆಗಾಗಿ ಕಲೆ – Art for art sake

ಗುದ್ದೋಡು – (Hit and run) ಇತ್ಯಾದಿ.

### ೫.೨.೩ ಕ್ರಿಯಾಪದ ರಚನೆ

ಕನ್ನಡವು ಸ್ವೀಕರಿಸಿಕೊಂಡಿರುವ ಅನ್ಯ ಭಾಷೆಯ ಒಟ್ಟು ಪದಗಳನ್ನು ಗಮನಿಸಿದಾಗ ಅವುಗಳಲ್ಲಿ ಕ್ರಿಯಾಪದಗಳಾಗಿ ಸ್ವೀಕರಣಕ್ಕೆ ಒಳಗಾಗುವುದೇ ಇಲ್ಲ. ಒಂದು ವೇಳೆ ಒಂದು ಭಾಷೆಯ ಕ್ರಿಯಾಪದಗಳು ಇನ್ನೊಂದು ಭಾಷೆಯಲ್ಲಿವೆ ಎಂದರೆ ಅವುಗಳು ನಾಮಪದಗಳಾಗಿ ಬಂದು ಆನಂತರ ಪ್ರತ್ಯಯವನ್ನು ಹೊಂದಿ ಬಳಕೆಯಲ್ಲಿ ಬಂದಿರಬಹುದು.

ಕನ್ನಡದಲ್ಲಿ ಬಳಕೆಯಲ್ಲಿರುವ ಇಂತಹ ಕ್ರಿಯಾರಚನೆಗಳು ಅವುಗಳ ಮೂಲದ ಬಳಕೆಯಂತೆ ಸ್ವತಂತ್ರವಾಗಿ ಕ್ರಿಯೆಯನ್ನು ವಿವರಿಸುವುದಿಲ್ಲ. ಅವುಗಳ ಬಳಕೆ ನೋಡಿದರೆ ನಾಮಪದಗಳ ಬಳಕೆಯಂತಿರುತ್ತದೆ("Though some verbs have come to Kannada along with of their foreign loans, they are found to be used as abstract noun's only"(ಕೆದಿಲಾಯ:೧೯೭೦:೧೦). ಇತರ ಭಾಷೆಗಳ ಸ್ವೀಕರಣ ಪದಗಳಿಂದ ಕನ್ನಡದಲ್ಲಿ ಕ್ರಿಯಾರಚನೆಗಳು ರೂಪುಗೊಳ್ಳುವಾಗ ಅನುಸರಿಸುವ ಕ್ರಮವನ್ನು ಕುರಿತ ಚರ್ಚೆ ಇಲ್ಲಿದೆ. ಕನ್ನಡದಲ್ಲಿ ಕ್ರಿಯಾಪದ ಸಾಧಿಸುವಲ್ಲಿ

*ನಾಮಪದ+ಪ್ರತ್ಯಯ =ಕ್ರಿಯಾಪದ*

*ಕ್ರಿಯಾಪದ+ಪ್ರತ್ಯಯ=ಕ್ರಿಯಾಪದ*

*ನಾಮಪದ+ಕ್ರಿಯಾಪದ=ಕ್ರಿಯಾಪದ*

*ಕ್ರಿಯಾಪದ+ಕ್ರಿಯಾಪದ=ಕ್ರಿಯಾಪದ,* ಈ ನಾಲ್ಕು ಮಾದರಿಗಳನ್ನು ಅನುಸರಿಸಲಾಗುತ್ತಿದೆ.

**೫.೨.೩.೧ ಕ್ರಿಯಾಪದ+ಕ್ರಿಯಾಪದ=ಕ್ರಿಯಾಪದ**

**೫.೨.೩.೧.೧ ಮಾಡು**

ಇವುಗಳನ್ನು ಗುಣ, ನಾಮಪದಗಳೊಂದಿಗೆ ಸೇರಿಸಿ ಕ್ರಿಯಾಪದ ಸಾಧಿಸಲು ಸಾಧ್ಯವಿದೆ. 'ಆಗು' ಬಳಸಿ ಸಂಧಿಪದ ರಚಿಸಿದರೆ 'ಮಾಡು' ಸೇರಿಸಿ ಸಮಾಸ ಪದ ರಚಿಸಲಾಗುತ್ತದೆ. ಕನ್ನಡದಲ್ಲಿ ಅನ್ಯ ಭಾಷೆಯಿಂದ ಬಂದ ಪದಗಳಿಗೆ 'ಆಗು' ಮತ್ತು 'ಮಾಡು' ಈ ಕ್ರಿಯಾಧಾತುಗಳನ್ನು ಸೇರಿಸಿದರೆ ಒಂದು ಘಟನೆಯನ್ನು (ಆಗು) ಮತ್ತು ಇನ್ನೊಂದು (ಮಾಡು) ಕೆಲಸವನ್ನು ತಿಳಿಸುವುದನ್ನು ಕಾಣುತ್ತೇವೆ.

ಬದಲಿಮಾಡು

ಅಡಚಣಮಾಡು

ಅವಾಜಮಾಡು

ಆರಾಮಮಾಡು

ಉಲ್ಟಾಮಾಡು

ಗಡುಪಮಾಡು

ಚಾಲುಮಾಡು

ಧೋಕಾಮಾಡು

ಭರ್ತಿಮಾಡು

ಉಲ್ಪಿಮಾಡು

ಪಾರಮಾಡು

ಲೂಟಿಮಾಡು

ವಟಾಳಿಮಾಡು

ಡ್ರೈವ್ ಮಾಡು

ಔಟ್ ಮಾಡು

ಟೈಪ್ ಮಾಡು

ಅರೆಸ್ಟ್ ಮಾಡು

ಓಪನ್ ಮಾಡು

ಕ್ಲೋಸ್ ಮಾಡು

೫.೨.೩.೧.೨ ಆಗು

ಬದಲಿ ಆಗು

ಅಡಚಣಿಾಗು

ಆವಾಜ ಆಗು

ಆರಾಮಾಗು

ಉಲ್ಟಾ ಆಗು

ಗಡುಪಾಗು

ಕವಕವಾಗು

ಚಾಲು ಆಗು

ಧೋಕಾ ಆಗು

ಭರ್ತಿ ಆಗು

ಉಲ್ಟಿ ಆಗು

ಪಾರಾಗು

ಲೂಟಿ ಆಗು

ವಟಾಳಿ ಆಗು

ಸ್ಟಾರ್ಟ್ ಆಗು

ರಿಂಗ್ ಆಗು

ಔಟ್ ಆಗು

ಸಫರ್ ಆಗು

ಸೆಟಲ್ ಆಗು

೫.೨.೩.೧.೩ ಹಾಕು

ಅವಾಜಹಾಕು

ಕರಾರಹಾಕು

ಗೊಂದಲ ಹಾಕು

ಫೇರ್ ಹಾಕು

ಧಮಕಿ ಹಾಕು

ಹುಡದಿ ಹಾಕು

ಟಾಕಿಹಾಕು

ಪಲ್ಟಿಹಾಕು

ಕನ್ನಡದಲ್ಲಿ ಈ ಧಾತುವಿಗೆ 'ಕೆಲಸವನ್ನು ಮಾಡಿ ಮುಗಿಸು' ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಇದು ಈ ಮೇಲಿನ ಪದಗಳಲ್ಲಿ ಮಾಡು, ಹೆರು, ಆಗು, ಆಡು ಈ ಅರ್ಥಗಳಲ್ಲಿ ಬಳಕೆಯಾಗುತ್ತಿದೆ.

**೫.೨.೩.೧.೪ ಇಡು**

ಖುನಸಿ ಇಡು

ಠೇವಣಿ ಇಡು

ನೀಗಾ ಇಡು

ಪಂಚಾಯತಿ ಇಡು

ಇದು ಕನ್ನಡದಲ್ಲಿ ನಾಮಪದ, ಗುಣವಾಚಕ ಮತ್ತು ಕ್ರಿಯಾ ಧಾತುಗಳಿಗೆ ಜೋಡಿಸುವ ರೂಪಗಳೊಂದಿಗೆ ಬಳಕೆಯಾಗುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಸಮಾಸಗೊಂಡ ಪದದ ಮೂಲಧಾತುವಿನ ಕೆಲಸವನ್ನು ತಿಳಿಸುತ್ತದೆ.

**೫.೨.೩.೧.೫ ಇರು**

ಅಗಾವದಾ

ಅಡಚಣದಾ

ಉಲ್ಟಾದಾ

ಆರಾಮದಾ

ಚಾಲುದಾ

ನಿಗಾದಾ

ಬರಾಬರದ

ಈ ಪದಗಳಲ್ಲಿ **'ಇರು'** ಕ್ರಿಯಾಧಾತು **'ಅದಾ'** ರೂಪದಲ್ಲಿ ಬಳಕೆಯಲ್ಲಿದೆ. **ಇದೆ**>**ಅದೆ**>**ಅದಾ** ಆಗಿ ಪರಿವರ್ತನೆ ಹೊಂದಿ ಕನ್ನಡದಲ್ಲಿ ಬಕೆಯಲ್ಲಿದೆ. ಇದೇ ಸ್ವೀಕರಣ ಪದಗಳಿಗೆ ಸೇರುವುದರ ಮೂಲಕ ಹೊಸ ಪದ ರಚನೆಯಾಗುತ್ತವೆ.

**೫.೩.೧.೬ ಕೊಡು** : ಇದನ್ನು 'ಒಂದು ಕೆಲಸವನ್ನು ಇನ್ನೊಬ್ಬರ ನೆರವಿಗಾಗಿ ಮಾಡಲಾಗಿದೆ' ಎಂಬಂತೆ ಬಳಸಲಾಗುತ್ತದೆ. ಉದಾ.

ಅಗಾವಕೊಡು

ಬಟಾಯಿಕೊಡು

ಸೂಟಿಕೊಡು

**೫.೨.೩.೧.೭ ಬಿಳು** : ಏನೋ ಕೆಟ್ಟದಾಗಿರುವ ಘಟನೆ ನಡೆದಿದೆ ಅನ್ನುವ ಅರ್ಥದಲ್ಲಿ ಇದನ್ನು ಬಳಸಲಾಗುತ್ತದೆ.

ಪಲ್ಬಿಬಿಳು

ಉಲ್ಟಾಬಿಳು

ಫರಾಕಬಿಳು

೫.೨.೩.೧.೮ ತಗೊ

ಕೇರ್ ತಗೊ

ಲೋನ್ ತಗೊ

ರಿಸ್ಕ್ ತಗೊ

೫.೨.೩.೧.೯ ಹಾಕು

ಟಾರ್ಚ್ ಹಾಕು

ಕಪ್ಲೇಂಟ್ ಹಾಕು

೫.೨.೩.೧.೧೦ ಇತರೆ

ಶಾಕ್ ಹೊಡಿ

ಸೈಕಲ್ ಹೊಡಿ

ಟೇಸ್ಟ್ ನೋಡು

ಫೋಟೋ ಬೀಳು

ಎಕ್ಸ್‌ಕ್ಯುಜ್ ಕೇಳು

ಕನ್ನಡದಲ್ಲಿರುವ ಸ್ವೀಕರಣ ಕ್ರಿಯಾರಚನೆಯ ಕನ್ನಡ ಕ್ರಿಯಾಪದಗಳನ್ನು ಬಳಸಿಕೊಂಡು ಸಾದೃಶ್ಯ ರಚಿಸಿಕೊಳ್ಳಲಾದ ಬಗೆಗಳನ್ನ ಈ ಮೇಲಿನ ಉದಾಹರಣೆಗಳಲ್ಲಿ ಕಾಣಬಹುದಾಗಿದೆ. ಮಾಡು ಮತ್ತು ಆಗು ಈ ಕ್ರಿಯಾ ಧಾತುಗಳು ಹೆಚ್ಚಾಗಿ ಸಹಾಯಕ ಕ್ರಿಯಾಪದವಾಗಿ ಬಳಕೆಯಾಗಿರುವುದನ್ನು ಗಮನಿಸಲಾಗಿದೆ. ಕೆಲವು ಪಾರಸಿ, ಅರಬ್ಬಿ, ಉರ್ದು, ಮರಾಠಿ ಮತ್ತು ಇಂಗ್ಲಿಶ್‌ನಿಂದ ಸ್ವೀಕರಿಸಿದ ಪದಗಳಿಗೆ ಮಾಡು ಮತ್ತು ಆಗು ಎರಡು ಕ್ರಿಯಾಪದಗಳನ್ನು ಸೇರಿಸಿ ಕ್ರಿಯೆಯನ್ನು ಗುರುತಿಸಲಾಗುತ್ತಿದೆ. ಕನ್ನಡದಲ್ಲಿ ಅನ್ಯ ಭಾಷೆಯಿಂದ ಬಂದ ಪದಗಳಿಗೆ 'ಆಗು' ಮತ್ತು 'ಮಾಡು' ಈ ಕ್ರಿಯಾಧಾತುಗಳನ್ನು ಸೇರಿಸಿದಾಗ ಒಂದು ಘಟನೆಯನ್ನು (ಆಗು) ಮತ್ತು ಇನ್ನೊಂದು (ಮಾಡು) ಕೆಲಸವನ್ನು ತಿಳಿಸುತ್ತವೆ.

| ಕೆಲಸ | ಘಟನೆ |
|---|---|
| ಅವಾಜಮಾಡು | ಆವಾಜ ಆಗು |
| ಆರಾಮಮಾಡು | ಆರಾಮಾಗು |
| ಉಲ್ಟಾಮಾಡು | ಉಲ್ಟಾಆಗು |
| ಗಡುಪಮಾಡು | ಗಡುಪಾಗು |
| ಕವಕವಮಾಡು | ಕವಕವಾಗು |

| | |
|---|---|
| ಚಾಲುಮಾಡು | ಚಾಲುಆಗು |
| ಧೋಕಾಮಾಡು | ಧೋಕಾಆಗು |
| ಭರ್ತಿಮಾಡು | ಭರ್ತಿಆಗು |
| ಉಲ್ಪಿಮಾಡು | ಉಲ್ಪಿಆಗು |
| ಪಾರಮಾಡು | ಪಾರಾಗು |
| ಅರೆಸ್ಟ್ ಮಾಡು | ಅರೇಸ್ಟ್ ಆಗು |
| ಓಪನ್ ಮಾಡು | ಓಪನ್ ಆಗು |
| ಕ್ಲೋಸ್ ಮಾಡು | ಕ್ಲೋಸ್ ಆಗು |
| ಸ್ಟಾರ್ಟ್ ಮಾಡು | ಸ್ಟಾರ್ಟ್ ಆಗು |
| ರಿಂಗ್ ಮಾಡು | ರಿಂಗ್ ಆಗು |
| ಔಟ್ ಮಾಡು | ಔಟ್ ಆಗು |

ಈ ಎರಡು ಕ್ರಿಯಾ ಧಾತುಗಳು ಕನ್ನಡದಲ್ಲಿ ಸಾಮಾನ್ಯವಾಗಿ ನಾಮಪದ, ಗುಣವಾಚಕಗಳೊಂದಿಗೆ ಬಂದು ಹೊಸ ಕ್ರಿಯಾಪದ ರಚನೆ ಆಗುವವು. ಆದರೆ ಸ್ವೀಕರಣ ಪದಗಳಲ್ಲಿ ಕ್ರಿಯಾಪದಗಳನ್ನು ಸೇರುವುದರ ಮೂಲಕ ಪದರಚನೆ ಆಗಿರುವುದನ್ನು ಕಾಣಬಹುದಾಗಿದೆ.

### ೫.೨.೩.೨ ಕ್ರಿಯಾಪದ+ಪ್ರತ್ಯಯ=ಕ್ರಿಯಾಪದ

### ೫.೨.೩.೨.೧ –ಇಸು

ಈ ಪ್ರತ್ಯಯವನ್ನು ನಾಮಪದ, ವಿಶೇಷಣ ಕ್ರಿಯಾಪದಗಳಿಗೆ ಸೇರಿಸುವುದರ ಮೂಲಕ ಹೊಸ ಕ್ರಿಯಾಪದಗಳನ್ನು ರಚಿಸುವ ಪ್ರಕ್ರಿಯೆ ಕನ್ನಡದಲ್ಲಿದೆ. ಚಾರಿತ್ರಿಕವಾಗಿ ಇದಕ್ಕೆ **'ಇಸು'** ಎನ್ನುವ ಕ್ರಿಯಾರೂಪವೇ ಮೂಲ ಕಾರಣವಾಗಿರಬೇಕೆಂದು ಭಟ್ಟರು (೧೯೯೯:೩೯) ಅಭಿಪ್ರಾಯ ಪಡುತ್ತಾರೆ. ಇದು ಅನ್ಯ ಭಾಷೆಗಳಿಂದ (ಸಂಸ್ಕೃತ, ಪಾರಸಿ ಅರಬ್ಬಿ, ಉರ್ದು, ಮರಾಠಿ, ಇಂಗ್ಲಿಶ್)ಬಂದ ಪದಗಳಿಗೆ ಸೇರಿಸುವುದರ ಮೂಲಕ ಕ್ರಿಯಾರ್ಥ ಸಾಧಿಸಲು ಬಳಕೆಗೊಂಡು ಆನಂತರ ಕ್ರಮೇಣ ಕನ್ನಡ ಕ್ರಿಯಾಪದಗಳಿಗೂ ವಿಸ್ತರಿಸಿಕೊಂಡಿದೆ. ಕನ್ನಡದಲ್ಲಿ ಅನೇಕ ಸಾಧಿತ ಕ್ರಿಯಾಪದಗಳಿವೆ. ಅವುಗಳೆಲ್ಲ ಯಾವುದಾದರೊಂದು ಕ್ರಿಯಾಧಾತುವಿನ ಸಹಾಯದಿಂದ ನಿರ್ಮಾಣವಾದವುಗಳು. ಮಾಡು, ಕೊಡು, ಆಗು, ಹಾಕು, ಕೊಳ್ಳು, ಕೆಲವು ಕ್ರಿಯಾಧಾತುಗಳು ಹೊಸ ಪದ ರಚನೆಗೆ ತೆರೆದುಕೊಳ್ಳುತ್ತಿರುವುದು ನೋಡಿದರೆ ಬಹುಶಃ **'ಇಸು'** ಈ ಹಂತ ದಾಟಿಯೇ ಬಂದಿರಬೇಕೆನಿಸದೆ ಇರದು. ಹೀಗಾಗಿ **'ಇಸು'**ವಿಗೆ ಮೂಲ ಕ್ರಿಯಾಪದ ಆಗಿರುವುದರಿಂದ ಇದನ್ನು ಪ್ರತ್ಯಯವೆನ್ನದೆ ಕ್ರಿಯಾಪದವೆನ್ನುವುದೇ ಉಚಿತವೆಂದು ತೋರುವುದೆಂದು ಭಟ್ಟರು (೧೯೯೯:೩೯) ಅಭಿಪ್ರಾಯ ಪಡುತ್ತಾರೆ. ಇದು ಅದರ ಬಳಕೆಯ ಚಾರಿತ್ರಿಕತೆ ಅಧ್ಯಯನದಿಂದ ಗಟ್ಟಿಗೊಳ್ಳಬಲ್ಲದು. ಅದಕ್ಕೆ ಅವಶೇಷಗಳ ಅಗತ್ಯತೆ ಇದೆ.

ಕನ್ನಡದಲ್ಲಿ ಇನ್ನೊಂದು '-ಇಸು' ಪ್ರತ್ಯಯವಿದೆ. ಅದು ಪದಗಳಿಗೆ ಪ್ರೇರಣಾರ್ಥಕವಾಗಿ ಬರುತ್ತದೆ.ಇದು ಕ್ರಿಯಾಪದಗಳಿಗೆ ಸೇರುವುದರ ಮೂಲಕ ಆ ಕೆಲಸಕ್ಕೆ ಪ್ರೇರಣೆಗೆ ಕಾರಣವಾದ ಶಕ್ತಿಯನ್ನು ತಿಳಿಸುತ್ತದೆ.

ಮಾಡು > ಮಾಡಿಸು

ಕುಡಿ > ಕುಡಿಸು

ತಿನ್ನು > ತಿನ್ನಿಸು

ನಿಲ್ಲು > ನಿಲ್ಲಿಸು ಇತ್ಯಾದಿ

ಈ ಎರಡೂ (ಇಸು) ರೂಪಗಳಲ್ಲಿ ಒಂದೇ ಆಗಿದ್ದರೂ ಮೊದಲನೆಯದ್ದು ಮಾತ್ರ ಸ್ವೀಕರಣ ಪದಗಳಿಂದ ಕ್ರಿಯಾಪದ ರಚನೆಗೆ ಸಂಬಂಧಿಸಿದ್ದಾಗಿದೆ. ಪಾರಸಿ, ಅರಬ್ಬಿ, ಉರ್ದು, ಮರಾಠಿ ಮತ್ತು ಇಂಗ್ಲಿಶ್‌ನಿಂದ ಸ್ವೀಕರಿಸಿದ ನಾಮಪದ, ಕ್ರಿಯಾಪದಗಳಿಗೆ '-ಇಸು' ಪ್ರತ್ಯಯ ಸೇರುವುದರ ಮೂಲಕ ಕನ್ನಡದಲ್ಲಿ ಕ್ರಿಯಾಪದವಾಗಿ ಬಳಸಲಾಗುತ್ತಿದೆ.

ಅಟಕಾಸು

ಅಕಡಾಯಿಸು

ಚಡಾಯಿಸು

ಚುಡಾಯಿಸು

ಖವಳಿಸು

ಛಾಪಾಯಿಸು

ಜಟಕಾಯಿಸು

ಝುಡಕಾಯಿಸು

ಜಾಣಾಸು

ಟಿಕಾಯಿಸು

ಠರಾಯಿಸು

ಥಕಾಯಿಸು

ಪಟಾಯಿಸು

ಟೈಪಿಸು

ರಿಂಗಿಸು

ಕ್ಲಿಕ್ಕಿಸು

ಫೋನಿಸು(ಫೋನಾಯಿಸು) )ಇತ್ಯಾದಿ.

ಈ ಮೇಲಿನ ರಚನೆಗಳಲ್ಲಿ **'ಇಸು'**ವಿನ ಬಳಕೆ ಕ್ರಿಯಾಪದ ರಚನೆಗೆ ಸಂಬಂಧಿಸಿದ್ದಾಗಿದೆಯೇ ಹೊರತು ಪ್ರೇರಣಾರ್ಥಕವಾಗಿ ಬಂದಿದ್ದಲ್ಲ. ಪ್ರೇರಣಾರ್ಥಕವಾಗಿ ಬರುವ ಇಸು ಕನ್ನಡದ – **ಅಲ್ಪಡು** ಪ್ರತ್ಯಯದ ಪೂರಕವಾಗಿ ಬರುವಂಥದ್ದು. ಧಾತುವಿಗೆ ಪ್ರತ್ಯಯ ಸೇರುವುದರ ಮೂಲಕ ಪೂರ್ಣ ಕ್ರಿಯಾಪದ ಆಗುವ ಪ್ರಕ್ರಿಯೆಗೆ ಕನ್ನಡದಲ್ಲಿ **'–ಉ', '–ಎ', '–ಇ'** ಕ್ರಿಯಾ ಪ್ರತ್ಯಯಗಳಿವೆ. ಇದರಂತೆಯೇ ಸ್ವೀಕರಣ ಪದಗಳಿಗೆ ಸೇರುವ –ಇಸು ಪ್ರತ್ಯಯವು ಕನ್ನಡದ ಕ್ರಿಯಾ ಪ್ರತ್ಯಯಗಳ ಪೂರಕ ಪರಿಸರದಲ್ಲಿ ಬರುತ್ತಿದೆ.

ಕೆಲವೊಮ್ಮೆ ಒಂದೇ ಕ್ರಿಯೆಯನ್ನು ಸೂಚಿಸಲು ಬೇರೆ ಬೇರೆ ಕ್ರಿಯಾಧಾತುಗಳನ್ನು ಬಳಕೆಮಾಡುತ್ತಿರುವುದು ಕಂಡುಬರುತ್ತದೆ.

**ಪ್ರಿಂಟ್** – ಮಾಡು/ಹಾಕು/ತೆಗೆ(–ಇಸು)

**ಬ್ರೇಕ್** – ಮಾಡು/ಹಿಡಿ

**ಎಕ್ಸಿಲೇಟರ್** – ಕೊಡು/ಮಾಡು/ಒತ್ತು

**ಫೋಟೋ** – ತೆಗೆ/ಕ್ಲಿಕ್ಕಿಸು(ಬಿಳು)

**ಪೆಡಲ್** – ತುಳಿ/ತಳ್ಳು/ ಹೊಡಿ ಇತ್ಯಾದಿ.

ಈ ಪದಗಳು ಕಾಲವಾಚಕ ಪಡೆದುಕೊಳ್ಳುವಾಗ ಮೂಲದ ರಚನೆಯನ್ನು ಸಂಪೂರ್ಣವಾಗಿ ಕಳೆದು ಕೊಂಡು ಕನ್ನಡ ಪದಗಳಂತೆ ಕನ್ನಡ ಕಾಲವಾಚಕಗಳನ್ನು ಪಡೆದುಕೊಂಡು ಕಾಲವನ್ನು ಗುರುತಿಸುತ್ತಿವೆ. ಉದಾ.

*ರಿಂಗ್, ರ್‍ಯಾಂಗ್, ರಂಗ್*

*ಡ್ರೈವ್, ಡ್ರೀವ್, ಡ್ರೋನ್*

*ಓಪನ್, ಓಪನ್ಡ್, ಓಪನ್ಡ್*

*ಟೇಸ್ಟ್, ಟೇಸ್ಟೆಡ್, ಟೇಸ್ಟೆಡ್*

ಈ ಪದಗಳು ಕನ್ನಡದಲ್ಲಿ ಕ್ರಿಯಾಪದವಾಗಿ ರಚನೆಗೊಳ್ಳುವಾಗ, ಮಾಡು, ಮಾಡಿದರು, ಮಾಡುವರು ಅಥವಾ ಆಗು, ಆಯಿತು, ಆಗುವುದು ಹೀಗೆ ರಚನೆಯಾಗುತ್ತವೆ ಮತ್ತು ಇಂಗ್ಲಿಶ್‌ನಲ್ಲಿ ಕೆಲಸ ಪ್ರಗತಿಯಲ್ಲಿರುವುದನ್ನು ತಿಳಿಸಲು ಬಳಸುವ **–ಇಂಗ್** ಪ್ರತ್ಯಯ ಬಂದಾಗಲೂ ಕನ್ನಡದಲ್ಲಿ ಸಹಜ ಪದದ ಹಾಗೆ ಬಳಸಲಾಗುತ್ತಿದೆ.

| | |
|---|---|
| ಡ್ರೈವ್‌ಮಾಡು | ಡ್ರೈವಿಂಗ್‌ಮಾಡು |
| ರನ್‌ಓಡು | ರನ್ನಿಂಗ್‌ಓಡು |

ಈ ರಚನೆಗಳು ಹೊಸದಾಗಿ ಬಂದ ಕ್ರಿಯೆಗಳನ್ನು ಗುರುತಿಸಲು ರಚನೆಗೊಂಡಿವುಗಳಾಗಿವೆ. ಇಲ್ಲಿ ಮುಖ್ಯವಾಗಿ ಮೂರು ಮಾದರಿಯ ರಚನೆಗಳನ್ನು ಗುರುತಿಸಲಾಗಿದೆ.

## ೫.೩. ಸ್ವೀಕರಣ

ಎರಡು ಭಾಷೆಗಳು ಅಥವಾ ಎರಡು ಉಪಭಾಷೆಗಳು ಪರಸ್ಪರ ಸಂಪರ್ಕಕ್ಕೆ ಬಂದು ಪರಸ್ಪರ ಅಥವಾ ಯಾವುದಾದರೊಂದು ಭಾಷೆ ಇನ್ನೊಂದು ಭಾಷೆಯಿಂದ ಭಾಷಿಕ ಅಂಶಗಳನ್ನು ಸ್ವೀಕರಿಸಿಕೊಳ್ಳುವ ಪ್ರಕ್ರಿಯೆಯೇ ಸ್ವೀಕರಣ ಎನ್ನಲಾಗುತ್ತದೆ. ಕನ್ನಡವು ಪ್ರಾಕೃತ, ಸಂಸ್ಕೃತ, ಪಾರಸಿ, ಅರಬ್ಬಿ, ಉರ್ದು, ಮರಾಠಿ ಮತ್ತು ಇಂಗ್ಲಿಶ್ ಭಾಷೆಗಳಿಂದ ಅನೇಕ ಪದಗಳನ್ನು ಸ್ವೀಕರಿಸಿಕೊಂಡಿದೆ. ಹೀಗೆ ಪದಗಳನ್ನು ಸ್ವೀಕರಿಸಿಕೊಳ್ಳುವಾಗ ಅನೇಕ ಮಾದರಿಗಳನ್ನು ಅನುಸರಿಸಿದೆ. ಹೆಚ್ಚಿನ ಪದಗಳನ್ನು ನೇರವಾಗಿ ಸ್ವೀಕರಿಸಿಕೊಂಡರೆ ಕೆಲವು ಪದಗಳನ್ನು ಅನುವಾದಿಸಿ ಅಥವಾ ಇತರ ಮಾದರಿಗಳನ್ನು ಸ್ವೀಕರಿಸಿಕೊಂಡಿದೆ. ಇಲ್ಲಿ ಹೀಗೆ ಸ್ವೀಕರಿಸಿಕೊಳ್ಳುವಾಗ ಮಾಡಿಕೊಂಡ ರಚನೆಗಳನ್ನು ಚರ್ಚಿಸಲಾಗಿದೆ.

### ೫.೩.೧. ಶಬ್ದ ಸ್ವೀಕರಣ

ಒಂದು ಭಾಷೆಯಿಂದ ಒಂದು ವಿಚಾರ, ವಸ್ತು ಇಲ್ಲವೆ ವ್ಯವಹಾರವನ್ನು ಸ್ವೀಕರಿಸಬೇಕಾಗಿ ಬಂದಾಗ, ಅದನ್ನು ನಿರ್ದೇಶಿಸುವ ಶಬ್ದವನ್ನು ಸ್ವೀಕರಿಸಿದರೆ ಅದನ್ನು ಶಬ್ದ ಸ್ವೀಕರಣ ಎನ್ನಲಾಗುತ್ತದೆ. ಇದು ವಿಚಾರ, ವಸ್ತು ಇಲ್ಲವೆ ವ್ಯವಹಾರವನ್ನು ಸ್ವೀಕರಿಸಬೇಕಾದ ಭಾಷೆಯ ಪದವನ್ನು ಆ ಭಾಷೆಯ ಮೂಲ ಧ್ವನಿಗಳೊಂದಿಗೆ ಸ್ವೀಕರಿಸಿಕೊಳ್ಳುವುದೇ ಶಬ್ದ ಸ್ವೀಕರಣವೆನಿಸುತ್ತದೆ. ಕನ್ನಡವು ಪ್ರಾಕೃತ, ಸಂಸ್ಕೃತ, ಪಾರಸಿ, ಅರಬ್ಬಿ, ಉರ್ದು, ಮರಾಠಿ ಮತ್ತು ಇಂಗ್ಲಿಶ್ ಭಾಷೆಗಳಿಂದ ಶಬ್ದ ಸ್ವೀಕರಣಮಾಡಿಕೊಂಡಿದೆ. ಉದಾ.

ಬ್ಯಾಂಕು,
ಬ್ಯಾಡ್ಜು
ಬ್ಯಾನರು
ಆಫೀಸು/ಆಪೀಸು
ಅಪೀಲು
ಟ್ಯಾಂಕು
ಹೋಟೆಲು
ಪೋಲಿಸು
ಬೋನಸ್ಸು
ಜಡ್ಜು
ಲೈಸೆನ್ಸು
ಎಸ್ಸೆನ್ಸು
ಕ್ಲಬ್ಬು
ವೋಟು

ಟೀಮು

ಕಾರು

ಬಸ್ಸು ಇತ್ಯಾದಿ

**೫.೩.೨. ಭಾಷಾಂತರ ಸ್ವೀಕರಣ**

ಒಂದು ಭಾಷೆಯಿಂದ ಒಂದು ವಿಚಾರ, ವಸ್ತು ಇಲ್ಲವೆ ವ್ಯವಹಾರವನ್ನು ಸ್ವೀಕರಿಸುವಾಗ ಆ ಭಾಷೆಯ ಪದವನ್ನು ಸ್ವೀಕರಿಸದೆ ಆ ಪದದ ಪರ್ಯಾಯವಾಗಿ ಕನ್ನಡದಲ್ಲಿಯೇ ಇರುವ ಪದಗಳನ್ನು ಬಳಸಿ ಆ ಒಂದು ವಿಚಾರ, ವಸ್ತು ಇಲ್ಲವೆ ವ್ಯವಹಾರವನ್ನು ಗುರುತಿಸಿವ ಪದ ರಚಿಸಿಕೊಳ್ಳುವುದೇ ಭಾಷಾಂತರ ಸ್ವೀಕರಣ ಎನ್ನಲಾಗುತ್ತದೆ. ಕನ್ನಡದಲ್ಲಿ ಈ ಮಾದರಿಯ ಅನೇಕ ಪದಗಳು ರಚನೆಗೊಂಡಿವೆ. ಪ್ರಾರಂಭದಲ್ಲಿ ಸಂಸ್ಕೃತದಿಂದ ಸ್ವೀಕರಿಸಿದ ಪದಗಳನ್ನು ಭಾಷಾಂತರ ಮಾಡಿ ಬಳಸಿದ್ದು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಕಂಡುಬಂದಿದೆ. ಆನಂತರ ಉರ್ದು, ಮರಾಠಿ ಮೂಲಕ ಕನ್ನಡಕ್ಕೆ ಬಂದ ಪಾರಸಿ, ಅರಬ್ಬಿ ಮತ್ತು ಇಂಗ್ಲಿಶ್ ಪದಗಳಿಗೆ ಕನ್ನಡದಲ್ಲಿ ಪದರಚಿಸಿಕೊಳ್ಳಲಾಗಿದೆ. ಉದಾ.

ಆಕಾಶವಾಣಿ

ಪುಸ್ತಕ ಭಂಡಾರ

ವಿಮಾನ

ಉಪಗ್ರಹ

ಕ್ಷಿಪಣಿ

ತೆರೆದ ಅಂಚೆ

ಕಲ್ಲೆಣ್ಣೆ

ಕೈಚೀಲ

ಶೀತಲಸಮರ

ಮುನ್ನುಡಿ

ಅತಿಮಾನವ

ಭಾರಜಲ

ಕ್ಷ-ಕಿರಣ

ಬಹುಜಲ ಇತ್ಯಾದಿ.

### ೫.೩.೩. ಮಿಶ್ರ ಸ್ವೀಕರಣ

ಒಂದು ಭಾಷೆಯಿಂದ ಸ್ವೀಕರಿಸಿಕೊಳ್ಳುವ ವಿಚಾರ, ವಸ್ತು ಇಲ್ಲವೆ ವ್ಯವಹಾರಕ್ಕೆ ಸಂಬಂಧಿಸಿದ ಪದವನ್ನು ಮೂಲ ಭಾಷೆಯ ಒಂದು ಅಂಶಕ್ಕೆ ಕನ್ನಡದ ಒಂದು ಅಂಶವನ್ನು ಸೇರಿಸಿ ಪದರಚಿಸುವುದೇ ಮಿಶ್ರ ಸ್ವೀಕರಣ ಎನಿಸಿಕೊಳ್ಳುತ್ತದೆ. ಕನ್ನಡದಲ್ಲಿ ಈ ಮಾದರಿಯ ಅನೇಕ ಪದಗಳು ರಚನೆಗೊಂಡಿವೆ. ಉದಾ.

**೫.೩.೩.೧ ಕನ್ನಡ +ಅರಬ್ಬಿ :**

ಅಂಗಡಿ ಮಾಲೀಕ

ಗುತ್ತಿಗೆ ಕರಾರು

ಮನೆ ಮಾಲೀಕ

ಬೆಳೆ ವಿಮೆ

ಬಟ್ಟೆ ಗಿರಣಿ

**೫.೩.೩.೨ ಕನ್ನಡ + ಪಾರಸಿ :**

ಗುತ್ತಿಗೆ ಕಾಗದ

ಕಡ್ಡಿ ಪೈಲ್ವಾನ

ಕಳ್ಳ ಕಾಗದ

ಪೈರು ದಾರು

**೫.೩.೩.೩ ಪೋರ್ಚುಗೀಸ್ + ಕನ್ನಡ :**

ಕೋಸುಗೆಡ್ಡೆ

ಮೇಜುಕಟ್ಟು

**೫.೩.೩.೪ ಕನ್ನಡ + ಇಂಗ್ಲಿಶ್**

ಗುಂಡು ಪಿನ್ನು

ಅಡಿಗೆಸೋಡ

ಬಟ್ಟೆಮಿಲ್

ಹಳೆಪೇಪರ್

ಹೋಲಿಗೆ ಮಿಶನ್

ಭಾರಿ ಬಿಸಿನೆಸ್

**೫.೩.೩.೫ ಇಂಗ್ಲಿಶ್ + ಕನ್ನಡ**

ಗಿಲೀಟು ಕೆಲಸ

ಗಲ್ಲು ಕಂಬ

ಕ್ಯಾಟರ ಬಿಲ್ಲು

ಕಂತ್ರಿ ನಾಯಿ

ರೂಲು ದೊಣ್ಣೆ

ರೋಣ (ರೌಂಡ) ಕಲ್ಲು

ಮೈಲಿಗಲ್ಲು

ರೈಲುನಿಲ್ದಾಣ

ಓಜೋನು ಪೊರೆ

ಚಿಮಣಿ ಎಣ್ಣೆ

ಮಿನಿ ಕವಿತೆ

ಬ್ರೆಡ್ ಅಂಗಡಿ

ಆಲಿವ್ ಎಣ್ಣೆ ಇತ್ಯಾದಿ

## ೫.೪. ಅರ್ಥ

ಪದಕೋಶದ ಬೆಳವಣಿಗೆಯಲ್ಲಿ ಪದಗಳ ಅರ್ಥವು ನೇರವಾಗಿ ಸಹಾಯವಾಗಲಾರದು. ಆದರೇ ಬೇರೆ ಭಾಷೆಗಳಿಂದ ಸ್ವೀಕರಿಸಿದ ಪದಗಳ ಅರ್ಥವನ್ನು ಸ್ವಭಾಷೆಯ ವಿಷಯ, ಘಟನೆ, ವಸ್ತುಗಳನ್ನು ವಿವರಿಸಲು ಬೇರೆ ಅರ್ಥದಲ್ಲಿ ಸ್ವೀಕರಣಗೊಂಡು ಪದಕೋಶದ ಭಾಗವಾಗುತ್ತವೆ. ಭಾಷೆಯಲ್ಲಿ ಪದಗಳ ಅರ್ಥ ಯಾವಾಗಲೂ ಒಂದೇ ರೀತಿಯಲ್ಲಿರುವುದಿಲ್ಲ. ಅದು ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತದೆ. ಅಂದರೆ ಒಂದು ಪದ ಕಾಲಾಂತರದಲ್ಲಿ ಮೂಲದಲ್ಲಿ ಬಳಕೆಯಾಗುತ್ತಿದ್ದ ಅರ್ಥಕ್ಕಿಂತ ಭಿನ್ನವಾದ ಅರ್ಥಗಳನ್ನು ಪಡೆದುಕೊಳ್ಳುತ್ತದೆ. ಒಂದು ಕಾಲದಲ್ಲಿ ಪದಗಳ ಅರ್ಥ ಸೀಮಿತವಾಗಿದ್ದು ಅನಂತರ ಅವುಗಳ ಅರ್ಥ ವಿಕಾಸಗೊಂಡರೆ ಅದನ್ನು ಅರ್ಥವಿಸ್ತಾರ ಎಂದೂ, ಒಂದು ಕಾಲದಲ್ಲಿ ಶಬ್ದಗಳ ಅರ್ಥ ವಿಸ್ತಾರವಾಗಿದ್ದು, ಅನಂತರ ಅವುಗಳ ಅರ್ಥ ಸಂಕುಚಿತಗೊಂಡರೆ ಅದನ್ನು ಅರ್ಥಸಂಕೋಚ ಎಂದೂ ಕೆಲವು ಶಬ್ದಗಳು ಒಂದು ಕಾಲದಲ್ಲಿ ಕೀಳು ಅಥವಾ ಸಾಮಾನ್ಯ ಅರ್ಥದಲ್ಲಿ ಬಳಕೆಯಾಗುತ್ತಿದ್ದು, ಕಾಲಾನಂತರ ಅವು ಉತ್ತಮಾರ್ಥದಲ್ಲಿ ಬಳಕೆಗೊಂಡರೆ ಅದಕ್ಕೆ ಉತ್ತಮಾರ್ಥ ಎಂದೂ, ಒಂದು ಕಾಲದಲ್ಲಿ ಉತ್ತಮ ಅರ್ಥದಲ್ಲಿ ಬಳಕೆಯಾಗುತ್ತಿದ್ದ ಶಬ್ದಗಳು ತಮ್ಮ ಅರ್ಥವನ್ನು ಕಳೆದುಕೊಂಡು ಹೀನಾರ್ಥವನ್ನು ಪಡೆದುಕೊಂಡರೆ ಅದಕ್ಕೆ ಹೀನಾರ್ಥ ಎಂದೂ, ಮೇಲಿನ ಯಾವ ಬಗೆಯ ಅರ್ಥವ್ಯತ್ಯಾಸಕ್ಕೆ ಒಳಗಾಗದೇ ಬೇರೆಯದೇ ಅರ್ಥಗಳನ್ನು ಪಡೆದುಕೊಂಡರೆ ಅದಕ್ಕೆ ಅರ್ಥಾಂತರ ಎಂದು ಮುಖ್ಯವಾಗಿ

ಐದು ಬಗೆಗಳಲ್ಲಿ ಭಾಷಾವಿಜ್ಞಾನಿಗಳು ವಿಂಗಡಿಸಿಕೊಂಡಿದ್ದಾರೆ. ಈ ಪ್ರಕ್ರಿಯೆಯು ದೇಶಿ ಪದಕೋಶದಲ್ಲಿ ನಡೆದಂತೆ ಸ್ವೀಕರಣ ಪದಗಕೋಶದಲ್ಲು ನಡೆಯುತ್ತದೆ.

ಇಂತಹ ಪ್ರಕ್ರಿಯೆಗಳು ಕನ್ನಡಕ್ಕೆ ಸ್ವೀಕರಣವಾಗಿ ಬಂದ ಅನೇಕ ಪದಗಳಲ್ಲು ಕಂಡುಬಂದಿವೆ. ಈ ಅಧ್ಯಯನ ಉದ್ದೇಶವು ಪದಗಳ ಅರ್ಥ, ಮತ್ತು ಬಳಕೆಯ ಸಂದರ್ಭ ನೋಡದೇ ಕೇವಲ ರಚನೆಗೆ ಮಾತ್ರ ಸೀಮಿತ ಗೊಳಿಸುವುದಾಗಿದ್ದರೂ, ಕನ್ನಡದಲ್ಲಿ ಹೊಸ ಪದಗಳ ರಚನೆಗೆ ಹೇಗೆ ಸ್ವೀಕರಣ ಪದಗಳ ಅರ್ಥ ಪೂರಕವಾದ ಅವಕಾಶ ಒದಗಿಸಿವೆ ಎನ್ನುವುದನ್ನು ನೋಡಲು ಇಲ್ಲಿ ಸ್ಥೂಲವಾಗಿ ಕೆಲವು ಉದಾಹರಣೆಗಳನ್ನು ಕೊಡಲಾಗಿದೆ.

### ೫.೪.೧. ಅರ್ಥವಿಸ್ತಾರ

ಅರಬ್ಬಿಯಿಂದ ಸ್ವೀಕೃತವಾಗಿರುವ ಅಸಲು (ಅಸ್ಸಲ) ಮೂಲದಲ್ಲಿ ಮೂಲವಾದ, ಮೊದಲಿನ ಎಂಬ ಸೀಮಿತ ಅರ್ಥದಲ್ಲಿ ಬಳಕೆಯಾಗುತ್ತಿತ್ತು. ಇದು ಕನ್ನಡದಲ್ಲಿ ಈ ಅರ್ಥದ ಜೊತೆಗೆ ಅಸಲು ತುಪ್ಪ, ಅಸಲು ಹಣ ಎಂಬಲ್ಲಿ ಅಪ್ಪಟವಾದ; ಮೂಲಧನ, ಬಂಡವಾಳ ಎಂಬರ್ಥಗಳನ್ನು ಪಡೆದುಕೊಂಡರೆ ಖಬರು (ಖಬರ) ಎಂಬ ಅರಬ್ಬಿ ಪದ ಮೂಲದಲ್ಲಿ ಸುದ್ದಿ, ಸಮಾಚಾರ ಎಂಬರ್ಥಗಳನ್ನು ಹೊಂದಿದ್ದು, ಕನ್ನಡದಲ್ಲಿ ಎಚ್ಚರ, ಅರಿವು, ಪ್ರಜ್ಞೆ ಎಂಬರ್ಥಗಳಲ್ಲೂ ಬಳಕೆಯಾಗುತ್ತಿದೆ. ಕಾಗದ (ಅರ ಕಾಘಜ) ಬರೆಯಲು ಬಳಸುವ ಹಾಳೆ ಪೇಪರ ಅರ್ಥವನ್ನು ಹೊಂದಿತ್ತು. ಕನ್ನಡದಲ್ಲಿ ಈ ಅರ್ಥದ ಜೊತೆಗೆ ಕಾಗದಪತ್ರ ಎಂಬಲ್ಲಿ ದಾಖಲೆಗಳು, ಕಡತಗಳು ಎಂಬರ್ಥವನ್ನೂ ಅಂಚೆ ವರ್ತಮಾನ (ಪೋಸ್ಟ) ಎಂಬರ್ಥವನ್ನೂ ಪಡೆದುಕೊಂಡು ಬಳಕೆಯಾಗುತ್ತಿವೆ. ಇಂಗ್ಲಿಶಿನಿಂದ ಸ್ವೀಕೃತವಾದ ರೈಲು, ರೈಲ ಪದದ ಮೂಲ ಅರ್ಥ ಮರದ ಅಥವಾ ಕಬ್ಬಿನದ ಕಂಬಿಸಾಲು, ಹಳಿ ಎಂದು ಆದರೆ ಅದು ಕನ್ನಡದಲ್ಲಿ ರೈಲುಗಾಡಿಗೇ ಅನ್ವಯವಾಗುತ್ತಿದೆ. ರಿಕ್ಷಾ ಎಂಬುದು ಜನರಿಕ್ಷಾ ಪದದ ಸಂಕ್ಷಿಪ್ತ ರೂಪ ಆಳುಗಳು ಎಳೆಯುವ, ತಲೆ ಮುಚ್ಚು ಇರುವ ಹಗುರಾದ ಎರಡು ಚಕ್ರದ ಬಂಡಿ ಎಂಬುದು ಅದರರ್ಥ ಆದರೆ ಇಂದು ರಿಕ್ಷಾ ಸ್ವಯಂಚಾಲಿತ ಮೂರು ಚಕ್ರದ ಸಾರ್ವಜನಿಕ ಬಾಡಿಗೆ ವಾಹನ ಎಂಬರ್ಥದಲ್ಲೇ ಬಳಕೆ ಯಾಗುತ್ತದೆ. ಇದಕ್ಕೆ ಆಟೋ ರಿಕ್ಷಾ, ಆಟೋ ಎಂದೂ ಬಳಸುವುದುಂಟು. ಪಿಕ್ಚರ್ ಎಂಬುದು ಇಂಗ್ಲಿಶಿನಲ್ಲಿ ಕೂದಲು ಕುಂಚದಿಂದ ಬರೆದ ಚಿತ್ರಕ್ಕೆ ಮಾತ್ರ ಅನ್ವಯವಾಗುತ್ತಿತ್ತು. ಈಗ ಎಲ್ಲ ಬಗೆಯ ಚಿತ್ರಗಳಿಗೂ ಅನ್ವಯವಾಗುತ್ತಿದೆ. ಹಾಗೆಯೇ ಹಾಲಿಡೆ ಹಿಂದೆ ಹಬ್ಬದ ದಿನ ಪವಿತ್ರವಾದ ದಿನ ಎಂಬರ್ಥ ಹೊಂದಿದ್ದು, ಈಗ ಒಟ್ಟಾರೆ ರಜಾ ದಿನ, ಬಿಡುವಿನ ದಿನ ಎಂಬರ್ಥದಲ್ಲಿ ಬಳಕೆಯಾಗುತ್ತಿದೆ. ಪಾರಸಿಯ ಖಾನೆ ಎಂಬ ಪದ ಮೂಲದಲ್ಲಿ ಮನೆ ಎಂಬರ್ಥವನ್ನು ಮಾತ್ರ ಹೊಂದಿತ್ತು. ಕನ್ನಡದಲ್ಲಿ ಈ ಅರ್ಥದ ಜೊತೆಗೆ ಸೆಳೆಖಾನೆ ಕಪಾಟಿನ ಸಣ್ಣಗೂಡು ಎಂಬರ್ಥಗಳನ್ನೂ

ಹೊಂದಿದೆ. ದೋಸ್ತಿ ಎಂದರೆ ಪಾರಸಿಯಲ್ಲಿ ಸ್ನೇಹ ಎಂದರ್ಥ ಕನ್ನಡದಲ್ಲಿ ಇದು ಸ್ನೇಹದ ಜೊತೆಗೆ ಸ್ನೇಹಿತ ಎಂಬರ್ಥವನ್ನೂ ಪಡೆದುಕೊಂಡಿದೆ. ಹಾಗೆಯೇ ಶಾಯಿಯ ಮೂಲಾರ್ಥ. ಬರೆಯಲು ಬಳಸುವ ಕಪ್ಪುಮಸಿ ಎಂದು. ಕನ್ನಡದಲ್ಲಿ ಬರೆಯಲು ಬಳಸುವ ಎಲ್ಲ ಬಗೆಯ ಮಸಿಗಳಿಗೂ ಅನ್ವಯವಾಗುತ್ತದೆ. ಅರಬ್ಬಿಯ ವಜನ್ ಕನ್ನಡದಲ್ಲಿ ವಜನ್ ಎಂದರೆ ತೂಕ, ಭಾರ, ಹೊರೆ ಎಂಬರ್ಥ ಜೊತೆಗೆ ಪ್ರಭಾವ ಎಂಬರ್ಥದಲ್ಲೂ ಬಳಕೆಯಾಗುತ್ತದೆ.

**೫.೪.೨. ಅರ್ಥ ಸಂಕೋಚ**

ಉರ್ದು, ಅರಬ್ಬಿ, ಪಾರಸಿ, ಇಂಗ್ಲಿಶನಿಂದ ಸ್ವೀಕರಿಸಿಕೊಂಡ ಅನೇಕ ಪದಗಳು ಕನ್ನಡದಲ್ಲಿ ಅರ್ಥಸಂಕೋಚ ಗೊಂಡಿರುವುದನ್ನು ಗಮನಿಸಬಹುದು. ಆಳು, ಸೇವಕ ಅರ್ಥದ ಅರಬ್ಬಿಯ **ಕದೀಮ** ಪದ ಕನ್ನಡದಲ್ಲಿ ಮೋಸಗಾರ, ಕಳ್ಳ ಎಂದಾಗಿದೆ. ನ್ಯಾಯಾಧೀಶ ಅರ್ಥದ **ಕಾಜಿ** (ಅರ) ಪದ ಕನ್ನಡದಲ್ಲಿ ಮುಸ್ಲಿಮರ ನ್ಯಾಯಾಧೀಶ ಎಂಬರ್ಥದಲ್ಲಿ ಮಾತ್ರ ಬಳಕೆಯಾಗುತ್ತಿದೆ. ಅರಬ್ಬಿಯ **ಮಸೂದೆ** ಎಂಬ ಪದ ಬರೆಹವುಳ್ಳ ಪ್ರತಿ ಎಂಬರ್ಥವುಳ್ಳದ್ದು ಕನ್ನಡದಲ್ಲಿ **ಕರಡುಪ್ರತಿ** ಎಂಬರ್ಥವುಳ್ಳದ್ದು. ಕನ್ನಡದಲ್ಲಿ ಸಣ್ಣ ಮಕ್ಕಳಗೆ ತೊಡಿಸುವ ವಿಶಿಷ್ಟ ಬಗೆಯ ಟೋಪಿ ಎಂಬರ್ಥದಲ್ಲಿ ಬಳಕೆಯಗುತ್ತಿದೆ. ಮಣ್ಣಿನ ಪಾತ್ರೆ ಅರ್ಥದ **ಕೂಜ** (ಹೂಜ, ಹೌಜ್) ಶಬ್ದ ಕನ್ನಡದಲ್ಲಿ ವಿಶಿಷ್ಟ ಆಕಾರದ ಮಣ್ಣಿನ ಪಾತ್ರೆ ಎಂಬ ಸಂಕುಚಿತ ಅರ್ಥವನ್ನು ಪಡೆದುಕೊಂಡಿದೆ. **ಬಸ್ತು** ಎಂದರೆ ಪಾರಸಿಯಲ್ಲಿ ಕಟ್ಟು (ನಾಮವಾಚಕ) ಎಂದರ್ಥ. ಕನ್ನಡದಲ್ಲಿ ಅದು ಸರಕು, ಕಾಗದಪತ್ರಗಳ ಕಟ್ಟು ಎಂಬ ಸಂಕುಚಿತ ಅರ್ಥದಲ್ಲಿ ಬಳಕೆಯಾಗಿದೆ. ಪಾರಸಿಯ **ರೋಜಗಾರ್** ಎಂದರೆ ಸಮಯ ಕಾಲ ಎಂದರ್ಥ. ಅದು ಹಿಂದಿಯಲ್ಲಿ ಉದ್ಯೋಗ ಎಂಬ ಜರ್ಥವನ್ನು ಪಡೆದುಕೊಂಡು ಆ ಹಿಂದಿಯ ಅರ್ಥವೇ ಕನ್ನಡದಲ್ಲಿ ಬಳಕೆಯಲ್ಲಿದೆ. (ರೋಜಗಾರ್ ಯೋಜನೆ, ರೋಜಗಾರ್ ಸಮಾಚಾರ). ಕನ್ನಡದಲ್ಲಿ ಬಳಕೆಯಾಗುತ್ತಿರುವ **ಕಂತ್ರಿ** ಎಂಬುದು ಇಂಗ್ಲಿಶಿನ ಕಂಟ್ರಿ ಎಂಬ ಶಬ್ದದ ಕನ್ನಡರೂಪ ಇದಕ್ಕೆ ಗ್ರಾಮೀಣ, ದೇಸಿ ಎಂಬರ್ಥ ಇಂಗ್ಲಿಶಿನಲ್ಲಿದೆ. ಕನ್ನಡದಲ್ಲಿ ಈ ಅರ್ಥದ ಜೊತೆಗೆ ಒರಟು, ನಯರಹಿತ, ಅಸಂಸ್ಕೃತ, ತುಚ್ಚ ಎಂಬರ್ಥಗಳು ಸೇರಿಕೊಂಡಿವೆ. **ಕಂತ್ರಿಜನ, ಕಂತ್ರಿನಾಯಿ, ಕಂತ್ರಿಪದಾರ್ಥ, ಕಂತ್ರಿಬುದ್ಧಿ** ಇತ್ಯಾದಿ.

**೫.೪.೩. ಅರ್ಥಾಂತರ**

ಅರ್ಥಾಂತರಕ್ಕೆ ಹಲವು ಉದಾಹರಣೆಗಳು ದೊರೆಯುತ್ತವೆ. ಅರಬ್ಬಿಯ **ಅದಲು** ಎಂಬುದಕ್ಕೆ ಕನ್ನಡದಲ್ಲಿ ವ್ಯತ್ಯಾಸ ಬದಲಾವಣೆ (ಅದಲುಬದಲು) ಎಂಬರ್ಥ ಬಂದಿದೆ. ಇದರ ಮೂಲಾರ್ಥ ನ್ಯಾಯ (ಅದಾಲತ) ಎಂದು. **ಕಸಾಲೆ** (ಅರ) ಎಂದರೆ ಆಲಸ್ಯ ಎಂದು ಮೂಲಾರ್ಥ ಕನ್ನಡದಲ್ಲಿ ರೋಗ್ಯ, ವ್ಯಾಧಿ ಅರ್ಥ ಪಡೆದಿದೆ (ಕಾಯಿಲೆ ಕಸಾಲೆ). **ಕಸಬು** ಎಂಬುದಕ್ಕೆ ಅರಬ್ಬಿ ಮೂಲದಲ್ಲಿ ಗಳಿಕೆ, ಸಂಪಾದನೆ ಎಂದರ್ಥ. ಕನ್ನಡದಲ್ಲಿ ಉದ್ಯೋಗ, ಹುದ್ದೆ ಅರ್ಥ ಹೊಂದಿದೆ. **ಚಮಾ**

ಅಂದರೆ ಸೇರಿಸುವುದು ಎಂದು ಕನ್ನಡದಲ್ಲಿ ಸಲ್ಲಿಕೆ ವರಮಾನ ಎಂಬರ್ಥಗಳನ್ನೂ ಹೊಂದಿದೆ. **ತಮಾಷಾ** ಎಂದರೆ ಪಾರಸಿಯಲ್ಲಿ ಅತ್ತಿತ್ತ ಚಲಿಸುವುದು ಎಂದರ್ಥ. ಕನ್ನಡದಲ್ಲಿ ಹಾಸ್ಯ, ನಟನೆ ಎಂಬರ್ಥಗಳನ್ನು ಪಡೆದುಕೊಂಡಿದೆ. ಈ ಅರ್ಥಗಳು ಹಿಂದಿಯಿಂದ ಬಂದಂಥವು. **ವಕೀಲ** ಎಂದರೆ ಪಾರಸಿಯಲ್ಲಿ ದಲ್ಲಾಳಿ ಏಜೆಂಟ್ ಎಂದರ್ಥ. ಅದೇ ಹಿಂದಿಯಲ್ಲಿ ನ್ಯಾಯಾಲಯಗಳಲ್ಲಿ ಆರೋಪಿ ಪರ ಅಥವಾ ವಿರುದ್ಧ ವಾದಿಸುವವರು ಎಂಬ ಅರ್ಥವನ್ನು ಪಡೆದಿದೆ. ಕನ್ನಡದಲ್ಲೂ ಈ ಅರ್ಥದಲ್ಲೇ ಬಳಕೆಯಲ್ಲಿದೆ. ಪಾರಸಿಯಲ್ಲಿ **ಖೂನಿ** ಎಂದರೆ ಕೊಲೆಗಾರ ಎಂದರ್ಥ. ಕನ್ನಡದಲ್ಲಿ ಇದು ಕೊಲೆ ಎಂಬರ್ಥದಲ್ಲಿ ಬಳಕೆಯಾಗುತ್ತದೆ, **ಚಾಳಿ** ಎಂದರೆ ವರ್ತನೆ ನಡವಳಿಕೆ ಎಂದರ್ಥ. ಕನ್ನಡದಲ್ಲಿ ಹವ್ಯಾಸ ಕೆಟ್ಟ ಹವ್ಯಾಸ ಎಂಬರ್ಥದಲ್ಲಿ ಬಳಕೆಯಾಗಿದೆ. **ಆವಾನ** ಎಂದರೆ ಪಾರಸಿಯಲ್ಲಿ ಯುವಕ ತರುಣ ಎಂದರ್ಥ. ಕನ್ನಡದಲ್ಲಿ ಇದು ಸೇವಕ, ಎಂಬರ್ಥವನ್ನು ಪಡೆದುಕೊಂಡಿದೆ. ಇಂಗ್ಲಿಶಿನ **Bore** ಪದಕ್ಕೆ ರಂಧ್ರವನ್ನು ಕೊರಿ ಎಂದರ್ಥವಿದ್ದು, ಇದು ಕನ್ನಡದಲ್ಲಿ ಬೇಸರ ಎಂಬರ್ಥದಲ್ಲಿ ಬಳಕೆಯಾಗುತ್ತಿದೆ. ಇಂಗ್ಲಿಶ್‌ನಲ್ಲಿ **Bulb** ಎಂದರೆ ಈರುಳ್ಳಿ, ಈರುಳ್ಳಿಯಾಕಾರದ ಗೆಡ್ಡೆ ಎಂದರ್ಥ ಇದು ಕನ್ನಡದಲ್ಲಿ ವಿದ್ಯುದ್ದೀಪದ ಬುರುಡೆ ಎಂದು ಅರ್ಥಾಂತರ ಹೊಂದಿದೆ. ಕನ್ನಡದಲ್ಲಿ **Bulb** ಎಂದರೆ ವಿದ್ಯುದ್ದೀಪದ ಬುರುಡೆ ಎಂದರ್ಥವೇ ಹೊರತು ಮೊದಲಿನ ಅರ್ಥವಲ್ಲ. ಪಾರಸಿಯಲ್ಲಿ **ಮಾಮೂಲೀ** ಎಂದರೆ ಪ್ರಾಯೋಗಿಕ, ಸಾಮಾನ್ಯ ಎಂದರ್ಥ. ಕನ್ನಡದಲ್ಲಿ ಲಂಚ ಎಂಬರ್ಥವನ್ನೂ ಪಡೆದುಕೊಂಡಿದೆ. (ಅವನಿಗೆ ಮಾಮೂಲಿ ಕೊಡೋದು ಕೊಟ್ಟು ಬಿಡು ನಿನ್ ಕೆಲಸ ಬೇಗ ಆಗುತ್ತೆ – ರೂಢಿ) ಅಂತೆಯೇ ಇಂಗ್ಲಿಶಿನ **ಗ್ಯಾಸ್** ಕನ್ನಡದಲ್ಲಿ ಅನಿಲ ಅರ್ಥದ ಜೊತೆಗೆ ಬುರುಡೆ, ಮಾತು ಸುಳ್ಳು, ಎಂಬರ್ಥಗಳನ್ನೂ ಪಡೆದುಕೊಳ್ಳುತ್ತದೆ. ರೈಲೆ ಬಿಡು ರೀಲ ಸುತ್ತು ಇವೂ ಕೂಡ ಮೇಲಿನ ಅರ್ಥದಲ್ಲೇ ಬಳಕೆಯಾಗುವುದನ್ನು ಗಮನಿಸಬಹುದು. ಹಾಗೆಯೇ ಪ್ಲೇಟ್ ತಿರುವಿಹಾಕು ಎಂಬ ಪ್ರಯೋಗ ಮಾತನ್ನು ಬದಲಾಯಿಸು ಎಂಬರ್ಥವನ್ನು ಕೊಡುತ್ತದೆ. ಜೆರಾಕ್ಸ್ ಕಾಪಿ ಎಂಬುದು ಪಡಿಯಚ್ಚು ಎಂಬರ್ಥದಲ್ಲೂ ಟಿಕೆಟ್ ತೆಗೆದುಕೊಂಡ ಎನ್ನುವಾಗ ಮರಣಹೊಂದಿದ ಎಂಬರ್ಥವೂ ಬರುತ್ತದೆ.

ಈ ಅಧ್ಯಾಯದಲ್ಲಿ ಚಾರಿತ್ರಿಕವಾಗಿ ಬೆಳವಣಿಗೆಯಾದ ಕನ್ನಡ ಪದಕೋಶದ ರಚನೆಯನ್ನು ವಿವರಿಸಲಾಗಿದೆ. ಇಲ್ಲಿ ಮುಖ್ಯವಾಗಿ ಕನ್ನಡದಲ್ಲಿ ಹೊಸಪದಗಳನ್ನು ರಚಿಸುವಲ್ಲಿ ಅನುಸರಿಸಿದ ಮಾದರಿಗಳನ್ನು, ಹೊಸ ಪದರಚನೆಯಲ್ಲಿ ಬಳಕೆಯಾದ ಪದ ಮತ್ತು ಪ್ರತ್ಯಯಗಳನ್ನು, ಪದ ರಚನೆಯಾಗುವಲ್ಲಿ ಬಳಕೆಯಾದ ತಂತ್ರ, ಸ್ವೀಕರಣಪದವಾದರೆ ಅದು ಸ್ವೀಕರಿಸಿದ ಮಾದರಿಗಳು ಇತ್ಯಾದಿ ವಿಷಯಗಳನ್ನು ಅವಲೋಕಿಸಲಾಗಿದೆ.



# ಅಧ್ಯಾಯ : ಆರು

# ಸಮಾರೋಪ

'ಕನ್ನಡ ಪದಕೋಶದ ಬೆಳವಣಿಗೆ : ಚಾರಿತ್ರಿಕ ಅಧ್ಯಯನ' ಎಂಬ ಶೀರ್ಷಿಕೆಯಡಿಯಲ್ಲಿ ಚಾರಿತ್ರಿಕ ಭಾಷಾ ಅಧ್ಯಯನ ವಿಧಾನದ ಮುಖಾಂತರ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನ ಮುಖ್ಯವಾಗಿ ಕನ್ನಡ ಪದಕೋಶವು ಚಾರಿತ್ರಿಕ ಹೇಗೆ ಬೆಳವಣಿಗೆ ಹೊಂದಿದೆ ಎನ್ನುವುದನ್ನು ಪರಿಶೀಲಿಸುವ ದೃಷ್ಟಿಕೋನ ಹೊಂದಿತ್ತು. ಈ ಅಧ್ಯಯನವು ಮುಖ್ಯವಾಗಿ

೧) ಕನ್ನಡ ಪದಕೋಶದ ಬೆಳವಣಿಗೆಗೆ ಕಾರಣಗಳನ್ನು ಗುರುತಿಸುವುದು.

೨) ವಲಯವಾರು ಕನ್ನಡ ಪದಕೋಶದ ಬೆಳವಣಿಗೆಯನ್ನು ಗುರುತಿಸುವುದು.

೩) ಭಾಷಾವಾರು ಕನ್ನಡ ಪದಕೋಶದ ಬೆಳವಣಿಗೆಯನ್ನು ಗುರುತಿಸುವುದು.

೪) ಕನ್ನಡ ಪದಕೋಶಕ್ಕೆ ಹೊಸದಾಗಿ ಸೇರ್ಪಡೆಯಾದ ಪದಗಳ ರಾಚನಿಕ ಸ್ವರೂಪ ಪರಿಶೀಲಿಸುವುದು

೫) ಕನ್ನಡ ಮೂಲಪದಕೋಶವು ಹೊಸಪದಗಳ ರಚನೆಯಲ್ಲಿ ನಿರ್ವಹಿಸಿದ ಪಾತ್ರವನ್ನು ಪರಿಶೀಲಿಸುವುದು. ಈ ಐದು ಅಂಶಗಳ ಹಿನ್ನೆಲೆಯ ಅಧ್ಯಯನ ಕೈಗೊಳ್ಳಲಾಗಿದೆ.

ಈ ಅಧ್ಯಯನಕ್ಕೆ ಪೂರಕವಾಗಿ ಈ ಹಿಂದೆ ಕನ್ನಡ ಪದ ಅಥವಾ ಪದಕೋಶದ ಸ್ವರೂಪದ ಬಗ್ಗೆ ನಡೆದ ಅಧ್ಯಯನಗಳನ್ನು ಮುಖ್ಯವಾಗಿ ಗಮನದಲ್ಲಿರಿಸಿಕೊಂಡು ಅಧ್ಯಯನ ವಿಧಾನಗಳನ್ನು ರೂಪಿಸಿಕೊಳ್ಳಲಾಗಿದೆ. ಈವರೆಗಿನ ಅಧ್ಯಯನಗಳು ಮುಖ್ಯವಾಗಿ ಕನ್ನಡವನ್ನು ವಿವಿಧ ಕಾಲಘಟ್ಟಗಳಲ್ಲಿ ಆದ ಭಾಷಿಕ ಬದಲಾವಣೆಗಳನ್ನು ಇಟ್ಟುಕೊಂಡು ಪದಗಳಲ್ಲಿ ಆದ ಧ್ವನಿಬದಲಾವಣೆ, ಕನ್ನಡ ಮತ್ತು ಸ್ವೀಕರಣ ಪದಗಳ ರಚನೆಯನ್ನು ವಿವರಿಸುವಂತವುಗಳಾಗಿವೆ. ಆದರೆ ಕನ್ನಡ ಪದಕೋಶದ ಬೆಳವಣಿಗೆಯನ್ನು ವಿವರಿಸುವ ಹೆಚ್ಚು ಅಧ್ಯಯನಗಳು ಕನ್ನಡದಲ್ಲಿಲ್ಲ. ಈ ಸಮಸ್ಯೆಯನ್ನು ಗಮನದಲ್ಲಿಟ್ಟುಕೊಂಡು ಕೈಗೊಂಡ ಈ ಅಧ್ಯಯನವು ಇದಕ್ಕಾಗಿ ಕೆಲವು ಉದ್ದೇಶಗಳನ್ನು ರೂಪಿಸಿಕೊಳ್ಳಲಾಗಿ, ಈ ಉದ್ದೇಶಗಳಿಗೆ ಅನುಗುಣವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

ಆರಂಭ ಕಾಲದಿಂದ ಇಲ್ಲಿಯವರೆಗೆ ಕನ್ನಡ ಪದಕೋಶ ಯಾವ ಯಾವ ಮಾದರಿಯಲ್ಲಿ ಬೆಳವಣಿಗೆ ಹೊಂದಿದೆ, ಅದರ ಸ್ವರೂಪ ಎಂತದ್ದು ಎನ್ನುವುದನ್ನು ಪರಿಶೀಲಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿತ್ತು. ಈ ಹಿಂದಿನ ಅಧ್ಯಯನಗಳು ಕನ್ನಡ ಭಾಷೆಯ ಬೆಳವಣಿಗೆಯನ್ನು ಧ್ವನಿ ಬದಲಾವಣೆಯನ್ನು ಮುಖ್ಯವಾಗಿಟ್ಟುಕೊಂಡು ನಡೆಸಿದ ಅಧ್ಯಯನಗಳಾಗಿವೆ. ಇನ್ನು ಕೆಲವು ಪದಗಳು ಚಾರಿತ್ರಿಕವಾಗಿ ಹೇಗೆಲ್ಲ ಬದಲಾವಣೆಗೆ ಒಳಗಾಗಿದೆ ಎನ್ನವುದನ್ನು ಮುಖ್ಯವಾಗಿಟ್ಟುಕೊಂಡು ನಡೆಸಿದ ಅಧ್ಯಯನಗಳಾಗಿವೆ. ಆದರೆ ಪದಕೋಶಕ್ಕೆ ಸಂಬಂಧಿಸಿದಂತೆ ಸಮಗ್ರ ಅಧ್ಯಯನಗಳು ಈ ವರೆಗೂ ಬಂದಿರಲಿಲ್ಲ ಈ ಅಧ್ಯಯನದಲ್ಲಿ ಕನ್ನಡ ಪದಕೋಶವು ಕ್ರಿ.ಪೂ. ಕಾಲದಿಂದ ಈ ವರೆಗೂ ದಾಖಲಾಗಿರುವ ಪದಗಳನ್ನು ವಿವಿಧ ವಲಯಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಕನ್ನಡ ಪದಕೋಶದ ಬೆಳವಣಿಗೆ ಹೊಂದಲು ಕಾರಣವಾದ ಅಂಶಗಳನ್ನು ವಿವಿಧ ಹಿನ್ನೆಲೆಯಲ್ಲಿ ಪರಿಶೀಲಿಸುವುದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿತ್ತು. ಕನ್ನಡ ಪದಕೋಶವು ಬೆಳವಣಿಗೆ ಹೊಂದಲು ಅನೇಕ ಕಾರಣಗಳಿವೆ. ರಾಜಕೀಯ ಕಾರಣವು ಕನ್ನಡ ಪದಕೋಶ ಬೆಳವಣಿಗೆಗೆ ಹೆಚ್ಚು ಕಾರಣವಾಗಿದೆ. ಸಾಹಿತ್ಯಿಕ ಕಾರಣದಿಂದಲೂ ಅನ್ಯಭಾಷೆಗಳಿಂದ ಸ್ವೀಕರಿಸಿದ ಪದಗಳು ಕನ್ನಡ ಪದಕೋಶ ಸೇರಲು ಕಾರಣವಾಗಿದೆ. ಭಾರತೀಯ ಸಾಂಸ್ಕೃತಿಕ ವಲಯದಲ್ಲಿ ಆದ ಬದಲಾವಣೆಗಳು ಅನೇಕ ಧರ್ಮಗಳು ಹುಟ್ಟಿಗೆ ಕಾರಣವಾಯಿತು. ಅಲ್ಲದೆ, ಆಡಳಿತ ಕಾರಣದಿಂದ ಬಂದ ಇತರೇ ಧರ್ಮಗಳು ಆ ಧಾರ್ಮಿಕ ಆಚರಣೆಗೆ ಸಂಬಂಧಿಸಿದಂತೆ ಅನೇಕ ಪದಗಳು ಕನ್ನಡ ಪದಕೋಶ ಸೇರಲು ಕಾರಣವಾಗಿದೆ. ಆಧುನಿಕತೆಯ ಕಾರಣದಿಂದ ಅನೇಕ ಹೊಸ ವಲಯಗಳು ಸೃಷ್ಟಿಯಾಗಿ ಹೊಸ ಹೊಸ ವಸ್ತು, ವಿಚಾರಗಳು ಜನಬಳಕೆಗೆ ಬಂದು ಅದಕ್ಕೆ ಸಂಬಂಧಿಸಿದಂತ ಪದಗಳು ಕನ್ನಡ ಪದಕೋಶ ಸೇರಲು ಕಾರಣವಾಗಿದೆ. ಕರ್ನಾಟಕವು ಅನೇಕ ರಾಜ್ಯಗಳಿಂದ ಗಡಿ ಹಂಚಿಕೊಂಡಿದೆ. ಹೀಗಾಗಿ ಅನೇಕ ಭಾಷೆಗಳ ಸಂಪರ್ಕಕ್ಕೆ ಒಳಗಾಗಿ ಆ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿಕೊಂಡಿರುವುದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಕನ್ನಡವು ಪ್ರಾರಂಭ ಕಾಲದಿಂದಲೂ ಸ್ವೀಕರಣದಿಂದ ಪದಕೋಶದ ಬೆಳವಣಿಗೆ ಹೊಂದಿದೆ. ಈ ಅಧ್ಯಯನದಲ್ಲಿ ಕನ್ನಡಕ್ಕೆ ಸ್ವೀಕರಿಸಲಾದ ಪ್ರಾಕೃತ, ಸಂಸ್ಕೃತ, ಪಾರಸಿ, ಅರಬ್ಬಿ, ಉರ್ದು, ಮರಾಠಿ ಮತ್ತು ಇಂಗ್ಲಿಶ್ ಭಾಷೆಗಳ ಪದಗಳನ್ನು ಭಾಷಾ ಬಳಕೆಯ ಪ್ರತಿ ವಲಯಗಳಲ್ಲು ಗುರುತಿಸಲಾಗಿದೆ. ಕೆಲವು ಪದಗಳು ನೇರವಾಗಿ ಕನ್ನಡ ಈ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದರಿಂದ ಬಂದರೇ, ಇನ್ನು ಕೆಲವು ಉರ್ದು ಮತ್ತು ಮರಾಠಿ ಪದಗಳ ಮೂಲಕ ಕನ್ನಡ ಪದಕೋಶದ ಭಾಗವಾಗಿವೆ. ಇಂಗ್ಲಿಶಿನಿಂದ ಸ್ವೀಕರಿಸಿದ ಪದಗಳಿಗೆ ಅನೇಕ ಕನ್ನಡ ಹೊಸಪದಗಳು ರಚನೆಗೆ ಕಾರಣವಾಗಿವೆ.

ಈವರೆಗಿನ ಅಧ್ಯಯನಗಳು ಕನ್ನಡದ ರಚನೆಯನ್ನು ವಿವಿಧ ಆಧಾರವಾಗಿಟ್ಟುಕೊಂಡು ವಿವರಿಸಿವೆ. ಕೆಲವು ಅಧ್ಯಯನಗಳು ಲೇಖನಗಳ ರೂಪದಲ್ಲಿ ಆಧುನಿಕ ಕನ್ನಡದ ಸ್ವರೂಪ ವಿವರಿಸುವ

ಕೆಲಸ ಮಾಡಿವೆ. ಆದರೆ ಈ ಅಧ್ಯಯನಗಳು ಪದಕೋಶದ ಬೆಳವಣಿಗೆಯ ದೃಷ್ಟಿಯಿಂದ ಕನ್ನಡ ಬೆಳವಣಿಗೆಯನ್ನು ಗಮನದಲ್ಲಿರಿಸಿದ್ದು ಕಡಿಮೆಯೆ, ಹೀಗಾಗಿ ಈ ಕಾಲಘಟ್ಟಗಳಲ್ಲಿ ಕನ್ನಡ ಪದಕೋಶದ ಸ್ವರೂಪ ಅರಿಯುವುದು ಮತ್ತೊಂದು ಉದ್ದೇಶವಾಗಿತ್ತು. ಕನ್ನಡವನ್ನು ಅನೇಕ ಹಿನ್ನೆಲೆಯಿಟ್ಟುಕೊಂಡು ವಿವಿಧ ಮಾದರಿಯಲ್ಲಿ ವಿಂಗಡಿಸಲಾಗಿದೆ. ಆದರೆ ಅವುಗಳಲ್ಲಿ ಹೆಚ್ಚಿನವು ಸಾಹಿತ್ಯಿಕ ಹಿನ್ನೆಲೆಯಲ್ಲಿ ವಿಂಗಡಿಸಲಾದವುಗಳಾಗಿವೆ. ಭಾಷಿಕ ಹಿನ್ನೆಲೆಯಿಂದ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಆಧುನಿಕ ಕನ್ನಡವೆಂದು ವಿಂಗಡಿಸಲಾಗಿದೆ. ಕನ್ನಡವು ಪ್ರಾರಂಭದಲ್ಲಿ ಪ್ರಾಕೃತ ಮತ್ತು ಸಂಸ್ಕೃತದಿಂದ ಪದಗಳನ್ನು ಸ್ವೀಕರಿಸಿಕೊಂಡರೆ, ಹನ್ನೆರಡನೆಯ ಶತಮಾನದ ನಂತರ ಆಡಳಿತ ಕಾರಣದಿಂದ ಪಾರಸಿ ಮತ್ತು ಅರಬ್ಬಿ ಪದಗಳು ಬಂದವು, ಈ ಕಾಲದಲ್ಲೇ ವ್ಯಾಪಾರ ಕಾರಣದಿಂದ ಬಂದ ಅನೇಕ ಭಾಷಿಕ ಸಮುದಾಯಗಳ ಪದಗಳು ಕನ್ನಡ ಪದಕೋಶದ ಭಾಗವಾಗಿವೆ. ಸುಮಾರು ಹದಿನಾರನೆಯ ಶತಮಾನದಲ್ಲಿ ಬಂದ ಬ್ರಿಟಿಶರ ಆಡಳಿತ ಮತ್ತು ಆಧುನಿಕತೆಯ ಪ್ರಭಾವದ ಕಾರಣದಿಂದ ಇಂಗ್ಲಿಶ್ ಭಾಷೆಯ ಪದಗಳು ಕನ್ನಡ ಸೇರಿಕೊಂಡಿವೆ. ಹೀಗಾಗಿ ಕನ್ನಡ ಪದಕೋಶವನ್ನು ಮುಖ್ಯವಾಗಿ ಪ್ರಾಕೃತ ಸಂಸ್ಕೃತ ಪ್ರಭಾವದ ಕಾಲ, ಪಾರಸಿ, ಅರಬ್ಬಿ, ಉರ್ದು, ಮರಾಠಿ ಪ್ರಾಭಾವದ ಕಾಲ ಮತ್ತು ಇಂಗ್ಲಿಶ್ ಪ್ರಭಾವದ ಕಾಲ ಎಂದು ಗ್ರಹಿಸಬಹುದು ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಆಧುನಿಕ ಕನ್ನಡವು ಪಾರಸಿ, ಅರಬ್ಬಿ, ಉರ್ದು, ಮರಾಠಿ ಮತ್ತು ಇಂಗ್ಲಿಶನಿಂದ ಹೇಗೆಲ್ಲ ಪ್ರಭಾವಕ್ಕೊಳಗಾಗಿದೆ. ಅದು ತನ್ನ ಪದಕೋಶದ ಬೆಳವಣಿಗೆಗಾಗಿ ಅನುಸರಿಸಿದ ತಂತ್ರವೇನು? ಇವುಗಳ ಕುರಿತು ಅರಿಯುವುದು ಮತ್ತೊಂದು ಉದ್ದೇಶವಾಗಿತ್ತು. ಮುಖ್ಯವಾಗಿ ಕನ್ನಡ ಪದಕೋಶದ ಬೆಳವಣಿಗೆಗೆ ಸ್ವೀಕರಣವು ಬಹುಮುಖ್ಯವಾದ ತಂತ್ರವಾಗಿದೆ. ಸಂಸ್ಕೃತದಿಂದ ನೇರವಾಗಿ ಮತ್ತು ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ(ತತ್ಸಮ–ತದ್ಭವ) ಸ್ವೀಕರಿಸಿಕೊಂಡಿದೆ. ಪಾರಸಿ, ಅರಬ್ಬಿ, ಉರ್ದು, ಮರಾಠಿ ಪದಗಳನ್ನು ನೇರವಾಗಿ ಸ್ವೀಕರಿಸಿಕೊಂಡಿದೆ. ಆದರೆ ಬಳಕೆಯ ನೆಲೆಯಲ್ಲಿ ಧ್ವನಿ ಬದಲಾವಣೆಗಳು ಕಂಡುಬಂದಿವೆ. ಇಂಗ್ಲಿಶನಿಂದ ಅನೇಕ ಬದಲಾವಣೆಗಳೊಂದಿಗೆ ಸ್ವೀಕರಿಸಿಕೊಂಡಿದೆ.

ಆಧುನಿಕ ಕನ್ನಡ ಪದಕೋಶದ ಪದ, ಪ್ರತ್ಯಯ, ಅರ್ಥಗಳಲ್ಲಿ ಅನೇಕ ಸ್ಥಿತ್ಯಂತರಗಳಾಗಿವೆ. ಈ ಕಾರಣದಿಂದ ಕನ್ನಡ ಪದಕೋಶದಲ್ಲಿ ಅನೇಕ ಹೊಸ ಪದ ರಚನೆಗೊಂಡಿರುವ ಸಾಧ್ಯತೆನ್ನು ಮತ್ತು ಆ ಪದಗಳ ರಚನೆಗಳನ್ನು ಅರಿಯುವುದು ಮತ್ತೊಂದು ಉದ್ದೇಶವಾಗಿತ್ತು. ಇದಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಅನೇಕ ಪದರಚನಾ ಮದರಿಗಳನ್ನು ಗುರುತಿಸಲಾಗಿದೆ. ಹೊಸ ಪದರಚನೆ ಮಾಡುವಾಗ ಕನ್ನಡ ಪದ ಮತ್ತು ಪ್ರತ್ಯಯಗಳನ್ನು ಬಳಸಿಕೊಂಡು ರಚಿಸಿದ ಹೊಸಪದಗಳ ರಚನೆ ಗುರುತಿಸಲಾಗಿದೆ. ಕನಡದಲ್ಲಿ ಹೊಸಪದ ರಚನೆಗೆ ಇರುವ ಅನೇಕ ಪ್ರತ್ಯಯಗಳನ್ನು ಸೇರಿಸಿ ಹೊಸಪದಗಳು ರಚಿಸಲಾಗಿದೆ. ಅನೇಕ ಸಂಸ್ಕೃತ ಪದಗಳಿಂದ ರಚನೆಗೊಂಡ ಪದಗಳನ್ನು ಗುರುತಿಸಲಾಗಿದೆ.

ಕನ್ನಡದಲ್ಲಿ ಪದಗಳನ್ನು ಅಥವಾ ಪ್ರತ್ಯಯಗಳನ್ನು ಪದಾದಿಯಲ್ಲಿ(ಪೂರ್ವ ಪ್ರತ್ಯಯವಾಗಿ) ಸೇರಿಸಿ ಪದರಚನಾ ನಿಯಮವಿಲ್ಲ. ಈ ಅಧ್ಯಯನದಲ್ಲಿ ಅಂತಹ ಸಾಧ್ಯಯಿಂದ ರಚನೆಗೊಂಡ ಪದಗಳನ್ನು ಗುರುತಿಸಲಾಗಿದೆ.

ಸ್ವೀಕರಿಸಿಕೊಂಡ ಹೊಸ ಪದಗಳಿಗೆ ಕನ್ನಡದಲ್ಲಿ ಪದಗಳನ್ನು ರಚಿಸುವಾಗ ಸ್ವೀಕೃತ ಪದವು ಮೂಲದಲ್ಲಿ ಅದರ ಅರ್ಥವನ್ನು ಗ್ರಹಿಸಿಕೊಂಡು ಕನ್ನಡದಲ್ಲಿ ಪದರಚನೆ ಮಾಡಲಾಗಿದೆ. ಇಲ್ಲಿ ಮುಖ್ಯವಾಗಿ ಎರಡು ಮಾದರಿಗಳನ್ನು ಅನುಸರಿಸಲಾಗಿದೆ. ಒಂದು ಪದಗಳು ಹೇಳುತ್ತಿರುವ ಕೆಲಸದ ಅಥವಾ ಘಟನೆಯನ್ನು ಆಧಾರವಾಗಿ ಇಟ್ಟುಕೊಂಡು ಹೊಸಪದ ರಚಿಸುವುದು(ಜಲಪಾತ, ಚುಚ್ಚುಮದ್ದು, ಬೆರಳಚ್ಚು, ಇತ್ಯಾದಿ). ಎರಡು, ಸ್ವೀಕೃತ ಪದಗಳು ಗುರುತಿಸುವ ವಸ್ತುವಿನ ಆಕಾರವನ್ನು ಆಧಾರವಾಗಿಟ್ಟುಕೊಂಡು(ಗುಂಡುಸೂಜಿ, ದುಂಡು ಮೇಜು, ಧ್ವನಿಸುರುಳಿ, ಇತ್ಯಾದಿ) ಪದರಚಿಸಿರುವುದನ್ನು ಗುರುತಿಸಲಾಗಿದೆ.

ಸಂಸ್ಕೃತ ಮತ್ತು ಇಂಗ್ಲಿಶ್ ಪದಗಳನ್ನು ಹೊರತುಪಡಿಸಿ ಉಳಿದ ಯಾವುದೇ ಭಾಷೆಯಿಂದ ಬಂದ ಪದಗಳನ್ನು ಕನ್ನಡೀಕರಿಸಿ ಬಳಸದಿರುವುದನ್ನು ಗುರುತಿಸಲಾಗಿದೆ.

ಕನ್ನಡ ಭಾಷೆಯು ಅನೇಕ ಭಾಷೆಗಳ ಪ್ರಭಾವಕ್ಕೆ ಒಳಗಾಗಿದೆ. ಯಾವ ಯಾವ ಭಾಷೆಯ ಪದಗಳು ಯಾವ ಯಾವ ವಲಯದಲ್ಲಿ ಹೆಚ್ಚು ಸ್ವೀಕರಣಕ್ಕೆ ಒಳಗಾಗಿವೆ. ಕನ್ನಡವು ಮುಖ್ಯವಾಗಿ ಆಡಳಿತ ಕಾರಣದಿಂದ ಸಂಸ್ಕೃತ, ಪಾರಸಿ, ಅರೇಬಿಕ್ ಮತ್ತು ಇಂಗ್ಲಿಶ್ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿಕೊಂಡಿದೆ. ಸಾರಿಗೆ ಮತ್ತು ಸಂಪರ್ಕಕ್ಕೆ ಸಂಬಂಧಿಸಿದಂತೆ ಇಂಗ್ಲಿಶ್‌ನಿಂದ ಪದಗಳನ್ನು ಸ್ವೀಕರಿಸಿಕೊಂಡಿದೆ. ಸಂಸ್ಕೃತವು ಆಡಳಿತ ಮತ್ತು ಸಾಹಿತ್ಯಿಕ ಕಾರಣದಿಂದ ಹೆಚ್ಚು ಪದಗಳು ಸ್ವೀಕರಣವಾಗಿ ಬಂದಿವೆ. ಆಧುನಿಕತೆಯ ಪ್ರಭಾವದಿಂದ ಬಂದ ಹೊಸ ವಲಯಗಳಲ್ಲಿ ಇಂಗ್ಲಿಶ್ ಪದಗಳು ಹೆಚ್ಚಾಗಿ ಕಂಡುಬಂದಿವೆ. ತಂತ್ರಜ್ಞಾನ ಮತ್ತು ವೈದ್ಯಕೀಯ ವಲಯದಲ್ಲಿ ಹೆಚ್ಚು ಇಂಗ್ಲಿಶ್ ಪದಗಳು ಸ್ವೀಕರಣಗೊಂಡಿವೆ.

ಆಧುನಿಕತೆಯಿಂದ ಅನೇಕ ಹೊಸ ಆವಿಸ್ಕಾರಗಳು ನಡೆದಿವೆ. ಹೀಗೆ ಬಂದ ಪದಗಳು ಯಾವ ಭಾಷೆಯ ಮೂಲದಿಂದ ಗುರುತಿಸಲಾಗಿದೆಯೋ ಹಾಗೆಯೆ ಕನ್ನಡದಲ್ಲೂ ಬಳಸುವುದನ್ನು ಗುರುತಿಸಲಾಗಿದೆ.

ಆಂಡಯ್ಯನಂತ ಕೆಲವರು ಸಂಸ್ಕೃತ ಪದಗಳನ್ನು ಕನ್ನಡೀಕರಿಸಿ ಬಳಸುವ ಪ್ರಯತ್ನ ಬಿಟ್ಟರೆ ಕನ್ನಡದಲ್ಲಿ ಇಂಗ್ಲಿಶ್ ಪದಗಳನ್ನು ಅನುವಾದಿಸಿ ಬಳಸಬೇಕೆನ್ನುವ ಅಥವಾ ಸ್ವೀಕರಿಸಿಕೊಂಡ ಪದಗಳಿಗೆ ಕನ್ನಡದಲ್ಲಿ ಹೊಸ ಪದಗಳನ್ನು ರಚಿಸಿಕೊಂಡದ್ದು ಬೇರೆ ಭಾಷೆಗಳ ವಿಷಯದಲ್ಲಿ ಕಂಡುಬರುವುದಿಲ್ಲ.

ಕನ್ನಡ ಬರವಣಿಗೆಯಲ್ಲಿ ಇಂಗ್ಲಿಶ್ ಭಾಷೆಯ ಪ್ರಭಾವದಿಂದ ಬರವಣಿಗೆ ಚಿನ್ನೆಗಳು ಕಂಡುಬಂದಿರುವುದನ್ನು ಗುರುತಿಸಲಾಗಿದೆ.

ಈ ಅಧ್ಯಯನವು ಈ ಹಿಂದೆ ವಿವಿಧ ಮೂಲಗಳಿಂದ ಪದಗಳನ್ನು ಸಂಗ್ರಹಿಸಿ ತಯಾರಿಸಿದ ನಿಘಂಟು, ಆಬ್ದಕೋಶ, ಪಾರಿಭಾಷಿಕ ಪದಕೋಶ ಮತ್ತು ಈ ಹಿಂದಿನ ಅಧ್ಯಯನಗಳ ಗುರುತಿಸಿರುವ ಹೊಸರಚನೆಗಳನ್ನು ಆಧಾರವಾಗಿಟ್ಟುಕೊಂಡು ಮತ್ತು ಕ್ಷೇತ್ರಕಾರ್ಯದ ಮೂಲಕ ಜನಬಳಕೆಯಿಂದ ಸಂಗ್ರಹಿಸಿದ ಪದಗಳ ಆಧಾರದ ಮೇಲೆ ಅಧ್ಯಯನವನ್ನು ರೂಪಿಸಲಾಗಿದೆ. ಇಲ್ಲಿಯ ಫಲಿತಗಳು ಈ ಅಧ್ಯಯನದ ಉದ್ದೇಶದ ಹಿನ್ನೆಲೆಯಲ್ಲಿ ಕೈಗೊಂಡ ಅಧ್ಯಯನದ ಫಲವಾಗಿರುತ್ತವೆ. ಬೇರೆ ದೃಷ್ಟಿಕೋನಗಳು ಅಧ್ಯಯನದ ಉದ್ದೇಶ ಮತ್ತು ಫಲಿತಗಳು ಬೇರೆಯಾಗಿರುವ ಸಾಧ್ಯತೆಗಳಿವೆ [redacted].

## ಪರಾಮರ್ಶನ ಗ್ರಂಥಗಳು


ಅಗರವಾಲ ಬಿ.ಆರ್., ೨೦೧೭ (ಮೂ.ಮು), ***ನಮ್ಮ ನ್ಯಾಯಾಂಗ,*** ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ

ಅನಂತನಾರಾಯಣ ಎಚ್. ಎಸ್., ೨೦೧೦. ***ಭಾಷಾ ವಿಶ್ಲೇಷಣೆ.*** ಸಂ. ಬಸವರಾಜ ಕೋಡಗುಂಟಿ. ಬಂಡಾರ ಪ್ರಕಾಶನ, ಮಸ್ಕಿ

ಆಚಾರ್ಯ ಎ .ಎಸ್., ೧೯೬೭. ***Halakki Kannada,*** ಡೆಕ್ಕನ್ ಕಾಲೇಜು, ಪೂನಾ

-----, ೧೯೭೧, ***Tipatur Kannada***, ಡೆಕ್ಕನ್ ಕಾಲೇಜು, ಪೂನಾ

-----, ೧೯೮೩, ***Rabakavi Kannada*** (Phonology and Morphology), ಡೆಕ್ಕನ್ ಕಾಲೇಜು, ಪೂನಾ

-----, ೨೦೦೩, ***ಇಂಗ್ಲೀಶ್–ಕನ್ನಡ ಭಾಷಾವಿಜ್ಞಾನ ಕೋಶ***, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಓಂಕಾರಪ್ಪ ಸಿ., ೧೯೯೪, ***Linguistics Analysis of Kumaravyasa Bharatha,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕಡಬಡ್ಡಿ ಬಿ.ಕೆ., ೧೯೭೯, ***Vaddaradhane: A Study,*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೧ನೇ ಸಂಪುಟ***, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೨ನೇ ಸಂಪುಟ***, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.

ಕನ್ನಡ ನಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೩ನೇ ಸಂಪುಟ,*** ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೪ನೇ ಸಂಪುಟ,*** ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೫ನೇ ಸಂಪುಟ,*** ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೬ನೇ ಸಂಪುಟ,*** ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೭ನೇ ಸಂಪುಟ,*** ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು–೮ನೇ ಸಂಪುಟ,*** ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು

ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೦೦೮(ಎಂಟನೇ ಮು.), ***ಸಂಕ್ಷಿಪ್ತ ಆಡಳಿತ ಪದಕೋಶ,*** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

ಕಲಬುರ್ಗಿ ಎಂ. ಎಂ., ೨೦೧೫, ***ಶಬ್ದಮಣಿದರ್ಪಣದ ಪ್ರತಿಬಿಂಬ,*** ಬಂಡಾರ ಪ್ರಕಾಶನ, ಮಸ್ಕಿ

ಕಾಲ್ಡ್‌ವೆಲ್ ರಾಬರ್ಟ್, ೨೦೦೦, (ಮರುಮುದ್ರಣ) ***A Comparative Grammar of Dravidian or South Indian Languages***, ಮದ್ರಾಸು ವಿಶ್ವವಿದ್ಯಾಲಯ, ಚನ್ನೈ

ಕಾಳೇಗೌಡ, ೧೯೯೩, ***Dharmamritam – A Linguistic Study,*** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋದನಾ ಪ್ರಬಂಧ. (ಅಪ್ರಕಟಿತ)

ಕಿಟೆಲ್ ಎಫ್. ರೆವರೆಂಡ್, ೧೯೯೩, (ಎರಡನೆಯ ಎ.ಇ.ಎಸ್. ಮರುಮುದ್ರಣ), (ಮೊ.ಮು. ೧೯೦೩), ***A Grammar of the Kannada Language - Comprising the Three Dialects of the Language*** (Ancient, Medieval and Modern). ಏಸಿಯಾನ್ ಎಜುಕೇಶನಲ್ ಸರ್ವಿಸಸ್, ನವದೆಹಲಿ–ಮದ್ರಾಸು.

-----, ೨೦೦೪(ಹನ್ನೊಂದನೆಯ ಮುದ್ರಣ), ***A Kannada - English Dictionary,*** ಏಸಿಯಾನ್ ಎಜುಕೇಶನಲ್ ಸರ್ವಿಸಸ್, ನವದೆಹಲಿ–ಚನ್ನೈ

ಕುಲಕರ್ಣಿ ಪ್ರ. ಗೋ., ೧೯೬೭, ***ಕನ್ನಡ ಭಾಷೆಯ ಚರಿತ್ರೆ,*** ಪಿ.ಜಿ. ಕುಲಕರ್ಣಿ, ಬೆಳಗಾವಿ

ಕುಶಾಲಪ್ಪ ಗೌಡ ಕೆ., ೧೯೭೦, ***Gowda Kannada,*** ಅಣ್ಣಾಮಲಯ್ ವಿಶ್ವವಿದ್ಯಾಲಯ, ಅಣ್ಣಾಮಲಯ್ ನಗರ

-----, ೧೯೮೪, ***ಕನ್ನಡ ಭಾಷಾವಲೋಕನ,*** ಮದ್ರಾಸ್ ವಿಶ್ವವಿದ್ಯಾಲಯ, ಚೆನ್ನಯ್

-----, ೨೦೦೭, ***ಕನ್ನಡ ಸಂಕ್ಷಿಪ್ತ ವ್ಯಾಕರಣ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೃಷ್ಣಯ್ಯ ಕೆ. ಎಮ್., ೧೯೭೪(ದ್ವಿಮು), ***ಕನ್ನಡ ಭಾಷಾ ಸ್ವರೂಪ,*** ಉಷಾ ಸಾಹಿತ್ಯ ಮಾಲೆ, ಮೈಸೂರು.

ಕೃಷ್ಣಯ್ಯ ಎಮ್. ಎಸ್., ೨೦೧೨(ಆರನೆ ಮು), ***ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ,*** ಅಂಕಿತ ಪುಸ್ತಕ, ಬೆಂಗಳೂರು.

ಕುಳ್ಳಿ ಜಿ. ಎಸ್., ೧೯೭೧, ***ವರ್ಣನಾತ್ಮಕ ಭಾಷಾವಿಜ್ಞಾನ,*** ಸಿರಿಗನ್ನಡ ಪ್ರಕಾಶನ, ಧಾರವಾಡ

-----, ೧೯೭೩, ***ಐತಿಹಾಸಿಕ ಭಾಷಾವಿಜ್ಞಾನ,*** ಸಿರಿಗನ್ನಡ ಪ್ರಕಾಶನ, ಧಾರವಾಡ.

-----, ೧೯೭೬, ***Keshiraja's SabdamaNidarpaNa: A Linguistics Analysis.*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

-----, ೧೯೯೧, ***History of Grammatical Theories in Kannada.*** ಅಂತಾರಾಷ್ಟ್ರೀಯ ದ್ರಾವಿಡ ಭಾಷಾವಿಜ್ಞಾನ ಸಂಸ್ಥೆ, ತಿರುವನಂತಪುರಂ.

ಕೆಂಪೇಗೌಡ ಕೆ., ೧೯೭೪, ***A descriptive analysis of Irula dialect,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

-----, ೧೯೯೦, ***ವಾಕ್ಯವಿಜ್ಞಾನ,*** ಭಾಷಾ ವಿಜ್ಞಾನ ಭಾರತಿ, ಮೈಸೂರು

-----, ೧೯೯೬, ***ಸಾಮಾನ್ಯ ಭಾಷಾವಿಜ್ಞಾನ,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

-----, ೧೯೯೭, ***ಕನ್ನಡ ಭಾಷಾ ಸ್ವರೂಪ,*** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲನಿಯ, ಮೈಸೂರು

-----,೨೦೦೭(ಮೂ.ಮು), ***ಕನ್ನಡ ಭಾಷೆಯ ಚರಿತ್ರೆ,*** ನವಭಾರತಿ ಪ್ರಕಾಶನ, ಮೈಸೂರು

ಕೆದಿಲಾಯ ಶಂಕರ ಎ., ೧೯೭೦, ***Foreign lone words in Kannada*** *(Arabic and Persian),* ಯುನಿವರ್ಸಿಟಿ ಆಫ್ ಮದ್ರಾಸ, ಮದ್ರಾಸ.

ಕೋಡಗುಂಟಿ ಬಸವರಾಜ, ೨೦೦೮, ***ಮಸ್ಕಿ ಕನ್ನಡದಲ್ಲಿ ಬಿಲ್ಡಿಂಗ್ ಪದ,*** *ಮಕ್ಕಳ ಭಾಷಾ ವಿಜ್ಞಾನ ಮತ್ತು ಇತರ ಲೇಖನಗಳು,* ಬಂಡಾರ ಪ್ರಕಾಶನ, ಮಸ್ಕಿ

-----, ೨೦೧೧, ***ಕನ್ನಡ ವಿಬಕ್ತಿ ರೂಪಗಳ ಐತಿಹಾಸಿಕ ಬೆಳವಣಿಗೆ,*** ಬಂಡಾರ ಪ್ರಕಾಶನ, ಮಸ್ಕಿ

-----, ೨೦೧೧, ***ಕನ್ನಡ ವಿಬಕ್ತಿ ರೂಪಗಳು,*** ಬಂಡಾರ ಪ್ರಕಾಶನ, ಮಸ್ಕಿ

ಗಂಗಾನಾಯಕ್ ಕೆ.ಎನ್., ೨೦೧೨, ***ಕನ್ನಡದಲ್ಲಿ ಅನ್ಯಭಾಷಾ ಪದನಿಷ್ಪತ್ತಿ ಕೋಶ*** ಸಂಪುಟ-೧, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

-----, ೨೦೧೨, ***ಕನ್ನಡದಲ್ಲಿ ಅನ್ಯಭಾಷಾ ಪದನಿಷ್ಪತ್ತಿ ಕೋಶ*** ಸಂಪುಟ-೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲನಿಯ, ಮೈಸೂರು.

ಗಾಯಿ ಜಿ.ಎಸ್., ೧೯೪೬, ***Historical Grammar of Old Kannada,*** ಡೆಕ್ಕನ್ ಕಾಲೇಜು, ಪೂನಾ

ಗಿರಿದರ ಪಿ. ಪಿ., ೧೯೯೬, ***A Case Grammar of Kannada***, ಭಾರತೀಯ ಭಾಷಾ ಸಂಸ್ಥಾನ, ಮೈಸೂರು

ಗೋವಿಂದರಾಜ ಗಿರಡ್ಡಿ, ೧೯೯೮, ಕನ್ನಡ ಡೈಗ್ಲಾಸಿಯಾ, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ

ಚಂದ್ರು ಮುಖ್ಯಮಂತ್ರಿ, ಮುರಿಗೆಪ್ಪಾ ಎ.(ಪ್ರ. ಸಂ.) ಮತ್ತು ಇತರರು(ಸಂ.), ೨೦೧೦, ***ಆಡಳಿತ ಕನ್ನಡ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿದಾನಂದ ಮೂರ್ತಿ ಎಮ್., ೨೦೧೨(ಹನ್ನೆರಡನೇ ಮು.), ***ಭಾಷಾವಿಜ್ಞಾನದ ಮೂಲತತ್ವಗಳು,*** ಡಿ.ವಿ.ಕೆ. ಮೂರ್ತಿ ಪ್ರಕಾಶಕ, ಮೈಸೂರು.

-----, ೨೦೧೪(ಆರನೇ ಮು.), ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** ಸಪ್ನ ಬುಕ್ ಹೌಸ್, ಬೆಂಗಳೂರು

ಜಗದೀಶ, ೨೦೦೫, ***Measurement system in Karnataka,*** ಡೈರಕ್ಟ್‌ರೇಟ್ ಆಫ್ ಆರ್ಕಿಯಾಲಜಿ ಆಂಡ್ ಮ್ಯೂಜಿಯಂ, ಹೊಸಪೇಟೆ

ಜವರಾಗೌಡ ದೆ. ೧೯೬೭, ***ಸುವರ್ಣ ಸಂಚಯ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ತಳವಾರ ಆರ್. ಮಾರುತಿ, ***Harijan Dialect of Kannada in Belagam District: a Linguistic Analysis,*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇಲ್ಲಿಗೆ ಪ್ರಸ್ತುತಪಡಿಸಿದ ಪಿಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ)

ತಿಪ್ಪೇರುದ್ರಸ್ವಾಮಿ ಎಚ್. ೨೦೧೬(ಹದಿನಾಲ್ಕನೇ ಮು.), ***ಕರ್ನಾಟಕ ಸಂಸ್ಕೃತಿ ಸಮೀಕ್ಷೆ,*** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

ತಿರುಮಲೇಶ್ ಕೆ. ವಿ., ೧೯೭೬, ***The passive in English and Kannada-A cross linguistic study,*** ಇಂಗ್ಲೀಶ್ ಮತ್ತು ವಿದೇಶಿ ಭಾಷೆಗಳ ಸಂಸ್ಥೆ, ಹೈದ್ರಬಾದ ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋದನಾ ಮಹಾಪ್ರಬಂಧ (ಅಪ್ರಕಟಿತ)

ದೇವರಾಜ, ಉಮರ್ಜಿ ಆರ್., ೧೯೬೯, ***Kannada Language its origin and development,*** ಕರ್ನಾಟಕ ಇತಿಹಾಸ ಮಂಡಳ, ಧಾರವಾಡ

ಧಾರವಾಡಕರ್ ರಾ.ಯ., ೧೯೯೮ (ಎಂಟನೇ ಪರಿಸ್ಕೃತ ಮು.), ***ಕನ್ನಡ ಭಾಷಾಶಾಸ್ತ್ರ,*** ಗಿತಾ ಬುಕ ಹೌಸ, ಮೈಸೂರು.

ನರಸಿಂಗರಾವ್ ನಿರಮಾನ್ವಿ, ೨೦೧೪. ***ನಡುಗನ್ನಡ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ನರಸಿಂಹಾಚಾರ್ಯ ಆರ್., ೧೯೯೦ (ಮರು ಮು.) ***History of Kannada Language,*** ಏಸಿಯಾನ್ ಎಜುಕೇಶನಲ್ ಸರ್ವಿಸಸ್, ನವದೆಹಲಿ–ಚನ್ನೈ
ನರಸಿಂಹಮೂರ್ತಿಎ.ವಿ., ೨೦೦೮, ***ಭಾರತೀಯ ನಾಣ್ಯ ಪರಂಪರೆ,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
ನರಸಿಂಹಯ್ಯ ಆರ್., ೧೯೬೯, ***History of Kannada Language,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
ನಾಗಭೂಷಣ ಸ್ವಾಮಿ ಓ. ಎಲ್., ೨೦೧೧, **ವಿಮರ್ಶೆಯ ಪರಿಭಾಷೆ,** ವಿಶ್ವಕನ್ನಡ ಸಮ್ಮೇಳನ ಸಾಹಿತ್ಯಮಾಲೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು–೦೨
ನಾಯಕ ಹಾ. ಮಾ., ೧೯೬೯, ***Kannada Literary and Colloquial: A Study of Two Styles,*** ರಾವ್ ಮತ್ತು ಭಗವಾನ್, ಮೈಸೂರು
ನಾರಾಯಣ ಕೆ.ವಿ., ೧೯೯೩, ***ಕನ್ನಡಶೈಲಿ ಕೈಪಿಡಿ,*** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
-----, ೨೦೦೧, ***ಮತ್ತೆ ಭಾಷೆಯ ಸುತ್ತಮುತ್ತ,*** ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು
-----, ೨೦೦೯(ದ್ವಿಮು), ***ಕನ್ನಡ ಜಗತ್ತು ಅರ್ಧಶತಮಾನ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
-----, ೨೦೧೧, ***ತೊಂಡು ಮೇವು ಕಂತೆ–೩,*** ಬರಹ ಪಬ್ಲಿಷಿಂಗ ಹೌಸ, ಬೆಂಗಳೂರು.
-----, ೨೦೧೩, ***ಬಳಕೆಯ ಸಂಸ್ಕೃತ ಪದಗಳಿಗೆ ಕನ್ನಡ ಪದಗಳು,*** ಪ್ರಗತಿ ಗ್ರಾಫಿಕ್ಸ್, ಬೆಂಗಳೂರು
ನಾರಾಯಣ ಕೆ. ವಿ. ಮತ್ತು ಇತರರು(ಸಂ), ೨೦೦೯, ***ಭಾಷೆ,*** ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
ನೇಗಿನಹಾಳ ಎಂ.ಬಿ., ೧೯೮೨, ***ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ,*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಪರಮೇಶ್ವರಿ ಲಾಲ ಗುಪ್ತಾ, ೨೦೧೬, ***Coins,*** ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ
ಪಾಂಡುರಂಗ ಬಾಬು, ೨೦೦೩, ***ನುಡಿನೋಟ,*** ಆಕಾಶ ಪ್ರಕಾಶನ, ಹೊಸಪೇಟೆ
ಪಾರ್ವತೀಶ, ೨೦೦೯, ***some ಪದ,*** ಚಾರು ಪ್ರಕಾಶನ, ಬೆಂಗಳೂರು–೦೪
ಪಾಷ ಅಬ್ದುಲ್ ರೆಹಮಾನ, ನಾಗವೇಣಿ ಎಸ್.(ಸಂ),೨೦೦೧(ಎ.ಮು), ***ನವಕರ್ನಾಟಕ ಆಡಳಿತ ಪದಕೋಶ.*** ನವಕರ್ನಾಟಕ ಪ್ರಕಾಶನ, ಬೆಂಗಳೂರು–೦೧
ಪೊಲಾಕ್ ಶೆಲ್ಡನ್, ೨೦೦೦, ***ದೇಶ ಭಾಷಾ ನಿರ್ಮಾಣ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪೋಲಿಸ ಪಾಟೀಲ ಬಸವರಾಜ(ಸಂ.), ೨೦೦೩, ***ಭಾಷಾ ವ್ಯಾಸಂಗ,*** ಡಾ. ಸಂಗಮೇಶ ಸವದತ್ತಿಮಠ ಅಭಿನಂದನ ಸಮಿತಿ ಕಲಬುರ್ಗಿ.

ಬಟ್ ಡಿ.ಎನ್.ಶಂಕರ, ೧೯೬೯, ***ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ,*** ಬಾಶಾ ಪ್ರಕಾಶನ, ಹೆಗ್ಗುಡು

-----, ೧೯೭೨, ***sound change,*** ಬಾಶಾ ಪ್ರಕಾಶನ, ಹೆಗ್ಗೋಡು

-----, ೧೯೯೫, ***ಕನ್ನಡ ಭಾಷೆಯ ಕಲ್ಪಿತ ಚರಿತ್ರೆ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

-----, ೨೦೦೯(ದ್ವಿಮು.), ***ಕನ್ನಡ ನುಡಿ ನಡೆದು ಬಂದ ದಾರಿ,*** ಬಾಶಾ ಪ್ರಕಾಶನ, ಹೆಗ್ಗುಡು.

-----, ೨೦೧೦(ಮೂ.ಮು. ಪರಿಸ್ಕೃತ), ***ಕನ್ನಡ ಪದಗಳ ಒಳರಚನೆ,*** ಬಾಶಾ ಪ್ರಕಾಶನ, ಗಡಿಕಲ್ಲು, ಕೊಪ್ಪ.

-----, ೨೦೧೦, ***ಕನ್ನಡ ಬರಹದ ಸೊಲ್ಲರಿಮೆ– ೧,*** ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

-----, ೨೦೧೧, ***ಕನ್ನಡ ಬರಹದ ಸೊಲ್ಲರಿಮೆ– ೨,*** ಬಾಶಾ ಪ್ರಕಾಶನ, ಬಿಲ್ಲೇಶರ, ಹುಂಚ.

-----, ೨೦೧೨, ***ಕನ್ನಡ ಬರಹದ ಸೊಲ್ಲರಿಮೆ– ೩,*** ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

-----, ೨೦೧೩, ***ಕನ್ನಡ ಬರಹದ ಸೊಲ್ಲರಿಮೆ–೪,*** ಡಿ.ಎನ್.ಎಸ್. ಬಟ, ಬಿಮನ ಕೊಣೆ, ಹೆಗ್ಗೋಡು, ಸಾಗರ.

-----, ೨೦೧೪, ***ಕನ್ನಡದಲ್ಲೇ ಹೊಸಪದಗಳನ್ನು ಕಟ್ಟುವ ಬಗೆ,*** ಸಪ್ನಾ ಬುಕ್ ಹೌಸ್ ಬೆಂಗಳೂರು.

-----, ೨೦೧೫, ***ಕನ್ನಡ ಬರಹದ ಸೊಲ್ಲರಿಮೆ–೫,*** ನವಕರ್ನಾಟಕ ಪ್ರಕಾಶನ, ಬೆಂಗಳೂರು

-----, ೨೦೧೮, ***ಕನ್ನಡ ಬರಹದ ಸೊಲ್ಲರಿಮೆ–೬,*** ನವಕರ್ನಾಟಕ ಪ್ರಕಾಶನ, ಬೆಂಗಳೂರು

-----,೨೦೧೯, ***ಕನ್ನಡ ವಾಕ್ಯಗಳ ಒಳರಚನೆ ಮತ್ತು ಅರ್ಥವ್ಯವಸ್ಥೆ,*** ಡಿ.ಎನ್.ಶಂಕರ ಭಟ್ಟ, ಸಾಗರ

ಬಟ್ ಡಿ.ಎನ್.ಶಂಕರ, ಭರತ್ ಕುಮಾರ ಯೋ ಮತ್ತು ವಿವೇಕ ಶಂಕರ, ೨೦೧೫, ***ಇಂಗ್ಲಿಶ್ – ಕನ್ನಡ ಪದನೆರಕೆ,*** ನವಕರ್ನಾಟಕ ಪ್ರಕಾಶನ, ಬೆಂಗಳೂರು

ಬಟಗೇರಿ ರವೀಂದ್ರ, ೨೦೧೩, ***ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು*** (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಕ್ಕೆ ಸಲ್ಲಿಸಿದ ಎಂ.ಫಿಲ್ ಸಂಪ್ರಬಂಧ.

-----, *೨೦೧೮, **ಪದ ಪುರಾಣ,** ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು*

ಬಣಕಾರ ಮಹದೇವ, ೧೯೮೬, ***ಆಂಗ್ಲರ ಆಡಳಿತದಲ್ಲಿ ಕನ್ನಡ,*** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

ಬರೊ ಟಿ. ಮತ್ತು ಎಮಿನೊ ಎಮ್.ಬಿ.. ೧೯೮೪, (ಎರಡನೆಯ ಮು.) ***A Dravidian Etymological Dictionary*,** ಕ್ಲಾರೆಂಡನ್ ಮುದ್ರಣಾಲಯ, ಆಕ್ಸ್‌ಪರ್ಡ

ಬಿಳಿಗಿರಿ ಎಚ್.ಎಸ್., ೧೯೭೦, ***ವರ್ಣನಾತ್ಮಕ ವ್ಯಾಕರಣ.*** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

-----, ೧೯೯೫, ***ಕನ್ನಡದಲ್ಲಿ ಸ್ವೀಕರಣ ಪದಗಳ ವರ್ಣ ವಿನ್ಯಾಸ,*** ವರಸೆಗಳು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.
ಭೀಮಸೇನರಾವ್ ಡಿ.ಕೆ., ೧೯೭೭. ***ಕೇಶಿರಾಜ ವಿಚಿರತ ಶಬ್ದಮಣಿದರ್ಪಣಂ.*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
-----. ೧೯೯೮. ***ಕನ್ನಡ ಭಾಷೆಯ ಇತಿಹಾಸ.*** ಡಿ.ವಿ.ಕೆ ಮೂರ್ತಿ, ಮೈಸೂರು.
ಮಂಜುನಾಥ ಸಿ.ಯು, ೨೦೧೨, ***ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ,*** ಚಿತ್ಕಲ ಪ್ರಕಾಶನ, ಕುಪ್ಪಂ.
ಮಹಾದೇವನ್ ಆರ್. ೧೯೬೮. ***Gulbarga Kannada*** (Brahmin Dialect). ಡೆಕ್ಕನ್ ಕಾಲೇಜು, ಪೂನಾ.
ಮಹೇಶ್ವರಯ್ಯ ಎಚ್.ಎಂ. ೧೯೮೦. ***Linguistic analysis of Divara Kannada of Shimoga district.*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋಧನಾ ಪ್ರಬಂಧ (ಅಪ್ರಕಟಿತ)
ಮಾಡ್ತ ವಿಲಿಯಮ್. ೧೯೭೫. ***ಕನ್ನಡ ಭಾಷೆಯ ರೂಪರೇಷಗಳು.*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
-----, ೧೯೯೮. ***ಕನ್ನಡ ವ್ಯಾಕರಣ ಸಮಸ್ಯೆಗಳು – ಭಾಷಾವೈಜ್ಞಾನಿಕ ವಿಶ್ಲೇಷಣೆ.*** ವಿದ್ಯಾನಿದಿ ಪ್ರಕಾಶನ, ಗದಗ.
ಮುಖ್ಯಮಂತ್ರಿ ಚಂದ್ರು, ಮುರಿಗೆಪ್ಪ ಎ. ಮತ್ತು ಇತರರು, ೨೦೧೦, ***ಆಡಳಿತ ಕನ್ನಡ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ಮುಗಳಿ ಆರ್.ಆರ್. ೧೯೬೪. ***The Mysore and Dharwar Kannada dialects- A comparative study.*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋಧನಾ ಮಹಾಪ್ರಬಂಧ. ಅಪ್ರಕಟಿತ.
ಮುಗಳಿ ರಂ. ಶ್ರೀ., ೧೯೪೧, ***ಕನ್ನಡಕ್ಕೂ ಉಳಿದ ಭಾಷೆಗಳಿಗೂ ಸಂಬಂಧ,*** ಜಿವನ, ೨:೪. ೨೫೧
ಮುತ್ತಯ್ಯ ಎಸ್. ಪಿ., ಸತ್ಯನಾರಾಯಣ ಟಿ. ಎಸ್. ಮತ್ತು ಇತರರು, ೧೯೯೪, ***ಪಾರಿಭಾಷಿಕ ಪದಕೋಶ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,*** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–೦೨
ಮುರಿಗೆಪ್ಪ ಎ. ೧೯೭೯. ***Linguistic analysis of colloquial dialect in Bidar district.*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋಧನಾ ಮಹಾಪ್ರಬಂಧ. ಅಪ್ರಕಟಿತ.

ಮೋಹನ ಕೃಷ್ಣ ರೈ, ೨೦೦೪, ***ಪ್ರಭುತ್ವ ಮತ್ತು ಜನತೆ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಯುಸಿಡಾ ಎನ್., ರಾಜಪುರೋಹಿತ ಆರ್.ಬಿ.೨೦೧೩, **Kannada English Etymological dictionary,** ರಿಸರ್ಚ್ ಇನ್ಸಿಟಿಟ್ಯೂಟ್ ಆಫ್ ಲಾಂಗ್ವೇಜ್ ಆಂಡ್ ಕಲ್ಚರ್ ಆಫ್ ಸೌತ್‌ಏಶಿಯಾ ಆಂಡ್ ಆಫ್ರೀಕಾ, ಟೋಕಿಯೊ ಯುನಿವರ್ಶಿಟಿ ಆಫ್ ಫೊರಿನ್, ಟೋಕಿಯೊ

ರಾಘವೇಂದ್ರರಾವ್ ಎಚ್. ಎಸ್. (ಸಂ), ೨೦೧೩, ***ರಂ. ಶ್ರೀ. ಮುಗಳಿ ಸಮಗ್ರ ಸಾಹಿತ್ಯ, ಸಂಪುಟ–೨, ಭಾಗ–೨,*** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

ರಾಜಪುರೋಹಿತ ಬಿ.ಬಿ. ೧೯೭೦. ***South Canara dialect of Kannada.*** ಕೇರಳ ವಿಶ್ವವಿದ್ಯಾಲಯ, ತಿರುವನಂತಪುರ.

-----, ೧೯೬೪. ***A Grammar of Vacana Literature.*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋಧನಾ ಮಹಾಪ್ರಬಂಧ. ಅಪ್ರಕಟಿತ.

-----, ೨೦೦೫. ***ಭಾಷೆ ಮತ್ತು ಅರ್ಥಗಳ ಗುಟ್ಟು.*** ಪ್ರಕಾಶಕ, ಬಿ.ಬಿ. ರಾಜಪುರೋಹಿತ, ಮೈಸೂರು.

-----, ೨೦೦೯. ***ಧ್ವನಿಯ ಶ್ರಾವಣ ಮತ್ತು ಚಾಕ್ಷುಶ ರೂಪಗಳು.*** ಬಂಡಾರ ಪ್ರಕಾಶನ, ಮಸ್ಕಿ.

-----. ೨೦೧೦. ***ಧ್ವನಿವಿಜ್ಞಾನ.*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

-----, (ಸಂ), ೨೦೧೧, ***ಶಬ್ದಾದರ್ಶವೆಂಬ*** ಹೊಸಗನ್ನಡ ವ್ಯಾಕರಣವು, ಬಂಡಾರ ಪ್ರಕಾಶನ, ಮಸ್ಕಿ.

ರಾಜಾರಾಮ್. ೧೯೬೭. ***A comparative analysis of Tamil and Kannada.*** ಅಣ್ಣಾಮಲಯ್ ವಿಶ್ವವಿದ್ಯಾಲಯ, ಅಣ್ಣಾಮಲಯ್ ನಗರ ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋಧನಾ ಮಹಾಪ್ರಬಂಧ. ಅಪ್ರಕಟಿತ.

ರಾಮಕೃಷ್ಣ ಆರ್. ೧೯೮೬. ***Sri Ramayana Darshanam: A Linguistic Study.*** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಇಲ್ಲಿಗೆ ಪ್ರಸ್ತುತಪಡಿಸಿದ ಪಿಎಚ್.ಡಿ. ಮಹಾಪ್ರಬಂಧ. ಅಪ್ರಕಟಿತ.

ರಾಮಚಂದ್ರ ರಾವ್ ಬಿ.. ೧೯೭೨. ***A Comparative Grammar of Pampa Bharata.*** ಮೈಸೂರು ವಿಶ್ವವಿದ್ಯಾಲಯ, ಮೈಸೂರು

-----, ೧೯೯೮, ***ಕನ್ನಡ ಭಾಷೆಯ ಇತಿಹಾಸ,*** ಡಿ.ವಿ.ಕೆ. ಮೂರ್ತಿ ಪ್ರಕಾಶಕ, ಮೈಸೂರು.

ರಾಮಚಂದ್ರನ್ ಸಿ. ಎನ್., ೨೦೦೮(ಐದನೇ ಆವೃತ್ತಿ), ***ಸಾಹಿತ್ಯ ಪಾರಿಭಾಷಿಕ ಮಾಲೆ, ಸಾಹಿತ್ಯ ವಿಮರ್ಶೆ,*** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು– ೦೨

ರಾಮಚಂದ್ರ ಸಿ.ಎಸ್. ೧೯೮೪. ***A Linguistic Analysis of the Kīrtanas of Haridāsas in Kannada***. ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಇಲ್ಲಿಗೆ ಪ್ರಸ್ತುತಪಡಿಸಿದ ಪಿಎಚ್.ಡಿ. ಮಹಾಪ್ರಬಂಧ. ಅಪ್ರಕಟಿತ.

-----, ೨೦೦೪, ***ಚಾರಿತ್ರಿಕ ಭಾಷಾವಿಜ್ಞಾನ ಮೂಲತತ್ವ ಹಾಗು ವಿಧಾನಗಳು***, ಸಾರಾ ಎಂಟರ್ ಪ್ರೈಸಸ್, ಮೈಸೂರು.

ರಾಮಚಂದ್ರ ಬಿ.ವಿ., ೨೦೧೩, ***Numerals and Eclipses in Indian Epigraphy***, ಇಂಡಿಯನ್ ಕೌನ್ಸಿಲ್ ಆಫ್ ಹಿಸ್ಟೋರಿಕಲ್ ರಿಸರ್ಚ್, ದಕ್ಷಿಣ ಸ್ಥಳೀಯ ಕೇಂದ್ರ, ಬೆಂಗಳೂರು

ರಾಮಸ್ವಾಮಿ ಚೆ. ೧೯೭೪. ***The language of Kannada inscriptions of Northern Kannada from 1000 to 1400 AD***. ಅಣ್ಣಾಮಲಯ್ ವಿಶ್ವವಿದ್ಯಾಲಯ, ಅಣ್ಣಾಮಲಯ್ ನಗರ ಇಲ್ಲಿಗೆ ಪ್ರಸ್ತುತ ಪಡಿಸಿದ ಸಂಶೋಧನಾ ಮಹಾಪ್ರಬಂಧ. ಅಪ್ರಕಟಿತ.

ವಿನ್‌ಫ್ರೆಡ್ ಪಿ. ಲೆಹಮನ್, ೧೯೬೬, ***Historical linguistic: an introduction***, ಆಕ್ಸಫರ್ಡ್ ಅಂಡ್ ಐಬಿಎಚ್ ಪಬ್ಲಿಶಿಂಗ್ ಕೋ. ನವದೆಹಲಿ.

ವೆಂಕಟನಾರಾಯಣ ಬಿ. ಜಿ., ೧೯೯೪, ***ಪಾರಿಭಾಷಿಕ ಪದಕೋಶ, ವೃತ್ತಿ ಶಿಕ್ಷಣ ಇಲಾಖೆ***, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೦೨

ವೆಂಕಟಸುಬ್ಬಯ್ಯ ಜಿ., ೨೦೧೦, ***ಎರವಲು ಪದಕೋಶ***, ನವಕರ್ನಾಟಕ ಪ್ರಕಾಶನ, ಬೆಂಗಳೂರು.

-----. ೨೦೧೦, ***ಶಬ್ದ ಮತ್ತು ಅರ್ಥ***, ಅಭಿವ್ಯಕ್ತಿ ಪ್ರಕಾಶನ, ಬೆಂಗಳೂರು

-----. ೨೦೧೩, ***ಇಗೋ ಕನ್ನಡ ಸಾಮಾಜಿಕ ನಿಘಂಟು***(ಸಂಯುಕ್ತ ಸಂಪುಟ), ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಶಂಕ್ರಪ್ಪ, ೨೦೦೮, ***ಕನ್ನಡ ದಿನಪತ್ರಿಕೆಯಲ್ಲಿ ಅನ್ಯಭಾಷೆ ಬಳಕೆ***, (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಕ್ಕೆ ಸಲ್ಲಿಸಿದ ಎಂ.ಫಿಲ್ ಸಂಪ್ರಬಂಧ.

ಶಾಸ್ತ್ರಿ ಕೆ.ಜಿ. ೧೯೭೧. ***The Havyaka Dialect of North Kanara.*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಾಸ್ತ್ರೀ ಪಿ. ವಿ., ೧೯೭೩, ***ಸಾಹಿತ್ಯದ ಪ್ರಕಾರಗಳು***, *ಸಮಾಜ ಪುಸ್ತಕಾಲಯ, ಧಾರವಾಡ-೦೧*

ಶಿವಾನಂದ ವಿ. ೧೯೮೧, ***ಭಾಷಾ ವೈಜ್ಞಾನಿಕ ನೇಲೆಯಲ್ಲಿ ಪದಗಳ ಚರಿತ್ರೆ***, ಧ್ವನಿ-ಪ್ರತಿಮಾ ಪ್ರಕಾಶನ, ಕಲಬುರ್ಗಿ.

ಶ್ರೀಕಂಠಯ್ಯ ತಿ.ನಂ., ೧೯೫೬, ***Note on Lone and native replacements in Kannada***, ಆಮೇರಿಕನ್ ಆಥ್ರೋಪೊಲಾಜಿಸ್ಟ್, ೫೮, ೨. ३೦೬

ಶ್ರೀಧರ ಎಸ್. ಎನ್., ೨೦೧೧ (ಮೂ.ಮು), ***ಇಂದಿನ ಕನ್ನಡ ರಚನೆ ಮತ್ತು ಬಳಕೆ***, ಅಭಿನವ ಪ್ರಕಾಶನ, ಬೆಂಗಳೂರು.

ಶ್ರೀಧರ ಎಸ್. ಎನ್., ೨೦೧೧ (ಮೂ.ಮು), ***ಇಂದಿನ ಕನ್ನಡ ರಚನೆ ಮತ್ತು ಬಳಕೆ,*** ಅಭಿನವ ಪ್ರಕಾಶನ, ಬೆಂಗಳೂರು.

-----, ೨೦೦೭, ***Modern Kannada Grammar***, ಮನೋಹರ, ನವದೇಹಲಿ

-----, ಮತ್ತು ಕುಳ್ಳಿ ಜೆ.ಎಸ್., ೧೯೮೧. ***Papers in Kannada linguistics***. ಶರತ್ ಪ್ರಕಾಶನ, ಮೈಸೂರು.

ಸತ್ಯನಾರಾಯಣ ರಾ., ೧೯೮೬, ***ಭಾರತೀಯ ಸಂಗೀತದಲ್ಲಿ ಪರಿಭಾಷಾ ಪ್ರಯೋಗ,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಸಾಂಬಮೂರ್ತಿ, ೨೦೦೬, ***ಕನ್ನಡದಲ್ಲಿ ಪ್ರತ್ಯಯಗಳು,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

———, ೨೦೧೦, ***ಕನ್ನಡ ಕ್ರಿಯಾರಚನೆ-ಬಗೆಗಳು,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಸಾಸನೂರು ಬಿ. ಟಿ. (ಅಧ್ಯಕ್ಷರು), ೧೯೯೨, ***ಪಾರಿಭಾಷಿಕ ಪದಕೋಶ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ,*** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೦೨

-----,೧೯೯೩, ***ಪಾರಿಭಾಷಿಕ ಪದಕೋಶ, ಅರಣ್ಯ ಇಲಾಖೆ,*** ಕನ್ನಡ ಮತ್ತು ಸಂಸ್ಕೃತಿ ನರ್ದೇಶನಾಲಯ, ಬೆಂಗಳೂರು-೦೨

-----, ೧೯೯೩, ***ಪಾರಿಭಾಷಿಕ ಪದಕೋಶ, ಕಾರಾಗ್ರಹ ಇಲಾಖೆ,*** ಕನ್ನಡ ಮತ್ತು ಸಂಸ್ಕೃತಿ ನರ್ದೇಶನಾಲಯ, ಬೆಂಗಳೂರು-೦೨

ಸೂಗಣ್ಣ ಮಲ್ಲಿಕಾರ್ಜುನ, ೨೦೦೬, ***ಕನ್ನಡ ದಿನಪತ್ರಿಕೆಗಳಲ್ಲಿ ಕ್ರೀಡಾಪುಟದ ಭಾಷೆ*** (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಕ್ಕೆ ಸಲ್ಲಿಸಿದ ಎಂ.ಫಿಲ್ ಸಂಪ್ರಬಂಧ.

ಹಾವನೂರ ಶ್ರೀನಿವಾಸ, ೨೦೧೧(ಪರಿಷ್ಕೃತ ಮೂ.ಮು.), ***ಹೊಸಗನ್ನಡ ಅರುಣೋದಯ,*** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೦೨

ಹಿರೇಮಠ ಆರ್.ಸಿ. ೧೯೬೧. ***The Structure of Kannada***. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹುಲೆಪ್ಪ ಸಂಡೂರು, ೨೦೦೬, ***ದೂರದರ್ಶನದಲ್ಲಿ ಕ್ರೈಂ ನ್ಯೂಸ್ ಭಾಷಿಕ ಅಧ್ಯಯನ*** (ಕನ್ನಡ ವಾಹಿನಿಗಳನ್ನು ಅನುಲಕ್ಷಿಸಿ), (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಕ್ಕೆ ಸಲ್ಲಿಸಿದ ಎಂ.ಫಿಲ್ ಸಂಪ್ರಬಂಧ.

